

ಚರಿತ್ರೆ ವಿಭಾಗ ಮಾಲೆ-೨

# ಜಲಸಂಬಂಧಿ ಚಳವಳಿಗಳು

ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ-೨


ವಿರೂಪಾಕ್ಷಿ ಪೂಜಾರಹಳ್ಳಿ





ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೆರೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ
ರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ(ಂ)
ಯೆರೆದಳ್ವಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

– ಲಕ್ಷ್ಮೀಧರನ ಶಾಸನ

ಚರಿತ್ರೆ ವಿಭಾಗ ಮಾಲೆ - ೨

# ಜಲಸಂಬಂಧಿ ಚಳವಳಿಗಳು

## ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ - ೨

ವಿರೂಪಾಕ್ಷಿ ಪೂಜಾರಹಳ್ಳಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**JALASAMBANDHI CHALAVALIGALU**
A Study of Water Dispute Movements
by Virupakshi Poojarahalli
Lecturer, Department of History
Kannada University, Hampi
(Post Unification Karnataka Movements Series, Vol. 2)

*Published by*
Prof. A. V. Navada
Director, Prasaranga
Kannada University, Hampi
Vidyaranya - 583 276

Pages : xii+144

First Edition 1999

Price : Rs. 70/-



ಪ್ರಕಾಶಕರು
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬೆಲೆ : ರೂ. ೭೦/-

ಮುಖಪುಟ : ಕೆ. ಕೆ. ಮಕಾಳಿ

ಮುದ್ರಣ
ಲಕ್ಷ್ಮಿ ಮುದ್ರಣಾಲಯ
೧೧೭/೨, ೫ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು - ೧೮
✆ ೬೬೧೩೧೨೩, ೬೬೧೮೭೫೨

*

# ದೇಸಿಯೊಳ್ ಪುಗುವುದು

ಡಾ. ಎಂ.ಎಂ.ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಶಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂಥ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನ ಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶ ಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ

ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆಯ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ- ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿ ವಹಿಸಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕ ಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಈ ಪ್ರಸಾರಾಂಗದ ಇತ್ತೀಚಿನ ಪ್ರಕಟಣೆಯಾಗಿದೆ 'ಜಲಸಂಬಂಧಿ ಚಳವಳಿಗಳು'.

ಅನ್ಯಾಯವನ್ನು ಸಹಿಸಿಕೊಂಡು ಹೋಗುತ್ತಲಿರುವ ಸ್ವಭಾವದ ಭಾರತೀಯರು ಇತ್ತೀಚೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಮನೋಧರ್ಮವನ್ನು ರೂಢಿಸಿಕೊಂಡಿರುವ ಫಲ 'ಚಳವಳಿ'. ಏಕೀಕರಣೋತ್ತರ ಕರ್ನಾಟಕದಲ್ಲಿ ತಲೆದೋರಿದ ಇಂಥ ಆರು ಮುಖ್ಯ ಚಳವಳಿಗಳನ್ನು ಕುರಿತು ಚರಿತ್ರೆ ವಿಭಾಗ ಯೋಜನೆಯೊಂದನ್ನು ಕೈಗೆತ್ತಿಕೊಂಡಿದೆ. ಇದರ ಅಂಗವಾಗಿ ಪ್ರಕಟವಾಗುತ್ತಲಿರುವ ಆರು ಕೃತಿಗಳಲ್ಲಿ 'ಜಲಸಂಬಂಧಿ ಚಳವಳಿಗಳು' ಒಂದು. ಇದನ್ನು ರಚಿಸಿದ ಶ್ರೀ ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ ನಮ್ಮ ಧನ್ಯವಾದಗಳು ಸಲ್ಲುತ್ತವೆ.



# ಲೇಖಕರ ಮಾತು

ಕರ್ನಾಟಕದ ಏಕೀಕರಣೋತ್ತರ ಸಂದರ್ಭದಲ್ಲಿ ಸಂಭವಿಸಿದ ಪ್ರಮುಖ ಜಲಸಂಬಂಧಿ ಚಳವಳಿಗಳನ್ನು ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆ ಮೂಲಕ ಇಡೀ ಕರ್ನಾಟಕ ಚರಿತ್ರೆಯ ಸಂದರ್ಭವನ್ನು ಗಮನಿಸಲಾಗಿದೆ. ಈಗಾಗಲೇ ಕರ್ನಾಟಕ ಚರಿತ್ರೆಯ ಏಳು ಸಂಪುಟಗಳು ಪ್ರಕಟವಾಗಿದ್ದು, ಆದಿಕಾಲದಿಂದ ಏಕೀಕರಣದವರೆಗೆ ವಿಷಯದ ವ್ಯಾಪ್ತಿಯನ್ನೊಳಗೊಂಡಿರುವುದು ಸ್ಪಷ್ಟ. ಹೀಗಾಗಿ ಏಕೀಕರಣೋತ್ತರ ಸಂದರ್ಭದ ಚರಿತ್ರೆ ಅಪೂರ್ಣವಾಗಿರುವಂತೆ, ಅಲಕ್ಷಿಸಿದಂತೆ ಕಂಡುಬಂದುದರಿಂದ ಅಧ್ಯಯನ ಕೈಗೊಳ್ಳಲು ಆಸ್ಪದವಾಯಿತು. ಈ ಕಾಲಘಟ್ಟವು ವಿವಿಧ ಕ್ಷೇತ್ರಗಳಲ್ಲಿನ ಬಂಡಾಯದ ಛಾಯೆಯನ್ನು ಪ್ರದರ್ಶಿಸಿದಂತಿದೆ.

ಈ ಹಿನ್ನೆಲೆಯಲ್ಲಿ, ಜಲದ ಬಗ್ಗೆ ನಡೆದ ಹೋರಾಟ, ಚಳವಳಿ ಮೊದಲಾದ ಚಟುವಟಿಕೆಗಳಿಂದ ವ್ಯಕ್ತವಾದ ಸ್ವರೂಪವನ್ನು ಬೆಳಕಿಗೆ ತರಬೇಕಾಯಿತು. ಇವುಗಳನ್ನೆಲ್ಲ ಒಂದೆಡೆ ಕಟ್ಟಿಕೊಡುವುದು ಮತ್ತು ವಿಶ್ಲೇಷಿಸುವುದು ಅನಿವಾರ್ಯವೆನಿಸಿತು. ಜಲವು ರಾಷ್ಟ್ರೀಯ ಸಮಸ್ಯೆಯಾಗಿ, ವಿವಾದವಾಗಿ ಚಳವಳಿ ಸ್ವರೂಪ ಪಡೆದಿರುವುದು ಗಮನಾರ್ಹ. ಇಂಥಾ ಚಳವಳಿಗಳ ಹಿಂದೆ ಸಾಮಾಜಿಕ ಕಳಕಳಿ ಇರುತ್ತದೆಂಬುದು ನಿಜ. ಈ ಹಿನ್ನೆಲೆಯಲ್ಲಿ ಜಲವು ನಾನಾ ಬಗೆಯ ಬೆಳವಣಿಗೆ, ಚಳವಳಿಗಳಿಗೆ ಕಾರಣವಾದುದು ಸಹಜ. ಜಲಕ್ಕೆ ಸಂಬಂಧಿಸಿದಂತೆ ಹಲವು ಸಂಗತಿಗಳು ಚೆಲ್ಲಾಪಿಲ್ಲಿಯಾಗಿದ್ದು, ಇವುಗಳ ಮರುಜೋಡಣೆಗೆ ಪ್ರಸ್ತುತ ಅಧ್ಯಯನವು ಸಂದರ್ಭೋಚಿತವಾಗಿದೆ.

ಕರ್ನಾಟಕದ ಮಟ್ಟಿಗೆ, ಕಾವೇರಿ, ಕೃಷ್ಣಾ, ತುಂಗಭದ್ರಾ ಮೊದಲಾದ ನದಿನೀರು ವಿವಾದಗಳು ಪ್ರಮುಖವಾಗಿವೆ. ಈ ಸಂಬಂಧದಲ್ಲಿ ಮಹಾರಾಷ್ಟ್ರ, ಆಂಧ್ರಪ್ರದೇಶ, ಪುದುಚೇರಿ, ತಮಿಳುನಾಡು ಮತ್ತು ಕೇರಳ ರಾಜ್ಯಗಳು ಹೋರಾಟ, ಚಳವಳಿಗಳನ್ನು ನಡೆಸಿರುವುದು ಗಮನಾರ್ಹ. ಇವು ನಾನಾ ರೂಪ ಪಡೆದು ಚಳವಳಿ ನಡೆದ ಸಂದರ್ಭದಲ್ಲೆಲ್ಲ ಫಲಿತಾಂಶ ಕಂಡುಕೊಳ್ಳಲು ಹವಣಿಸುತ್ತವೆ. ಇಂಥಾ ಅನೇಕ ಸಂಗತಿಗಳನ್ನು ದಾಖಲಿಸುವ ನಿಟ್ಟಿನಲ್ಲಿ ಕರ್ನಾಟಕದ ಜಲಸಂಬಂಧಿ ಚಳವಳಿಗಳನ್ನು ಕುರಿತು ಸಮಗ್ರ ಅಧ್ಯಯನ ಮಾಡಿದ್ದರೂ, ಕೆಲವು ವಿಷಯಗಳು ಇಲ್ಲಿ ಮರೆಯಾಗಿರಬಹುದು.

ಕಾವೇರಿ ನದಿನೀರಿನ ವಿವಾದ ದೇಶದಲ್ಲಿಯೇ ಅತೀ ಹೆಚ್ಚಿನ ಚರ್ಚೆಗೆ ಒಳಗಾಗಿದೆ. ಶತಮಾನ ಕಂಡರೂ ಇತ್ಯರ್ಥವಾಗದೇ ಕಗ್ಗಂಟಾಗಿ ಮುಂದುವರೆದಿರುವ ಸಮಸ್ಯೆ ಇದು. ಇದೇ ರೀತಿ ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು ಹೆಚ್ಚಿಸುವುದಕ್ಕೆ ಆಂಧ್ರಪ್ರದೇಶ ತಕರಾರು ಮಾಡುತ್ತಿದೆ. ಇದೇ ವೇಳೆಗೆ ಹೆಚ್ಚಿಸಿದ ಅಣೆಕಟ್ಟಿನ

ಎತ್ತರದಿಂದ ನಿಲ್ಲುವ ಹಿನ್ನೀರು ಮಹಾರಾಷ್ಟ್ರ ರಾಜ್ಯಕ್ಕೆ ಕಂಟಕವಾಗಿ ಪರಿಣಮಿಸಿದ್ದು, ಈ ವಿವಾದವನ್ನು ಇನ್ನಷ್ಟು ಜಟಿಲಗೊಳಿಸಿದೆ. ಹೀಗೆ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಈ ಬಗೆಯ ಜಲಸಮಸ್ಯೆ ಕುರಿತ ಚಳವಳಿಗಳು ಗಣನೀಯ ಸ್ಥಾನ ಪಡೆದಿರುವುದು ತೆರೆದ ಸತ್ಯ.

ಅಣೆಕಟ್ಟುಗಳಿಂದ ನೀರಾವರಿ ಅಭಿವೃದ್ಧಿಯಾಗುವುದು ವಾಸ್ತವ. ನದಿ, ಅಣೆಕಟ್ಟುಗಳಲ್ಲದೆ, ಕುಡಿಯುವ ನೀರು, ಉದ್ದಿಮೆಗಳ ಸ್ಥಾಪನೆ ಇತರ ಸಂದರ್ಭಗಳಲ್ಲಿಯೂ ಚಳವಳಿಗಳು ನಡೆಯುವುದನ್ನು ನೋಡಬಹುದು. ರಾಜ್ಯದಲ್ಲಿ ಆಂತರಿಕ ಜಲವಿವಾದ, ಚಳವಳಿಗಳಿರುವಂತೆ, ಅಂತರ್‌ರಾಜ್ಯ ಚಳವಳಿಗಳು ಸಹಾ ನೀರಿನ ಸಮತೋಲನಕ್ಕೆ ಪ್ರಯತ್ನಿಸಿ ವಿಫಲವಾಗಿವೆ. ಕರ್ನಾಟಕದ ಜನತೆಗೆ ಅನುಕೂಲವಾದ ಮತ್ತು ಅನಾನು ಕೂಲವಾದ ಬಗೆ ಇಲ್ಲಿ ಪರಿಣಾಮಕಾರಿ. ಅಸಮತೋಲನ ಸರಿಪಡಿಸಲು ಸರ್ಕಾರ, ರಾಜಕೀಯ ಪಕ್ಷಗಳ ಮಧ್ಯಸ್ತಿಕೆ, ನ್ಯಾಯಾಲಯಗಳ ಇತ್ಯರ್ಥ ಮೊದಲಾದವು ಸಹಾಯಕವಾಗಿವೆ. ನ್ಯಾಯ ದೊರಕದಿರುವಾಗ ಚಳವಳಿ ಮಾಡುವುದು ಸಹಜ.

'ಜಲಸಂಬಂಧಿ ಚಳವಳಿಗಳು' ಏಕೀಕರಣೋತ್ತರ ಸಂದರ್ಭದ ಕಾಲಘಟ್ಟದಲ್ಲಿ ಕಂಡುಬಂದರೂ ಪೂರಕವಾಗಿ ಜಗತ್ತಿನ ಹಾಗೂ ಭಾರತದ - ವಿಶೇಷವಾಗಿ ದಕ್ಷಿಣಭಾರತದ ನೀರಾವರಿಯ ಹಿನ್ನೆಲೆಯನ್ನು ಇಲ್ಲಿ ಚರ್ಚಿಸಲಾಗಿದೆ. ಕರ್ನಾಟಕದ ಪ್ರಮುಖ ನದಿಗಳ ಪರಿಚಯದೊಡನೆ ಇತರ ನದಿಗಳ ಪಟ್ಟಿಯನ್ನೂ ಕೊಡಲಾಗಿದೆ. ಈಗಾಗಲೇ ನಿರ್ಮಾಣಗೊಂಡ ಅಣೆಕಟ್ಟುಗಳ ಯೋಜನೆಗಳಲ್ಲಿ ಕೆಲವನ್ನು ತಿಳಿಸಿ, ಉಳಿದವುಗಳ ಪಟ್ಟಿ ನೀಡಲಾಗಿದೆ. ನದಿನೀರು ವಿವಾದ ಮತ್ತು ಚಳವಳಿಗಳಲ್ಲಿ ಕಾವೇರಿ, ತುಂಗಭದ್ರಾ, ಕೃಷ್ಣಾ ಮೇಲ್ದಂಡೆ, ಕೃಷ್ಣಾ-ಗೋದಾವರಿಗಳನ್ನು ಅಂತರ್‌ರಾಜ್ಯ ನದಿ ವಿವಾದಗಳೆಂದು ಕರೆಯಲಾಗಿದೆ. ರಾಜ್ಯದ ಆಂತರಿಕ ಜಲಸಮಸ್ಯೆ ಕುರಿತ ಚಳವಳಿಗಳಲ್ಲಿ ಭದ್ರಾಮೇಲ್ದಂಡೆ, ಕಾರಂಜಾಗಳು ಮುಖ್ಯವಾಗಿವೆ. ಉಳಿದವುಗಳ ಹೆಸರುಗಳನ್ನು ಅನುಬಂಧದಲ್ಲಿ ನೀಡಲಾಗಿದೆ. ಮೇಲಿನ ಕೆಲವು ಯೋಜನೆಗಳನ್ನು ಪ್ರಚಲಿತ ಮತ್ತು ಸಂಭವನೀಯ ಚಳವಳಿಗಳಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಕುಡಿಯುವ ನೀರಿಗಾಗಿ ನಡೆಯುವ ಚಳವಳಿಗಳು ಮಹತ್ವದವೆನಿಸಿವೆ. ಇನ್ನೂ ಅನೇಕ ಸಂಗತಿಗಳು ಗಮನಕ್ಕೆ ಬಾರದೆ ಅಜ್ಞಾತವಾಗಿರುವುದುಂಟು. ಪರಿಸರ, ಜಲವಿದ್ಯುತ್, ಕೈಗಾರಿಕೆ ಇತರ ವೈಜ್ಞಾನಿಕ ಸಂಗತಿಗಳನ್ನು ಈ ಹಿನ್ನೆಲೆಯಲ್ಲಿ ಅವಲೋಕಿಸುವ ಅಗತ್ಯವಿದೆ. ರಾಜ್ಯದ ಜಲಸಂಪತ್ತು ಕುರಿತು ಅಧ್ಯಯನ ಮಾಡುವವರಿಗೆ ಈ ಕೃತಿ ನೆರವಾದರೆ ನನ್ನ ಶ್ರಮ ಸಾರ್ಥಕ.

ಈ ಅಧ್ಯಯನ ನಿಮಿತ್ತ ಕರ್ನಾಟಕ ರಾಜ್ಯಾದ್ಯಂತ ಸಂಚರಿಸಿದಾಗ ಅನೇಕರು ಮಾಹಿತಿಕೊಟ್ಟು ಸಹಕರಿಸಿದ್ದಾರೆ. ಹಿಂದಿನ ಸಣ್ಣ ನೀರಾವರಿ ಸಚಿವ ತಿಪ್ಪೇಸ್ವಾಮಿ, ಭಾರೀ ನೀರಾವರಿ ಸಚಿವ ಕೆ. ಎನ್. ನಾಗೇಗೌಡ, ಮಾಜಿ ಮುಖ್ಯಮಂತ್ರಿ ಜೆ. ಹೆಚ್. ಪಟೇಲ್, ಇಂದಿನ ನೀರಾವರಿ ಸಚಿವ ಎಚ್. ಕೆ. ಪಾಟೀಲ್, ಮಾಜಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ, ಮಾಜಿಮಂತ್ರಿ ಎಂ. ಪಿ. ಪ್ರಕಾಶ್ ಮೊದಲಾದವರಿಗೆ ಕೃತಜ್ಞನಾಗಿದ್ದೇನೆ.

ಬೀದರ್, ಗುಲ್ಬರ್ಗಾ, ಬಿಜಾಪುರ, ಶಿವಮೊಗ್ಗ ಮತ್ತು ಬೆಂಗಳೂರು ವಿಭಾಗ, ಉಪವಿಭಾಗಗಳಲ್ಲಿನ ನೀರಾವರಿ ಇಲಾಖೆಯ ಅಧಿಕಾರಿಗಳು ಅನೇಕ ರೀತಿಯ ಮಾಹಿತಿಕೊಟ್ಟು ಸಹಕರಿಸಿದ್ದಾರೆ. ಚಿತ್ರದುರ್ಗದ ನೀರಾವರಿ ಹೋರಾಟ ಸಮಿತಿ ಸಂಚಾಲಕ ಡಾ. ಬಂಜಗೆರೆ ಜಯಪ್ರಕಾಶ್, ಪತ್ರಕರ್ತ ಕ. ಮ. ರವಿಶಂಕರ, ಟಿ. ಡಿ. ದೊಡ್ಡಯ್ಯ ಮತ್ತು ಟಿ. ಎಸ್. ಓಬಯ್ಯ ಹಾಗೂ ಇತರ ಅನೇಕ ಕನ್ನಡ ಸಂಘಟನೆಗಳಿಗೆ ಋಣಿಯಾಗಿರುವೆ.

ಪುಸ್ತಕ ರೂಪದಲ್ಲಿ ತರುವಂತೆ ಪ್ರೋತ್ಸಾಹಿಸಿದ ನೆಚ್ಚಿನ ಕುಲಪತಿ ಡಾ. ಎಂ. ಎಂ. ಕಲಬುರ್ಗಿ ಅವರಿಗೆ, ಕುಲಸಚಿವರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರಿಗೆ, ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಎ. ವಿ. ನಾವಡ ಅವರಿಗೆ, ಕಲಾವಿದ ಕೆ. ಕೆ. ಮಕಾಳಿ ಮತ್ತು ಪ್ರಕಟಣ ಸಹಾಯಕ ಕೆ. ಎಲ್. ರಾಜಶೇಖರ್ ಅವರಿಗೆ, ಲಕ್ಷ್ಮೀ ಮುದ್ರಣಾಲಯದ ಸದಸ್ಯರಿಗೆ, ತಾತ, ತಂದೆ-ತಾಯಿಗಳಿಗೆ, ಅಕ್ಕಂದಿರುಗಳಿಗೆ, ಪತ್ನಿ ಪೂರ್ಣಿಮಾಳಿಗೆ ತುಂಬುಹೃದಯದ ಕೃತಜ್ಞತೆಗಳು.

**ವಿರೂಪಾಕ್ಷಿ ಪೂಜಾರಹಳ್ಳಿ**

# ಪರಿವಿಡಿ

೧. ಪ್ರಸ್ತಾವನೆ ೧

೨. ಜಲದ ಹಿನ್ನೆಲೆ ಮತ್ತು ನೀರಾವರಿಯ ಬೆಳವಣಿಗೆ ೭

೩. ನದಿಗಳ ಉಗಮ ಮತ್ತು ಭೌಗೋಳಿಕ ಪರಿಚಯ ೧೯

೪. ಅಣೆಕಟ್ಟುಗಳ ನಿರ್ಮಾಣ ಯೋಜನೆ ೨೫

೫. ಅಂತರ್‌ರಾಜ್ಯ ನದಿನೀರು ವಿವಾದ ಮತ್ತು ಚಳವಳಿಗಳು ೩೭

೫.೧. ಕಾವೇರಿ ಜಲವಿವಾದದ ಚಳವಳಿ

೫.೨. ತುಂಗಭದ್ರಾ ಜಲಾಶಯಕ್ಕಾಗಿ ಚಳವಳಿ

೫.೩. ಕೃಷ್ಣಾ ಮೇಲ್ದಂಡೆ ಯೋಜನೆಯ ವಿವಾದ ಕುರಿತ ಚಳವಳಿ

೫.೪. ಕೃಷ್ಣಾ - ಗೋದಾವರಿ ವಿವಾದ ಕುರಿತ ಚಳವಳಿ

೬. ಕರ್ನಾಟಕದ ಆಂತರಿಕ ಜಲಸಮಸ್ಯೆ ಕುರಿತ ಚಳವಳಿಗಳು ೬೫

೬.೧. ಬೃಹತ್, ಮಧ್ಯಮ ಮತ್ತು ಸಣ್ಣ ನೀರಾವರಿ ವಿವಾದ ಕುರಿತ ಚಳವಳಿಗಳು

೬.೨. ಭದ್ರಾ ಮೇಲ್ದಂಡೆ ಯೋಜನೆ

೬.೩. ಕಾರಂಜಾ ಯೋಜನೆ

೬.೪. ಬಾಗೂರು - ನವಿಲೆ

೭. ಪ್ರಚಲಿತ ಮತ್ತು ಸಂಭವನೀಯ ಚಳವಳಿಗಳು ೭೭

೭.೧. ತುಂಗಾ ತಿರುವು

೭.೨. ತುಂಗಭದ್ರಾ ಎಡದಂಡೆ ಕಾಲುವೆ

೭.೩. ಕಾವೇರಿ

೭.೪. ಕೃಷ್ಣಾ ಮೇಲ್ದಂಡೆ

೭.೫. ಕುಡಿಯುವ ನೀರಿಗಾಗಿ ನಡೆಯುವ ಚಳವಳಿಗಳು

೮. ಸಮಾರೋಪ ೧೦೭

ಅನುಬಂಧಗಳು ೧೧೭

ಗ್ರಂಥಋಣ ೧೩೫

# ೧. ಪ್ರಸ್ತಾವನೆ

ವಿಶ್ವದ ಶೇ. ೭೫ರಷ್ಟು ಭಾಗ ನೀರಿನಿಂದಲೇ ಆವೃತವಾಗಿದೆ. ಆದರೂ ಮಾನವನ ಅಗತ್ಯಕ್ಕೆ ತಕ್ಕಂತೆ ನೀರು ಪೂರೈಕೆಯಾಗುವುದಿಲ್ಲ ಎನ್ನುವುದುಂಟು. ಹೀಗಾಗಿ ನದಿ, ಕೆರೆ, ಸರೋವರಗಳಲ್ಲಿ ಸ್ವಚ್ಛ ನೀರನ್ನು ಪಡೆಯಲು ಯೋಜನೆಗಳನ್ನು ರೂಪಿಸಲಾಗಿದೆ. ನೀರಿನ ಲಭ್ಯತೆಯ ಪ್ರಮಾಣ ಕ್ಷೀಣಿಸುತ್ತಿರುವುದರಿಂದ ನೀರಿನ ಬಳಕೆಯ ವಿಷಯದಲ್ಲಿಂದು ವಿವಾದಗಳು ಉದ್ಭವಿಸುತ್ತಿರುವುದು ಸಾಮಾನ್ಯವಾಗಿದೆ.

'ಹರಿಯುವ ನದಿ ಬತ್ತುವುದಿಲ್ಲ' ಎನ್ನುವಂತೆ ನದಿ ನೀರಿಗಾಗಿ ನಡೆಯುವ ಚಳವಳಿ, ಹೋರಾಟಗಳಿಗೆ ಕೊನೆಯಿಲ್ಲದಂಥ ವಾತವರಣ ನಿರ್ಮಾಣವಾಗಿದೆ. ಹೀಗೆ ಜಲದ ಮೂಲ ಅಥವಾ ಹಿನ್ನೆಲೆ ಬಹು ಪ್ರಾಚೀನ ಕಾಲಕ್ಕೆ ಹೋಗುತ್ತದೆ. 'ರಿವಸ್' ಎಂಬ ಪದ 'ರೈವಲ್' ಎಂಬ ಲ್ಯಾಟಿನ್ ಮೂಲದಿಂದ ಬಂದಿದೆ. 'ರಿವಸ್' ಎಂದರೆ ಹಳ್ಳ, ತೊರೆ ಎಂದರ್ಥ. ಇಂಗ್ಲಿಷ್‌ನಲ್ಲಿ 'ರೀವರ್' ಎಂದು ಕರೆದರೆ, ಕನ್ನಡದಲ್ಲಿ ಪರ್ಯಾಯವೆಂಬಂತೆ ನದಿ, ಹಳ್ಳ, ನೀರು ಎಂದು ಕರೆಯುವುದುಂಟು. ನೀರಿನ ಪ್ರಮಾಣ ಕಡಿಮೆಯಿದ್ದರೂ ಮಾನವನಿಗೆ ಅದು ಅಗತ್ಯ ಮತ್ತು ಅನಿವಾರ್ಯ. ಜಲಸಂಪತ್ತಿನ ಬಳಕೆಗಾಗಿ ನಡೆದ ಹೋರಾಟದಂಥ ಚಟುವಟಿಕೆಗಳು ಚರಿತ್ರೆಯುದ್ದಕ್ಕೂ ಕಂಡು ಬಂದರೂ ಆಧುನಿಕ ಕಾಲದ ಚಳವಳಿಗಳ ಸ್ವರೂಪವೇ ಬೇರೆ.

ಆರಂಭದಲ್ಲಿ ಕೃಷಿ ಮತ್ತು ನೀರಾವರಿ ಬೆಳವಣಿಗೆಗೆ ನೀರಿನ ಬಳಕೆ ಯಾವ ಸ್ವರೂಪದಲ್ಲಿತ್ತೆಂಬುದನ್ನು ತಿಳಿಸುವುದು ಕಷ್ಟಸಾಧ್ಯ. ಇದರಿಂದ ಕ್ರಮೇಣ ನೀರಾವರಿ ಸುಧಾರಣೆಗೊಂಡು ನೀರಿನ ಅವಶ್ಯಕತೆಗೆ ತಕ್ಕಂತೆ ಸಂಘರ್ಷಗಳು ನಡೆದಿರಲೇಬೇಕು. ಇಲ್ಲದಿದ್ದರೆ ಆ ಕಾಲದ ಜನ ಪ್ರತಿನಿಧಿಗಳು ಕೆರೆ, ಕಟ್ಟೆ, ಬಾವಿಗಳನ್ನು ನಿರ್ಮಿಸಲಿಕ್ಕೆ ಬಹುಶ: ಮೇಲಿನ ಸಂಗತಿಗಳು ಕಾರಣಗಳಾಗಿರಬೇಕು. ಭಾರತದಲ್ಲಿ ನದಿ ನೀರು ಸಮಸ್ಯೆ ಬಹು ಹಿಂದಿನ ಕಾಲದಿಂದಲೂ ನಾನಾ ರೂಪದಲ್ಲಿ ವ್ಯಕ್ತಪಟ್ಟಿದೆ. ೧೯೩೫ರಲ್ಲಿ ಈ ಸಮಸ್ಯೆಯನ್ನು ಮೊದಲ ಬಾರಿಗೆ ಪರಿಹರಿಸಿಕೊಳ್ಳಲು ಪ್ರಯತ್ನಿಸಲಾಯಿತು. ತರುವಾಯ ಭಾರತೀಯ ಸಂವಿಧಾನದಲ್ಲಿ ೨೬೨ರ ಅನುಚ್ಛೇದದ ಪ್ರಕಾರ ನೆರವೇರಿತಾದರೂ ಇದರ ಪರಿಣಾಮವಾಗಿ ೧೯೫೬ರಲ್ಲಿ ಅಂತರ್‌ರಾಜ್ಯ ಜಲವಿವಾದ ಕಾಯ್ದೆ ಮತ್ತು ನದಿಮಂಡಳಿ ಗಳೆರಡನ್ನು ಸಂವಿಧಾನ ಅಂಗೀಕರಿಸಿದ್ದು ಸ್ಪಷ್ಟ.

ಮಾನವನ ಆರ್ಥಿಕ ಪ್ರಗತಿಗೆ ಪ್ರಾಕೃತಿಕ ಸಂಪನ್ಮೂಲ ಅತ್ಯಗತ್ಯ. ಈ ಸಂಪನ್ಮೂಲಗಳಲ್ಲಿ ನೀರು ಮುಖ್ಯವೆನಿಸಿದೆ. ಪ್ರಕೃತಿಯ ಕೊಡುಗೆಯಾದ ನೀರು ವಿದ್ಯುಚ್ಛಕ್ತಿ ಉತ್ಪಾದನೆ, ವ್ಯವಸಾಯ, ಕೈಗಾರಿಕೆಗಳಿಗೆ ಉಪಯೋಗವಾಗಿದೆ. ಆ ಮೂಲಕ ಆರ್ಥಿಕ ವ್ಯವಸ್ಥೆ ಸಮೃದ್ಧವಾಗಿರಲು ಕೃಷಿ ತಳಹದಿಯಾಗಿರುವುದು ಗಮನಾರ್ಹ. ಇಲ್ಲಿ ಬಹುಪಾಲು

ಮಳೆಯ ನೀರನ್ನೇ ಆಶ್ರಯಿಸಬೇಕಾಗಿದೆ. ಸಮಯಕ್ಕೆ ಸರಿಯಾಗಿ ಮಳೆ ಬಾರದೇ ರೈತರಿಗೆ ಅತಿವೃಷ್ಟಿ, ಅನಾವೃಷ್ಟಿಗಳು ಕಾಡುತ್ತಿರುತ್ತವೆ. ಹೀಗಾಗಿ ಮಳೆಯ ನೀರು ನಾನಾ ವಿಧವಾಗಿ ಪ್ರಯೋಜನಕ್ಕೆ ಬರುತ್ತದೆ. ನದಿನೀರಿಗೆ ಅಡ್ಡಲಾಗಿ ಅಣೆಕಟ್ಟನ್ನು ನಿರ್ಮಿಸಿ, ಪೋಲಾಗಿ ಹರಿದು ಹೋಗುವ ನೀರನ್ನು ಉಳಿಸಿ ಕಾಲುವೆಗಳ ಮೂಲಕ ನೀರಿನ ಕೊರತೆಯಿರುವ ಪ್ರದೇಶಗಳಿಗೆ ನೀರಾವರಿ ಮಾಡಲಾಗುತ್ತದೆ. ನೀರನ್ನು ಹಂಚಿಕೊಳ್ಳುವಲ್ಲಿ ಸಂಭವಿಸುವ ಘಟನೆಗಳು ಜಲಸಮಸ್ಯೆಯ ಚಳವಳಿಗಳಿಗೆ ಕಾರಣವಾಗಿದೆ. ಕೃಷಿಯಲ್ಲಿ ಸಮೃದ್ಧಿ ಕಾಣದೆ, ಏಕೀಕರಣ ಪೂರ್ವದಲ್ಲಿ ಭಾರತ ಆಹಾರಧಾನ್ಯವನ್ನು ಹೆಚ್ಚಾಗಿ ಆಮದು ಮಾಡಿಕೊಳ್ಳುತ್ತಿತ್ತು. ಅನಂತರದ ಹಸಿರು ಕ್ರಾಂತಿಯಿಂದ ಆಮದಿನ ಪ್ರಮಾಣ ಇಳಿಮುಖವಾಯಿತು.

ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಗತಿಯನ್ನು ಸಾಧಿಸುತ್ತಾ ಬಂದಿರುವ ಭಾರತ ಜಲವಿದ್ಯುತ್, ಕೈಗಾರಿಕೆಗಳ ಸ್ಥಾಪನೆಯಲ್ಲಿಯೂ ಗಣನೀಯಪಾತ್ರ ವಹಿಸಿದೆ. ಇಂದು ವಿದ್ಯುತ್‌ನ ಬೇಡಿಕೆಯು ದಿನದಿಂದ ದಿನಕ್ಕೆ ಉಲ್ಬಣಗೊಳ್ಳುತ್ತಿದೆ. ಇದರಿಂದ ನಾಗರಿಕರ ಬದುಕಿಗೆ ಪೂರಕವಾಗಿ ರಿಫ್ರಿಜರೇಟರ್, ಏರ್‌ಕಂಡೀಷನರ್ ಇತರ ಗೃಹ ಉಪಕರಣಗಳಲ್ಲದೆ, ಸಮೂಹ ಮಾಧ್ಯಮಗಳ ಅವಶ್ಯಕತೆಗಾಗಿ ವಿದ್ಯುತ್‌ನ ಅಗತ್ಯತೆ ಅನಿವಾರ್ಯ. ಹೀಗಾಗಿ ಇದರ ಅಭಾವ ತೀವ್ರವಾಗಿರುವುದು ಕಂಡುಬರುತ್ತದೆ. ವಿದ್ಯುತ್‌ನಿಂದ ಮಿಲಿಯನುಗಟ್ಟಲೆ ಪಂಪಸೆಟ್‌ಗಳು ಕೃಷಿಯ ಉದ್ದೇಶಕ್ಕಾಗಿ ಬಳಕೆಯಾಗಿವೆ. ಇಂದು ಅಂತರ್ಜಲ ಸಮಸ್ಯೆಯ ಜತೆಗೆ ವಿದ್ಯುಚ್ಛಕ್ತಿಯ ಕೊರತೆಯನ್ನು ಈ ಸಂಬಂಧ ರೈತರು ಎದುರಿಸುತ್ತಿದ್ದಾರೆ.

ನದಿ ನೀರನ್ನು ಬಳಸಿಕೊಳ್ಳುವಲ್ಲಿ ನಾನಾ ರೀತಿಯ ಉಪಯೋಗವಿದೆ. ಹರಿವ ನದಿಗೆ ಅಣೆಕಟ್ಟು ನಿರ್ಮಿಸಿ ನೀರನ್ನು ಶೇಖರಿಸುತ್ತಿದ್ದು, ಕಾಲುವೆಗಳ ಮೂಲಕ ವಿತರಿಸಿಕೊಳ್ಳುವಾಗ ವಿವಾದ ಏರ್ಪಟ್ಟು ರೈತರಲ್ಲಿಯೇ ಸಂಘರ್ಷಗಳು ನಡೆಯುತ್ತವೆ. ನದಿ ರಾಜ್ಯದ ಗಡಿ ದಾಟಿದರೆ ಅಂತರರಾಜ್ಯಗಳ ನಡುವೆ ಸಮಸ್ಯೆ ಉದ್ಭವಿಸಿ ವಿವಾದವಾಗುವ ಬಗೆ ವಿಚಿತ್ರವಾಗಿದೆ. ಹೀಗೆ ಅಣೆಕಟ್ಟು ಕಟ್ಟುವಾಗ ಮುಳುಗಡೆ ಪ್ರದೇಶದ ಸಮಸ್ಯೆ, ವೆಚ್ಚವನ್ನು ಹಂಚಿಕೊಳ್ಳುವಲ್ಲಿ ವಿವಾದಗಳು ಹುಟ್ಟಿಕೊಳ್ಳುತ್ತವೆ. ನದಿ ತೀರದ ಮೇಲ್ದಂಡೆ ರಾಜ್ಯಗಳು ನದಿನೀರಿನ ಗರಿಷ್ಠ ಲಾಭ ಪಡೆಯುವುದನ್ನು ಕೆಳದಂಡೆ ರಾಜ್ಯಗಳು ಸದಾ ಅನುಮಾನದಿಂದಲೇ ನೋಡುತ್ತವೆ. ಹೀಗೆ ವಿವಾದಗಳು ಒಂದೇ ಸ್ವರೂಪದಲ್ಲಿದ್ದರೂ, ಸಮಸ್ಯೆ ಬೇರೆಯಾಗಿರುವುದುಂಟು. ಹೀಗಾಗಿ ಚಳವಳಿಗಳಿಗೆ ವಿವಾದ, ಸಮಸ್ಯೆಗಳೆರಡು ಕಾರಣವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಭಾರತ ದೇಶ ಮತ್ತು ಕರ್ನಾಟಕ ರಾಜ್ಯದ ಜಲಸಂಪತ್ತಿನ ಅವಲೋಕನವನ್ನು ಇಲ್ಲಿ ಮಾಡಲಾಗಿದೆ.

ಭಾರತ ಮುಖ್ಯವಾಗಿ ಕೃಷಿ ಪ್ರಧಾನವಾದ ರಾಷ್ಟ್ರ. ಶೇ. ೭೦ರಷ್ಟು ಜನರು ಕೃಷಿಯಿಂದಲೇ ಜೀವಿಸುತ್ತಾರೆಂಬುದು ಗಮನಾರ್ಹ. ರೈತನೇ ನಮ್ಮ ದೇಶದ ಬೆನ್ನೆಲುಬು ಎನ್ನುವುದು ಇದರ ಮಹತ್ವವನ್ನು ಎತ್ತಿತೋರಿಸುತ್ತದೆ. ದೇಶದಲ್ಲಿ ಅನೇಕ ನದಿಗಳು, ಫಲವತ್ತಾದ ಭೂಮಿ, ಉತ್ತಮ ವಾಯುಗುಣವಿದ್ದು, ಸಮೃದ್ಧಿಯ ಫಸಲನ್ನು ರೈತರು ಪಡೆಯುತ್ತಾರೆ. ಉತ್ತರ ಭಾರತದಲ್ಲಿ ಸರ್ವಕಾಲಕ್ಕೂ ನೀರು ಲಭ್ಯ. ಆದರೆ ದಕ್ಷಿಣ ಭಾರತದಲ್ಲಿ ಮಳೆಗಾಲವನ್ನೇ ಆಶ್ರಯಿಸಬೇಕಾಗುತ್ತದೆ. ಉತ್ತರದ ಗಂಗಾ, ಸಿಂಧೂ,

ಬ್ರಹ್ಮಪುತ್ರಾ ನದಿಗಳು ಸಮೃದ್ಧ ಕೃಷಿಗೆ ಪೂರಕವಾದ ಜೀವನದಿಗಳಾಗಿವೆ. ಈ ನೀರಿನ ವಿತರಣೆಗಾಗಿ ಸಮಸ್ಯೆ, ವಿವಾದ, ಚಳವಳಿಗಳು ಸಂಭವಿಸುವುದು ಸಹಜ.

ಭಾರತದ ಇಪ್ಪತ್ತೈದು ರಾಜ್ಯಗಳಲ್ಲಿ ಒಂದಾದ ಕರ್ನಾಟಕವೂ ಸಹ ಕೃಷಿ ಮತ್ತು ನೀರಾವರಿಯಲ್ಲಿ ಸಿಂಹಪಾಲನ್ನು ಗಳಿಸಿದೆ. ವಾರ್ಷಿಕ ಮಳೆಯಾದರೆ ಉತ್ತಮ ಬೆಳೆ ಬರುತ್ತದೆ. ಇದರ ಭೌಗೋಳಿಕ ವಿಸ್ತೀರ್ಣ ೧, ೯೧, ೭೯೧ ಚ. ಕಿ. ಮೀ. ಪಶ್ಚಿಮಕ್ಕೆ ಅರಬ್ಬೀಸಮುದ್ರ, ಈಶಾನ್ಯ ಮತ್ತು ಪೂರ್ವಕ್ಕೆ ಆಂಧ್ರ ಪ್ರದೇಶ, ಉತ್ತರ ಮತ್ತು ವಾಯವ್ಯಕ್ಕೆ ಮಹಾರಾಷ್ಟ್ರ, ನೈಋತ್ಯಕ್ಕೆ ಕೇರಳ ಮತ್ತು ಆಗ್ನೇಯಕ್ಕೆ ತಮಿಳುನಾಡು ಮೇರೆಗಳಾಗಿವೆ.

ಕರ್ನಾಟಕವು ಅನೇಕ ಬೆಟ್ಟ-ಗುಡ್ಡ, ಅರಣ್ಯಗಳಿಂದ ಆವೃತವಾಗಿದೆ. ಹಾಗೆಯೇ ಸು. ೬೦ಕ್ಕೂ ಹೆಚ್ಚು ನದಿಗಳನ್ನು ಹೊಂದಿದೆ. ಹಿಂದಿನಿಂದಲೂ ಜನರ ಸಮಸ್ಯೆ ಅರಿತ ಆಳರಸರು ಈ ನದಿಗಳಿಗೆ ಅಣೆಕಟ್ಟು ನಿರ್ಮಿಸಿದ್ದರು. ಅಂದಿನ ಅಣೆಕಟ್ಟಿನ ನಿರ್ಮಾಣ ಸಮಸ್ಯೆ ನಿವಾರಣೋಪಾಯದ ದ್ಯೋತಕವಾಗಿದೆ. ಹೀಗೆ ನಿರ್ಮಿಸಿದ ಅಣೆಕಟ್ಟು ಮತ್ತು ಕೆರೆಗಳಿಂದ ಪಡೆಯುವ ನೀರಿಗಾಗಿ ಸಂಘರ್ಷಗಳು ನಡೆದದ್ದು ಚರಿತ್ರಾರ್ಹ ಸಂಗತಿ. ಉದಾ : ಕಾವೇರಿ ನದಿನೀರಿಗಾಗಿ ಚೋಳ-ಪಾಂಡ್ಯರ ನಡುವಿನ ಕಾದಾಟ ಗಮನಾರ್ಹ ವಾದುದು. ಹೀಗೆ ಆದಿ ಕಾಲದಿಂದಲೂ ನೀರಿಗಾಗಿ ಕದನ, ಯುದ್ಧ, ಹೋರಾಟ ಮೊದಲಾದವು ನಡೆದರೂ, ಅವು ಸ್ವರೂಪದಲ್ಲಿ ಹಕ್ಕುಗಳನ್ನು ಪಡೆಯಬೇಕಾದ ಅನಿವಾರ್ಯತೆ ಹೊಂದಿದ್ದವು. ಹಿಂದಿನ ಘಟನೆಗಳು ಇಂದಿನ ಚಳವಳಿಗಳಿಗೂ ನಾಂದಿಯಾಗಿರಬಹುದು. ವಿಜಯನಗರ ಮತ್ತು ಬಹಮನಿ ಸುಲ್ತಾನರು ರಾಯಚೂರಿನ ದೋಹಬ್ ಪ್ರದೇಶಕ್ಕೆ ನಡೆಸಿದ ಪೈಪೋಟಿ ಚರಿತ್ರಾರ್ಹವಾಗಿದೆ. ಮೈಸೂರಿನ ಅರಸರ ಪೈಕಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಳ್ವಿಕೆಯಲ್ಲಿ 'ಕೆರೆ ನಿರ್ವಹಣಾ ಸಮಿತಿ ರಚನೆ' ಮತ್ತು 'ನೀರಾವರಿ ಅಭಿವೃದ್ಧಿ ನಿಧಿ ಸ್ಥಾಪನೆ' ಮಾಡಿದ್ದು ಅಂದಿನ ನೀರಿನ ಬೇಡಿಕೆಯನ್ನು ಸಂಕೇತಿಸುತ್ತದೆ. ಬ್ರಿಟಿಷರ ಆಳ್ವಿಕೆಯಲ್ಲಿ ಅಂತಹ ಗಮನಾರ್ಹ ಸಾಧನೆ ಕಂಡುಬಂದಿಲ್ಲ. ಈ ರೀತಿ ಕರ್ನಾಟಕದಲ್ಲಿ ನೀರಿಗಾಗಿಯೇ ಅನೇಕ ಘಟನೆಗಳು ಸಂಭವಿಸಿರುವುದು ಕೆರೆ, ಕಟ್ಟೆ, ಕಾಲುವೆಗಳ ನಿರ್ಮಾಣಕ್ಕೆ ಕಾರಣಗಳಾದ ಪರಿಸ್ಥಿತಿ, ಸಂದರ್ಭಗಳ ಬಗೆಯಿಂದ ತಿಳಿಯಲು ಶಕ್ಯವಿದೆ. ಅಲ್ಲದೆ ಶಾಸನಗಳು ಮೇಲಿನ ಊಹೆಗೆ ನಿಖರ ಆಧಾರ, ಬೆಳಕು ನೀಡಬಲ್ಲವಾಗಿವೆ.

ಏಕೀಕರಣೋತ್ತರ ಸಂದರ್ಭವು ಕರ್ನಾಟಕ ಚರಿತ್ರೆಯಲ್ಲಿಯೇ ಮಹಾತಿರುವೊಂದನ್ನು ಸೃಷ್ಟಿಸಿದ ಕಾಲಘಟ್ಟ. ಹರಿದು-ಹಂಚಿಹೋಗಿದ್ದ ಕರ್ನಾಟಕ ಒಂದಾಗಿ ಸೀಮಿತ ಗಡಿಯನ್ನು ಹೊಂದಿತು. ನಂತರ ಬೃಹತ್ ನೀರಾವರಿ ಯೋಜನೆಗಳ ಮೂಲಕ ಕೃಷಿ ಸಂಪದ್ಭರಿತ ರಾಜ್ಯವನ್ನಾಗಿ ಮಾಡಲು ಎಲ್ಲರೂ ಪಣತೊಟ್ಟರು. ಗುಡಿಕೈಗಾರಿಕೆಯನ್ನು ಕೈಬಿಟ್ಟು ಆಧುನಿಕ ಕೈಗಾರಿಕೆಗಳನ್ನು ಸ್ಥಾಪಿಸಿ ಪ್ರಗತಿದಾಯಕವಾಗಿ ಮುನ್ನಡೆದರು. ಅನೇಕ ವರ್ಷಗಳವರೆಗೆ ಅವಕಾಶಗಳಿಂದ ವಂಚಿತರಾದ, ಸೌಲಭ್ಯ ಪಡೆಯದೆ ಇರುವವರನ್ನು ಗುರುತಿಸಿ ಅವರಿಗೆ ಸೂಕ್ತ ಪ್ರಾತಿನಿಧ್ಯ ನೀಡಲು ಎಲ್.ಜಿ. ಹಾವನೂರರ ನೇತೃತ್ವದಲ್ಲಿ ನೇಮಕವಾದ ಹಿಂದುಳಿದ ವರ್ಗಗಳ ಆಯೋಗವೆಸಗಿದ ಕಾರ್ಯ ಅವಿಸ್ಮರಣೀಯವಾಗಿದೆ. ದಿ. ದೇವರಾಜಅರಸು ಅವರು ' ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು' ತತ್ವದಡಿ ಜಾರಿಗೆ ತಂದ

ಭೂಸುಧಾರಣೆಯಲ್ಲಿ ಉಳುವವನೇ ಭೂ ಒಡೆಯನಾದದ್ದು ರೈತರಿಗೆ ಪುನರ್ಜನ್ಮ ನೀಡಿದಂತಾಯಿತು. ಇದರಿಂದ ಕೆಲವು ಶ್ರೀಮಂತರು ಲಾಭಪಡೆದ ಸಂದರ್ಭಗಳಿಗೇನೂ ಲೆಕ್ಕವಿಲ್ಲ. ದೇಶದಲ್ಲಿ ತುರ್ತುಪರಿಸ್ಥಿತಿ ಘೋಷಣೆಯಾದಾಗ, ರಾಜ್ಯದ ಸಮಸ್ಯೆಗಳನ್ನು ನಿವಾರಿಸಿದ್ದು ದೊಡ್ಡ ಸಾಹಸ. ಅನೇಕ ವರ್ಷಗಳಿಂದ ನನೆಗುದಿಗೆ ಬಿದ್ದಿದ್ದ ಕರ್ನಾಟಕ ಎಂಬ ಹೆಸರನ್ನು ೧೯೭೩ ನವೆಂಬರ್ ೧ ರಂದು ಮೈಸೂರುರಾಜ್ಯಕ್ಕೆ ನಾಮಕರಣ ಮಾಡಲಾಯಿತು. ಬಸವಲಿಂಗಪ್ಪನವರ ಬೂಸಾ ಚಳವಳಿ, ಬಂಡಾಯ ಸಾಹಿತ್ಯದ ಉದಯ, ದಲಿತ-ಹಿಂದುಳಿದವರ್ಗಗಳ ಮೀಸಲಾತಿ ಕುರಿತ ಚಳವಳಿಗಳು ಇತರೆ ಚಳವಳಿಗೆ ನಾಂದಿಯಾದವು. ಈ ಹಿನ್ನಲೆಯಲ್ಲಿ ಕರ್ನಾಟಕದ ಜಲಸಂಬಂಧಿ ಚಳವಳಿಗಳೂ ಸಹ ಸಾಮೂಹಿಕ ಸಂಘಟನೆಗಳ ಮೂಲಕವೇ ಜರುಗಿವೆ.

ಜಲ ಅಥವಾ ನೀರನ್ನು ಕುಡಿಯಲು ಮತ್ತು ಕೃಷಿಗಲ್ಲದೆ, ವಿವಿಧ ಉದ್ದಿಮೆಗಳಿಗೂ ಬಳಸುತ್ತಾರೆ. ನೀರು ಅಭಾವವಾದಾಗ ನಾಗರಿಕರು ಚಳವಳಿ ನಡೆಸುವುದು ಅನಿವಾರ್ಯ ನದಿ ನೀರನ್ನು ಬಳಸಿಕೊಳ್ಳುವ ವಿಚಾರದಲ್ಲಿ ರಾಜಕೀಯ ಚಟುವಟಿಕೆಗಳು ಬೆಳೆದು ಇಂದು ಗಂಭೀರ ವಿವಾದ-ಸಮಸ್ಯೆಗಳಿಗೆ ಕಾರಣವಾಗಿವೆ.

ಏಕೀಕರಣೋತ್ತರ ಕಾಲಘಟ್ಟದಲ್ಲಿ ನೆಲ, ಜಲ, ಪ್ರಾಕೃತಿಕ ಸಂಪತ್ತಿನ ಬಗೆಗೆ ಮಾತೃ ಪ್ರೇಮ ಇಮ್ಮಡಿಯಾಯಿತೆನ್ನಬಹುದು. ಜನರ ಸಮಸ್ಯೆಗೆ ಸ್ಪಂದಿಸಿದ ಸರ್ಕಾರ ಪಂಚವಾರ್ಷಿಕ ಯೋಜನೆಗಳ ಮೂಲಕ ಅಣೆಕಟ್ಟುಗಳ ನಿರ್ಮಾಣ ಕಾರ್ಯ ಕೈಗೊಂಡಿತು. ಹೀಗೆ ನಿರ್ಮಿಸಿದ ಅಣೆಕಟ್ಟುಗಳಿಂದ ನೀರನ್ನು ಹಂಚಿಕೊಳ್ಳುವಾಗ ವಿವಾದಗಳು ಹುಟ್ಟಿಕೊಂಡವು. ಅವು ಇತ್ಯರ್ಥವಾಗದೆ ನ್ಯಾಯಾಲಯ, ಪ್ರಾಧಿಕಾರ, ಸರ್ಕಾರ ಮತ್ತು ರಾಜಕೀಯ ಪಕ್ಷಗಳ ನಡುವೆ ಜ್ವಲಂತ ಸಮಸ್ಯೆಗಳಾಗಿ ಮಾರ್ಪಟ್ಟಿವೆ. ಇವುಗಳ ನಿವಾರಣೆಗಾಗಿ ಜನರು ಚಳವಳಿ ರೂಪಕ್ಕಿಳಿದು ಹೋರಾಡಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಕಾವೇರಿ, ತುಂಗಭದ್ರಾ ಮತ್ತು ಕೃಷ್ಣಾ ಮೇಲ್ದಂಡೆ ಯೋಜನೆಗಳು ಅಂತರ ರಾಜ್ಯ ವಿವಾದ ಹೊಂದಿದ್ದರೆ, ಕಾರಂಜಾ, ತುಂಗಾತಿರುವು ಅಲ್ಲದೆ, ಕುಡಿಯುವ ನೀರಿನ ಸಮಸ್ಯೆ ಕುರಿತ ಚಳವಳಿಗಳು ಆಂತರಿಕ ವಿವಾದಗಳ ರೂಪ ಪಡೆದಿವೆ.

ಕಾವೇರಿ ನೀರಿನ ವಿವಾದ ಶತಮಾನದಷ್ಟು ಹಳೆಯದು. ಬ್ರಿಟಿಷ್ ಸರ್ಕಾರವೇ ಇದಕ್ಕೆ ಕಾರಣ. ಮೈಸೂರು ಸಂಸ್ಥಾನಕ್ಕೆ ಕೊನೆಯಲ್ಲಿ ಅಣೆಕಟ್ಟು ಕಟ್ಟಲು ಅನುಮತಿಕೊಟ್ಟಿತು. ನಿರ್ಮಾಣವಾದ ಅಣೆಕಟ್ಟಿನಿಂದ ತಮಿಳುನಾಡಿಗೆ ನೀರು ಬಿಡುವ ಒಪ್ಪಂದವು ಆಯಿತು. ಆಗ ಮದ್ರಾಸ್ ಅಧಿಪತ್ಯದ ಅಧೀನದಲ್ಲಿದ್ದ ಮೈಸೂರು ಸಂಸ್ಥಾನ ಅವರ ಆದೇಶದಂತೆ ನಡೆದುಕೊಳ್ಳಬೇಕಿತ್ತು. ಕಾವೇರಿ ಸಂಬಂಧ ಬ್ರಿಟಿಷರು ತಮಿಳುನಾಡಿಗೂ ಮತ್ತು ಕರ್ನಾಟಕಕ್ಕೂ ಇದ್ದ ಮಧುರ ಬಾಂಧವ್ಯಕ್ಕೆ ಚ್ಯುತಿ ತಂದರು ಎನ್ನಬಹುದು. ರಾಜಕೀಯವಾಗಿ ಅವರು ಲಾಭವನ್ನು ನಿಯಂತ್ರಿಸಬೇಕಿತ್ತು. ಈ ಎಲ್ಲ ಹಿನ್ನೆಲೆಗಳಿಂದ ಕಾವೇರಿ ಜಲಸಮಸ್ಯೆ ಶತಮಾನ ಕಂಡರೂ ಸ್ಪಷ್ಟ ಪರಿಹಾರ, ತೀರ್ಮಾನ, ನ್ಯಾಯ ದೊರಕಿಲ್ಲದೆ ಚಳವಳಿಗೆ ಕಾರಣವಾಗಿದೆ.

ಏಕೀಕರಣದ ತರುವಾಯ ಪ್ರತ್ಯೇಕ ರಾಜ್ಯಗಳು ಭೌಗೋಳಿಕವಾಗಿ ರಚನೆಯಾದವು. ಆಗ ತುಂಗಭದ್ರಾ ಯೋಜನೆ ಯಾರಿಗೆ ಸೇರಬೇಕೆಂಬ ಸಂದಿಗ್ಧ ಪರಿಸ್ಥಿತಿ ನಿರ್ಮಾಣವಾಯಿತು. ಇದು ಮೈಸೂರು ಮತ್ತು ಹೈದರಾಬಾದ್ ಸಂಸ್ಥಾನದವರ ಜಂಟಿಯೋಜನೆ

ಯಾಗಿತ್ತೆಂಬುದು ಸ್ಪಷ್ಟ. ಉಭಯ ಸರ್ಕಾರಗಳ ಯೋಜನೆಯನ್ನು ಆಂಧ್ರದವರು ಖಂಡಿಸಿ, ತುಂಗಭದ್ರಾ ಅಣೆಕಟ್ಟು ನಮ್ಮ ಸ್ವಾಮ್ಯಕ್ಕೆ ಬರಬೇಕೆಂದು ಪಟ್ಟು ಹಿಡಿದರು. ಅನೇಕ ಚಳವಳಿ, ಸತ್ಯಾಗ್ರಹಗಳನ್ನು ಕೈಗೊಂಡರೂ ಕನ್ನಡಿಗರು ಒಪ್ಪಲಿಲ್ಲ. ಅಂತಿಮವಾಗಿ ಒಪ್ಪಂದಕ್ಕೆ ಮಣಿಯಬೇಕಾಯಿತು.

ಕೃಷ್ಣಾ ಮೇಲ್ದಂಡೆ ವಿವಾದ ಇತ್ಯರ್ಥವಾಗದ ಕಾರಣ ರೈತರ ಆಕ್ರೋಶ ನಿಂತಿಲ್ಲ. ಪತ್ರಿಕೆಗಳಲ್ಲಿ ಜನರ ಪ್ರತಿಕ್ರಿಯೆ ಈ ಬಗ್ಗೆ ಮುಗಿಲು ಮುಟ್ಟಿದೆ. ಸಮೂಹ ಮಾಧ್ಯಮಗಳು ವ್ಯಕ್ತ ಪಡಿಸುವಂತೆ : ಕರ್ನಾಟಕದ ಎಲ್ಲ ಮುಖ್ಯಮಂತ್ರಿಗಳು ಆಲಮಟ್ಟಿಯನ್ನು ಒಂದಿಲ್ಲ ಒಂದು ರೀತಿಯಲ್ಲಿ ನಿರ್ಲಕ್ಷಿಸಿದ್ದಾರೆ ಎಂದಿರುವುದು ಜನರ ಬಾಯಿಂದ ಬಂದ ಸಂಗತಿ. ನಿಜಲಿಂಗಪ್ಪ ಮುಖ್ಯಮಂತ್ರಿಯಾದಾಗ ಆಂಧ್ರದ ಕೆ. ಎಲ್. ರಾವ್ ಮಂತ್ರಿಯಾಗಿ ಇವರನ್ನು ಉಪಶಮನ ಪಡಿಸಿದ್ದರಿಂದ ಆಂಧ್ರಕ್ಕೆ ಅನುಕೂಲವಾಯಿತು. ದೇವರಾಜ ಅರಸರು ಜನಪರ ಕಾಳಜಿಯಿಂದ ಸಾಮಾಜಿಕ ನ್ಯಾಯ, ಭೂ ಸುಧಾರಣೆಗಳಲ್ಲಿ ನಿರತರಾಗಿ ನೀರಾ  ವರಿಗೆ ಅಷ್ಟು ಗಮನ ಕೊಡಲಿಲ್ಲ ಎಂಬ ಆರೋಪವಿದೆ. ವೀರೇಂದ್ರ ಪಾಟೀಲರು ಆಲಮಟ್ಟಿಯ ಬಗ್ಗೆ ಪಟ್ಟು ಹಿಡಿದು ಹೋರಾಟ ನಡೆಸಿದರೂ ರಾಜಕೀಯ ಮತ್ತು ಇತರ ಕಾರಣಗಳಿಂದ ವಿವಾದ ಬಗೆಹರಿಯಲಿಲ್ಲ. ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿಯಾಗಿದ್ದಾಗ ಕೃಷ್ಣಾನದಿ ನೀರಿನ ಬಗೆಗೆ ಎನ್. ಟಿ. ರಾಮರಾಯರು ನೀವೆ ಮುಂದಿನ ಪ್ರಧಾನಿ ಎಂದಾಗ ಹೆಗಡೆ ರಾಜಕೀಯ ಲಾಭಕ್ಕಾಗಿ ಆಲಮಟ್ಟಿಯನ್ನು ಆಂಧ್ರಕ್ಕೆ ಬಲಿಕೊಟ್ಟರೆಂಬ ಜನರ ಪ್ರತಿರೋಧವಿದೆ. ದೇವೇಗೌಡರು ಸಹಾ ನಾನಾ ಕಾರಣಗಳಿಗಾಗಿ ಆಲಮಟ್ಟಿಯ ವಿವಾದವನ್ನು ಪರಿಹರಿಸಲು ಆಸಕ್ತಿ ತೋರಲಿಲ್ಲ. ಜೆ. ಹೆಚ್. ಪಟೇಲರನ್ನು ಇವರ ಸಾಲಿಗೆ ಸೇರಿಸಬಹುದು. ಕರ್ನಾಟಕದ  ಪಾಲಿನ ನೀರನ್ನು ಶೇಖರಿಸಿ, ಆಲಮಟ್ಟಿ ಅಣೆಕಟ್ಟೆಯ ಎತ್ತರ ಹೆಚ್ಚಿಸಬೇಕೆಂಬ ನಿಟ್ಟಿನಲ್ಲಿ ರೈತರು ಚಳವಳಿ ನಡೆಸಲು ಹೆಚ್ಚಿನ ಆಸಕ್ತಿ ತೋರಲಿಲ್ಲ ಎನ್ನಲಾಗಿದೆ. ರೈತಸಂಘವೇ ಈ ಸಂಬಂಧ ನಿರ್ಲಿಪ್ತವಾಗಿದ್ದುದು ವಿಪರ್ಯಾಸ. ಸಮೂಹ ಮಾಧ್ಯಮಗಳು ನದಿ ನೀರಿನ ಹಕ್ಕಿಗಾಗಿ ಹೋರಾಟ, ಚಳವಳಿ ಮಾಡಲು ಕರೆ ಕೊಟ್ಟರೂ ಅಂಥಾ ಗಮನಾರ್ಹವಾದ ಘಟನೆಗಳು ಸಂಭವಿಸಲಿಲ್ಲ. ವಿವಾದಗಳು ವಿವಾದಗಳಾಗಿಯೇ ಮುಂದುವರೆದಿವೆ.

ಕರ್ನಾಟಕದಲ್ಲಿರುವ ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳ ಕಾರ್ಯ ಪ್ರವೃತ್ತಿಯನ್ನು ಪ್ರಶ್ನಿಸಿ, ಯೋಜನೆಗಳನ್ನು ಆಗ್ರಹಿಸಿ ಚಳವಳಿಗಳು ಇಂದಿಗೂ ನಡೆಯುತ್ತಿವೆ. ಅತೀ ಹೆಚ್ಚು ಭೀಕರ ಚಳವಳಿಗೆ ಕಾರಣವಾಗಿರುವುದು ಕುಡಿಯುವ ನೀರಿನ ಸಮಸ್ಯೆ. ಪ್ರತಿ ವರ್ಷದ ಬೇಸಗೆಯಲ್ಲಿ ಕಾಣಬರುವ ಜ್ವಲಂತ ಸಮಸ್ಯೆಯಾಗಿರುವ ಕುಡಿಯುವ ನೀರಿಗಾಗಿ ನಾಗರಿಕರು ಸರ್ಕಾರದ ವಿರುದ್ಧ ಮುಷ್ಕರ, ರಾಸ್ತರೋಖೊ, ಚಳವಳಿಗಳನ್ನು ನಡೆಸುತ್ತಿರುವುದು ಅವರ್ಣನೀಯ. ಈ ಸಮಸ್ಯೆ ಕರ್ನಾಟಕದಲ್ಲಿ ಇನ್ನೂ ಅನೇಕ ನೀರಾವರಿ ಯೋಜನೆಗಳನ್ನು ಕೈಗೊಳ್ಳಬೇಕಾದ ಅಗತ್ಯವನ್ನು ತೋರಿಸುತ್ತಿದೆ.

ಏಕೀಕರಣೋತ್ತರ ಸಂದರ್ಭವು ಜಾಗೃತಿಗೊಂಡ ಜನತೆಗೆ ಸ್ಫೂರ್ತಿದಾಯಕವಾಗಿತ್ತು. ಹಿಡಿದ ಕೆಲಸ ಸಾಧಿಸಿ ಬಿಡುವ ಛಲವು ಫಲಕಾರಿಯಾಯಿತು. ಇಲ್ಲಿ ರೈತನೇ (ಪ್ರಜೆ) ಚಳವಳಿಗಳ ನೇತೃತ್ವ ವಹಿಸಿದ್ದು ಮೆಚ್ಚತಕ್ಕ ಸಂಗತಿ. ನೀರಿನ ಬಗೆಗೆ ನಿಜವಾದ ಕಾಳಜಿ

ರ್ತನಲ್ಲಿತ್ತು. ತರುವಾಯ ಜಲವನ್ನು (ವಿವಾದ) ರಾಜಕೀಯ ಅಸ್ತ್ರವಾಗಿ ರಾಜಕಾರಣಿಗಳು ಬಳಿಸಿಕೊಂಡಿದ್ದು ದುರದೃಷ್ಟಕರ.

ಪ್ರಸ್ತುತ ಅಧ್ಯಯನವು ೧೯೫೬ರಿಂದ ೨೦೦೦ದ ವರೆಗಿನ ಕಾಲಮಾನವನ್ನು ಹೊಂದಿದೆ. ಅಧ್ಯಯನದ ಅನುಕೂಲಕ್ಕಾಗಿ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕಾಲದಲ್ಲಾದ ನೀರಾವರಿ ಯೋಜನೆಗಳ ಅಭಿವೃದ್ಧಿ ಬಗ್ಗೆಯೂ ಚರ್ಚಿಸಲಾಗುತ್ತದೆ. ಎಸ್. ನಿಜಲಿಂಗಪ್ಪ, ಡಿ. ಬಿ. ದೇವರಾಜ ಅರಸು, ವಿ. ವೀರೇಂದ್ರ ಪಾಟೀಲ್, ವಿ. ಗುಂಡೂರಾವ್, ರಾಮಕೃಷ್ಣಹೆಗಡೆ, ಎಸ್. ಬಂಗಾರಪ್ಪ, ವೀರಪ್ಪ ಮೊಯಿಲಿ, ದೇವೇಗೌಡ, ಜೆ. ಹೆಚ್. ಪಟೇಲ್, ಮತ್ತು ಎಸ್. ಎಂ. ಕೃಷ್ಣ ಮೊದಲಾದ ಮುಖ್ಯಮಂತ್ರಿಗಳ ಅವಧಿಯಲ್ಲಿ ಕೈಗೊಂಡ ಅಣೆಕಟ್ಟುಗಳ ನಿರ್ಮಾಣ ಮತ್ತು ಚಳವಳಿಗಳನ್ನು ಕುರಿತು ಸಮೀಕ್ಷಿಸಲಾಗುವುದು.

ಅಧ್ಯಯನದ ಸ್ವರೂಪಕ್ಕೆ ತಕ್ಕಂತೆ ನದಿ, ಅಣೆಕಟ್ಟು ಮತ್ತು ನೀರಿಗಾಗಿ ನಡೆದ ಕದನ, ಯುದ್ಧ, ಸಂಘರ್ಷ, ಕಾದಾಟ, ಹೋರಾಟ, ಸತ್ಯಾಗ್ರಹ, ಬಂದ್, ಮುಷ್ಕರ, ವಿವಾದಗಳೇ ಮೊದಲಾದ ಸಮಸ್ಯೆಗಳನ್ನು ಹೆಸರಿಸಿದರೂ, ಚಳವಳಿ ಎಂಬುದು ಮುಖ್ಯವೆನಿಸಿದೆ. ಸರ್ಕಾರ ಮತ್ತು ಜನಸಮುದಾಯಗಳ ಸಂಘಟನೆಗಳೇ ಇಲ್ಲಿ ಕೇಂದ್ರ ಬಿಂದುವಾಗಿದ್ದವು.

ಕರ್ನಾಟಕದ ಜಲಸಂಬಂಧಿ ಚಳವಳಿ ಕುರಿತ ಅಧ್ಯಯನಕ್ಕೆ ಸಂಬಂಧಿಸಿದಂತೆ ಚಾರಿತ್ರಿಕ ಅಧ್ಯಯನ ವಿಧಾನವನ್ನು ಅನುಸರಿಸಲಾಗಿದೆ. ಪ್ರಕಟಿತ ಕೃತಿಗಳು, ನೀರಾವರಿ ಇಲಾಖೆಯ ವರದಿ, ಪತ್ರಿಕಾವರದಿ, ಗ್ಯಾಸೆಟಿಯರ್ ಮತ್ತು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಲಾಗಿದೆ. ಜಲಸಂಬಂಧಿ ಚಳವಳಿಗಳು ಅಧ್ಯಯನದ ವಸ್ತುವಾಗಿದ್ದರೂ, ಇದಕ್ಕೆ ಪೂರಕವಾಗಿ ಹಿನ್ನೆಲೆ, ನದಿ, ಅಣೆಕಟ್ಟು ಇತರ ಎಲ್ಲ ಸಂಗತಿಗಳು ತಿಳಿಸಲು ಪ್ರಯತ್ನಿಸಲಾಗಿದೆ. ಕೆಲವು ಮುಖ್ಯಾಂಶಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

❑❑

# ೨. ಜಲದ ಹಿನ್ನೆಲೆ ಮತ್ತು ನೀರಾವರಿಯ ಬೆಳವಣಿಗೆ

ಪಂಚಮಹಾಭೂತಗಳಾದ ಭೂಮಿ, ಆಕಾಶ, ಬೆಂಕಿ, ನೀರು ಮತ್ತು ಗಾಳಿ ಎಂಬುವು ಮಾನವನಿಗೆ ಅನಾದಿಕಾಲದಿಂದಲೂ ಮೂಲ ವಸ್ತುಗಳಾಗಿವೆ. ನೆಲ ಮತ್ತು ಜಲವು ಸಸ್ಯ, ಪ್ರಾಣಿ ಸಂಕುಲಕ್ಕೂ ಅತ್ಯಗತ್ಯ. ಮೇಲಿನವುಗಳಲ್ಲಿ ಒಂದಿಲ್ಲದಿದ್ದರೂ ಜೀವನ ಅಸಾಧ್ಯವಾಗುತ್ತದೆ. ಪ್ರಾಚೀನ ಕಾಲದಿಂದಲೂ ಮಾನವ ತನ್ನ ಶರೀರ ಸುಖಕ್ಕೆ, ಆಹಾರ ಪಡೆಯಲು ಅಸಾಧಾರಣವಾದ ಜಲಸಂಪತ್ತನ್ನು ಬಳಸಿಕೊಂಡಿದ್ದಾನೆ. ಪುರಾಣಪುರುಷರು ಜಲಕ್ರೀಡೆಯಾಡುವಾಗ ಹಗಲು ರಾತ್ರಿಯೆನ್ನದೆ ನೀರಲ್ಲಿರುತ್ತಿದ್ದು, ಆ ಕ್ರೀಡೆ ಬಲ್ಲ ಪರಿಣಿತರಾಗಿದ್ದರು. ಹೀಗಾಗಿ ಜಲವು ಹಸಿವನ್ನು ನಿವಾರಿಸಿಕೊಳ್ಳಲು, ದೈಹಿಕ ಬಾಧೆಯನ್ನು ತೀರಿಸಿಕೊಳ್ಳಲು ಮಾತ್ರವಲ್ಲದೆ, ನಾನಾ ರೀತಿಯ ಬಳಕೆಗಳಿಗೆ ಎಡೆಮಾಡಿಕೊಟ್ಟಿದೆ. ತನ್ನ ವೈಜ್ಞಾನಿಕ ಶಕ್ತಿಯಿಂದ ಮಾನವ ಚಂದ್ರನಲ್ಲಿಯೂ ಸಹ ನೀರಿರುವುದನ್ನು ಇಂದು ಪತ್ತೆ ಮಾಡಿದ್ದಾನೆ.

ನೀರಾವರಿಯ ಉಗಮವು ಜಗತ್ತಿನ ಮಾನವನ ಉಗಮದಷ್ಟೇ ಇತಿಹಾಸವನ್ನು ಹೊಂದಿದೆ. ಮಾನವನಿಗೆ ಉಸಿರಾಗಿರುವ ಜಲ ವಿಶ್ವದ ಪ್ರಗತಿದಾಯಕ ಸಂಪನ್ಮೂಲ. ಇದು ಮಾನವನ ಪ್ರಾಯೋಗಿಕ ಜೀವನಶೈಲಿ, ನೀರಾವರಿ ಬೆಳವಣಿಗೆಗೆ ಕಾರಣವಾಗಿದೆ. ನದಿ-ಕಣಿವೆಗಳಲ್ಲಿನ ನೀರನ್ನು ಬಂಜರು ಭೂಮಿಗೆ ಹಾಯಿಸಿ ಸಾಗುವಳಿ ಮಾಡುವ ಮೂಲಕ ನಾಗರಿಕತೆ ಹುಲುಸಾಗಿ ಬೆಳೆಯಿತು. ಈ ಹಿನ್ನೆಲೆಯಲ್ಲಿ ಪ್ರಾಚೀನ ಕಾಲದ ಭಾರತೀಯರು ನದಿಗಳಿಂದ ಕೃಷಿ ಆರಂಭಿಸಿದ್ದು ಸ್ಪಷ್ಟ.[೧]

ಪ್ರಾಚೀನ ಕಾಲದ ಮಾನವ ಹಳ್ಳ-ಕೊಳ್ಳಗಳಲ್ಲಿ ನೀರು ತುಂಬಿಕೊಂಡು (ಕೊಡ) ಕೃಷಿ ಮಾಡುತ್ತಿದ್ದ. ಆ ಸಂದರ್ಭದಲ್ಲಿ ಪರ್ಶಿಯನ್ ಚಕ್ರವು ಹೊಸ ಶೋಧನೆಯಾಗಿತ್ತು. ಇದರಿಂದ ಕೃಷಿ ಮತ್ತು ಪ್ರಾಣಿಗಳಿಗೆ ನೀರಿಡುತ್ತಿದ್ದರು. ಕ್ರಿ. ಪೂ. ೨೦೦ ರಲ್ಲಿ ಆರ್ಕಿಮೀಡಿಸ್ ನೀರಿನ ಒತ್ತಡದ ಬಗ್ಗೆ ಶೋಧನೆ ಮಾಡಿದ ತರುವಾಯ ನೀರಿನ ಬಳಕೆ, ಉಪಯೋಗ, ಇತರೆಲ್ಲ ಪ್ರಗತಿಗೆ ನಾಂದಿಯಾಯಿತು.

ಈಜಿಪ್ಟ್‌ನ ಮೇಲ್ದಂಡೆ ಭಾಗದ ಬಹ್ರಾಯುಸುಪ್ ಎಂಬಲ್ಲಿ ಹಳೆಯದಾದ ಒಂದು ಕಾಲುವೆಯಿದ್ದು , ಇದನ್ನು ಪ್ರಾಚೀನ ಕಾಲದ ಬೈಬಲ್ ರಚನೆ ಕಾಲದಲ್ಲಿ ನಿರ್ಮಿಸಿದರೆಂಬ ಪ್ರತೀತಿಯಿದೆ. ತರುವಾಯ ಕ್ರಿ. ಪೂ. ೩೩೦೦ರಿಂದ ಇಂದಿನವರೆಗೆ ನೈಲ್ ನದಿಯಿಂದ ಈಜಿಪ್ಟ್ ನಾಗರಿಕತೆ ಉತ್ತುಂಗ ಶಿಖರ ಮುಟ್ಟಿದ್ದು ಇತಿಹಾಸ. ಕ್ರಿ. ಪೂ. ೨೦೦ ರಲ್ಲಿಯೇ ಚೀನಾದಲ್ಲಿ ಪ್ರಸಿದ್ಧವಾದ ಕಿಯಾಂಗ್ ಎಂಬ ಅಣೆಕಟ್ಟು ಇದ್ದು , ಮಿಲಿಯನ್ ಎಕರೆಗೆ ಇದ್ದು ನೀರುಣಿಸುತ್ತಿತ್ತೆಂಬುದು ಗಮನಾರ್ಹ.

ಏಷ್ಯಾದ ಚೀನಾ, ಭಾರತ ಮತ್ತು ಮಧ್ಯಪ್ರಾಚ್ಯದ ಯುಫ್ರಟೀಸ್, ಟೈಗ್ರಿಸ್ ಹಾಗೂ ನೈಲ್ ನದಿಗಳು ಪ್ರಾಚೀನ ಕಾಲದಲ್ಲಿ ಪ್ರಾಯೋಗಿಕ ನೀರಾವರಿಗೆ ಮಾದರಿಯಾಗಿದ್ದವು. ಗ್ರೀಸ್ ಮತ್ತು ಇಟಲಿಗಳಲ್ಲಿ ನೀರಿನ ಪ್ರಯೋಜನ ಕೃಷಿಗಷ್ಟೆ ಮೀಸಲಾಗಿತ್ತು. ಮೆಡಿಟರೇನಿಯನ್, ಸ್ಪೈನರು ಚಿಕ್ಕ ಚಿಕ್ಕ ಜಲಾಶಯಗಳನ್ನು ಕಟ್ಟುತ್ತಿದ್ದರು. ರೋಮನ್ ಸಾಮ್ರಾಜ್ಯದ ಕಾಲಕ್ಕೆ ರೈತರು ನೀರಾವರಿಯಿಂದ ವೈಭವಯುತ ಬದುಕು ಸಾಧಿಸಿದ್ದರು.

ಅಮೆರಿಕದಲ್ಲಿನ ಮೂಲ ನಿವಾಸಿಗಳು ರೆಡ್ ಇಂಡಿಯನ್ನರು. ಇಲ್ಲಿಗೆ ವಸಾಹತುಗಾರರು ಬರುವ ಮುನ್ನ ಇವರು ನೀರಾವರಿಯಲ್ಲಿ ತಲ್ಲೀನರಾಗಿದ್ದರಂತೆ. ತರುವಾಯ ಸ್ಪೈನಿನ ಶೋಧಕರು ಸ್ಥಳೀಯರಿಂದ ಮೆಕ್ಸಿಕೊ ನಗರವನ್ನು ನಿರ್ಮಿಸಿ, ಹೊಲಗಳಿಗೆ ನೀರನ್ನು ಕಾಲುವೆಗಳಿಂದ ಬಿಡುತ್ತಿದ್ದರು. ಪೆರುವಿನಲ್ಲಿ ಇಂಡಿಯನ್ನರು ಕಲ್ಲಿನ ಅಣೆಕಟ್ಟು ಕಟ್ಟಿ ನೀರಾವರಿ ಮಾಡಿದ್ದು ಗಮನಾರ್ಹ. ಇಂಡಿಯನ್ನರು ವ್ಯಾಪಕವಾಗಿ ನೆಲಸಿರುವುದು ಅರಿಜೋನದ ಗಿಲಾ ನದಿ ಪಕ್ಕದಲ್ಲಿ. ಕ್ರಿ. ಶ. ೭೦೦ರಲ್ಲಿ ಇವರು ಹೊಸ ಮೆಕ್ಸಿಕೊದಲ್ಲಿ ಪ್ರಾಯೋಗಿಕ ನೀರಾವರಿಯನ್ನು ಕಾಲುವೆಗಳ ಮೂಲಕ ಎತ್ತರ ಪ್ರದೇಶಕ್ಕೆ ನೀರು ಬಿಟ್ಟು, ವಿಸ್ತರಣೆಗೊಂಡಿದ್ದರು.

ಕ್ರಿ. ಶ. ೧೭ ಮತ್ತು ೧೮ನೇ ಶತಮಾನದಲ್ಲಿ ಸ್ಪೈನಿನ ನಿವಾಸಿಗಳು ನೀರಾವರಿ ಕಟ್ಟೆಗಳನ್ನು ಕಟ್ಟಿದ್ದರು. ಹೊಸ ಮೆಕ್ಸಿಕೊದ ರಿಯೊಗ್ರಾಂಡೆ, ಟೆಕ್ಸಾಸ್ ಮತ್ತು ದಕ್ಷಿಣ ಕ್ಯಾಲಿಫೋರ್ನಿಯಾಗಳಲ್ಲಿ ಕೃತಕ ನೀರಾವರಿ ಪ್ರಯೋಗಗೊಂಡಿತು. ೧೮೩೫ರ ವರೆಗೆ ಇಂತಹ ನೀರಾವರಿ ಕೆಲಸಗಳಲ್ಲಿ ಅವರು ಪ್ರವೀಣರಾಗಿದ್ದರು.

ಅಮೆರಿಕದ 'ಉಟ್ಟಾ' ಎಂಬಲ್ಲಿ ಪ್ರಥಮವಾಗಿ ನೀರಾವರಿ, ಕೃಷಿ ಆರಂಭವಾಯಿತು. ೧೮೪೭ರವರೆಗೂ ಅವರು ಚರ್ಚ್ ಆದೇಶದಂತೆ ಕಾಲುವೆ ತೋಡಿ ನೀರಾವರಿ ಮಾಡುತ್ತಿದ್ದರು. ೧೮೬೦ಕ್ಕೆ ಅಲ್ಲಿ ೩೬೦೦ ನೀರಾವರಿ ಫಾರಂಗಳಿದ್ದವು. ೧೮೬೯ರಲ್ಲಿ ಅಮೇರಿಕದಲ್ಲಿ ನೀರಾವರಿಯ ಎರಡನೇ ವಿಸ್ತರಣೆಯಾಯಿತು. ಈ ಬೆಳವಣಿಗೆಗೆ ಹೊರಸ್ ಗ್ರೀಲಿ ಎಂಬ ಪ್ರಕಾಶಕನೇ ಕಾರಣಕರ್ತ. ಜನರ ಪ್ರತಿರೋಧವಿದ್ದುದರಿಂದ ಪ್ರತಿನಿಧಿಗಳು, ಅಧಿಕಾರಿಗಳು ಇಂಥ ನೀರಾವರಿ ಕೆಲಸಗಳನ್ನು ಮಾಡಿಸುತ್ತಿದ್ದರೆಂಬುದು ಸ್ಪಷ್ಟ ಸಂಗತಿ.

ಪ್ರಾಚೀನ ನಾಗರಿಕತೆಗಳಾದ ಈಜಿಪ್ಟ್, ಮೆಸಪಟೋಮಿಯಾ, ಚೀನಾ ಮತ್ತು ಸಿಂಧೂ ಬಯಲಿನ ನಾಗರಿಕತೆಗಳಲ್ಲದೆ, ಸಾಗರ, ನದಿ, ಕಾಲುವೆಗಳ ದಡದಲ್ಲಿ ಜನರು ಉತ್ಕೃಷ್ಟ ಜೀವನ ನಡೆಸಿದ್ದರು. ಅಮೇಜಾನ್, ಮಿಸಿಸಿಪಿ, ಹೊಯ್ಯಾಂಗೊ, ಪನಾಮ, ಗಂಗಾ, ಸಿಂಧೂ ಮುಂತಾದ ನದಿ-ಕಾಲುವೆಗಳು ನೀರಾವರಿ ಅಭಿವೃದ್ಧಿಗೆ ಮೂಲವಾಗಿದ್ದು, ಕೆಲವು ಜಲವಿವಾದಕ್ಕೂ ಕಾರಣವಾಗಿವೆ.

ಭಾರತದಲ್ಲಿ ಜಲದ ಉಪಯೋಗವೇ ಸಿಂಧೂ ಬಯಲಿನ ನಾಗರಿಕತೆ ಎಂದು ಗುರುತಿಸುತ್ತಾರೆ. ಇಲ್ಲಿನ ನೀರಾವರಿ ಪದ್ಧತಿಯಲ್ಲಿ ಕಾಲುವೆ, ಈಜುಕೊಳ, ಬಾವಿ, ಒಳಚರಂಡಿ ವ್ಯವಸ್ಥೆ, ಸ್ನಾನಗೃಹ, ನಗರ, ಬೀದಿ ಇತರ ಅವಶೇಷಗಳು ಕಂಡು ಬಂದಿರುವುದರಿಂದ ನಾಗರಿಕತೆಯ ಮೊದಲ ಹಂತವನ್ನು ನೋಡಬಹುದು. ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾ ಸಂಸ್ಕೃತಿಯಿಂದಲೂ ನೀರಿನ ಬಳಕೆ ಬಗ್ಗೆ ಪುರಾತತ್ವಜ್ಞರು ಸ್ಪಷ್ಟೀಕರಿಸಿದ್ದಾರೆ.

ವೇದ ಮತ್ತು ಬ್ರಾಹ್ಮಣಕಗಳಲ್ಲಿ ನದಿ, ಕೆರೆ, ಕಾಲುವೆ ಅಣೆಕಟ್ಟುಗಳ ಉಲ್ಲೇಖವಿದೆ. ಗಂಗಾ ಬಯಲಿನ ಆರ್ಯರ ಬದುಕು ಸಂಘಟನೆಯಿಂದ ಪ್ರೇರಿತವಾಗಿತ್ತು. ಆರ್ಯರೊಡನೆ ಕಾದಾಡಿದ ಅಸುರರು ಸಮುದ್ರ ತೀರದಲ್ಲಿ ನೆಲಸಿದ್ದರು.[೨] ಈ ಕಾಲದ ಭಾರತವು ಕೃಷಿ ಸಂಪದ್ಭರಿತವಾಗಿತ್ತು ಎನ್ನುವುದಕ್ಕೆ ಇಲ್ಲಿನ ವಾಯುಗುಣ, ಮಳೆ, ಬೆಳೆಗಳು ಕಾರಣವಾಗಿವೆ. ಮೂರು ಬಾರಿ ನಗರೀಕರಣವಾದಾಗ ಜನ ಸಮುದಾಯಗಳು ಚಮರಿದವು. ಅಂತಿಮ ವೇದಗಳ ಕಾಲಕ್ಕೆ ಆರ್ಯ ಸಂಸ್ಕೃತಿಯಲ್ಲಿ ನದಿ ನೀರಿನ ಬಳಕೆ ಪ್ರಮುಖವಾಗಿತ್ತು. ಇಂದ್ರ ಕೆರೆ, ಕಟ್ಟೆ, ನಗರ ದುರ್ಗಗಳನ್ನು ಕೆಡವುತ್ತಿದ್ದನೆಂದು ತಿಳಿದುಬರುತ್ತದೆ.[೩]

ಮಹಾಕಾವ್ಯಗಳಾದ ರಾಯಾಯಣ ಮತ್ತು ಮಹಾಭಾರತದಲ್ಲಿ ನೀರಾವರಿ ಕಾಮಗಾರಿಗಳ ಉಲ್ಲೇಖವಿದೆ. ರಾಮಾಯಣದಲ್ಲಿ ತಿಳಿದು ಬರುವಂತೆ ಆಂಜನೇಯನ ಸಾಗರೋಲ್ಲಂಘನೆ, ಲಂಕಾಪಟ್ಟಣಕ್ಕೆ ಸೇತುವೆ ನಿರ್ಮಾಣ ಮತ್ತು ಶ್ರವಣಕುಮಾರನ ಕಥೆಗಳು ಗಮನಾರ್ಹ. ಮಹಾಭಾರತದಲ್ಲಿ ಕರ್ಣನ ಜೀವನದ ಹಿನ್ನೆಲೆ ವಿವರಿಸುವಾಗ ಗಂಗಾ ಜಲದ ವಿವರ ಮುಖ್ಯವೆನಿಸಿದೆ. ಪಾಂಡವರು ಹನ್ನೆರಡು ವರ್ಷಗಳ ಕಾಲ ವನವಾಸ ತೀರಿಸಲು ದ್ವೈತವನದಲ್ಲಿ ತಂಗುವರು. ಅಲ್ಲಿಯ ಒಬ್ಬ ಕಿರಾತನಿಗೆ ಹಸ್ತಿನಾವತಿ ಸುದ್ದಿ ತಿಳಿಯಲು ರಹಸ್ಯವಾಗಿ ಕಳುಹಿಸಿದ್ದರು. ನೋಡಿ ಬಂದ ಕಿರಾತನು ದುರ್ಯೋಧನನು ರಾಜ್ಯದಲ್ಲಿ ಏನೆಲ್ಲಾ ಬದಲಾವಣೆ ಮಾಡಿದ್ದ. ಪಕ್ಷಪಾತವಿಲ್ಲದೆ ನ್ಯಾಯ, ಭಕ್ತಿ ಮತ್ತು ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳಿಂದ ರಾಜ್ಯಭಾರ ನಡೆಸುತ್ತಾನೆ. ಯುವ ರಾಜನಾದ ದುಶ್ಯಾಸನನಿಗೆ ರಾಜ್ಯಭಾರ ವಹಿಸಿ ತಾನೂ ಧರ್ಮ ಕಾರ್ಯಗಳಲ್ಲಿ ನಿರತನಾಗಿದ್ದನೆಂದು ಯುಧಿಷ್ಠಿರನಿಗೆ ತಿಳಿಸುತ್ತಾನೆ.[೪] ದುರ್ಯೋಧನ ಜನಮೆಚ್ಚುವಂತೆ ಕೆರೆ, ಕಟ್ಟೆ, ಕಾಲುವೆಗಳ ನಿರ್ಮಾಣ ಮಾಡಿದ್ದ. ಪ್ರಜಾಸೇವಾಮನೋಭಾವದಲ್ಲಿ ಕೃಷಿಯು ಮುಖ್ಯವಾಗಿತ್ತು. ಜಲ ಸಂಪತ್ತು ಎಂದರೆ ಇವನಿಗೆ ಎಲ್ಲಿಲ್ಲದ ಆಸಕ್ತಿ ಎಂಬುದಕ್ಕೆ ಮೇಲಿನ ಸಂಗತಿಗಳೇ ಸಾಕ್ಷಿ.

ಇಲ್ಲಿನ ನದಿಗಳು ಮಹಾನ್ ವ್ಯಕ್ತಿಗಳ ಜನನ ಮತ್ತು ಸಿದ್ಧಿ-ಸಾಧನೆಗಳಿಗೆಲ್ಲ ಆವಾಸ ಸ್ಥಾನವಾಗಿದ್ದವು. ಮಹರ್ಷಿವಾಲ್ಮೀಕಿ 'ತಾಮಸ' ನದಿದಡದಮೇಲೆ ಜನಿಸಿದರೆ, ಗೌತಮಬುದ್ಧ 'ನಿರಂಜನ' ನದಿದಡದ ಮೇಲೆ ಜನಿಸುತ್ತಾನೆ. ಹೀಗೆ ಗಂಗಾ, ಯಮುನಾ, ಬ್ರಹ್ಮಪುತ್ರಾ, ಕಾವೇರಿ, ತುಂಗಭದ್ರಾ, ಕೃಷ್ಣಾ, ನರ್ಮದಾ ಮುಂತಾದ ನದಿಗಳು ಜನನ, ತಪಸ್ಸು, ಯುದ್ಧ ಇತರ ಸಂದರ್ಭಗಳಿಗೆ ಮಹತ್ವ ಪಾತ್ರವಹಿಸಿವೆ. ಭಾರತದ ಮೇಲೆ ದಂಡೆಯಾತ್ರೆ ಮಾಡಿದ ಅಲೆಗ್ಸಾಂಡರ್ ಸಿಂಧೂನದಿಯನ್ನು ದಾಟುವುದೇ ಒಂದು ಸಾಹಸ. ಹಿಂದಿರುಗಿ ಹೋಗುವಾಗ ಅವನು ಝೀಲಂ ನದಿಯಲ್ಲಿ ಅವಸಾನ ಹೊಂದುವುದು ಸ್ಮರಣೀಯ. ಹರ್ಷವರ್ಧನ ಮತ್ತು ಎರಡನೇ ಪುಲಕೇಶಿಯ ನಡುವೆ ನರ್ಮದಾನದಿ ದಡದಲ್ಲಿ ಯುದ್ಧವಾಗಿ ಪುಲಕೇಶಿಗೆ ಜಯ ತಂದುಕೊಟ್ಟ ಸಂಗತಿ ಆ ನದಿ ಮಹಿಮೆ, ಜಲಬಲ ಇತರ ನೈಸರ್ಗಿಕ ಕಾರಣಗಳಿರಬಹುದು. ಕಲ್ಯಾಣ ಚಾಲುಕ್ಯರ (೧೦೬೮) ಅರಸ ಒಂದನೇ ಸೋಮೇಶ್ವರನಿಗೆ ಗುಣಮುಖವಾಗದ ವ್ಯಾಧಿಯಿಂದ ನರಳಿ ಬಳ್ಳಾರಿ ಜಿಲ್ಲೆಯ ಹಿರೇಕುರುವತ್ತಿ ಬಳಿ ತುಂಗಭದ್ರಾನದಿ ಪ್ರವೇಶಿಸಿ ಜಲಸಮಾಧಿಯಾಗುವುದು ಅಪೂರ್ವ ಘಟನೆ. ವಿಜಯನಗರದ ಅರಸ ಅಳಿಯ ರಾಮರಾಯ ಕೃಷ್ಣಾನದಿ ಆಸುಪಾಸಿನ

ರಕ್ಕಸಗಿ-ತಂಗಡಗಿ ಯುದ್ಧದಲ್ಲಿ ಭಾಗವಹಿಸದಿದ್ದರೆ, ವಿಜಯನಗರ ಸಾಮ್ರಾಜ್ಯದ ಭವಿಷ್ಯವೇ ಬದಲಾಗುತ್ತಿತ್ತು. ಹೀಗೆ ನದಿಗಳು ಅನೇಕ ಕಾರಣಗಳಿಗಾಗಿ ಮಹತ್ವವೆನಿಸಿವೆ.

ದಕ್ಷಿಣ ಭಾರತದಲ್ಲಿ ವಿವಿಧ ರಾಜವಂಶಗಳು ಕೈಗೊಂಡ ನೀರಾವರಿ ಕಾಮಗಾರಿಗಳನ್ನು ಅವಲೋಕಿಸುವುದು ಸೂಕ್ತ. ಬಹುತೇಕ ನದಿಗಳು ರಾಜ್ಯಗಳ ಗಡಿಮೀರಿ ಹರಿದು ಅಂತರರಾಜ್ಯ ಸಂಬಂಧವನ್ನು ಇಮ್ಮಡಿಗೊಳಿಸಿ ವಿವಾದವನ್ನುಂಟುಮಾಡಿವೆ. ಜನಸಾಮಾನ್ಯರ ಪಾತ್ರವು ಇದರಲ್ಲಿ ಗಮನಾರ್ಹ.

ಉತ್ತರ ಭಾರತದ ನದಿಗಳು ಜೀವನದಿಗಳಾದರೆ, ದಕ್ಷಿಣ ಭಾರತದ ನದಿಗಳು ಮಳೆಯಾಶ್ರಿತ ನದಿಗಳಾಗಿವೆ. ಹೋಲಿಕೆಗೆ ದಕ್ಷಿಣಭಾರತದಲ್ಲಿ ಕೆರೆ, ಕಟ್ಟೆ, ಅಣೆಕಟ್ಟುಗಳು ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿನ ನೀರಾವರಿಯ ಸದುಪಯೋಗವನ್ನು, ವಿವಿಧ ರೀತಿಯ ಲಕ್ಷಣಗಳನ್ನು ಟಿ. ವಿ. ಶ್ರೀನಿವಾಸನ್ ಅವರು ತಿಳಿಸಿದ್ದಾರೆ.[೫] ಇದೇ ರೀತಿ ತಿರುವಳ್ಳುರ್ ಅವರು ಹೇಳುವಂತೆ 'ಜಲವಿಲ್ಲದಿದ್ದರೆ ಈ ಜಗತ್ತು ನಿರ್ಮಾಣವಾಗುತ್ತಿರಲಿಲ್ಲ ಮತ್ತು ನೀರಿಲ್ಲದಿದ್ದರೆ ಋತುಮಾನಗಳೇ ಸಂಭವಿಸುತ್ತಿರಲಿಲ್ಲ' ಎನ್ನುವುದು ನಿರ್ವಿವಾದ ಸಂಗತಿ. ನೀರನ್ನು ಚಿನ್ನಕ್ಕಿಂತ ಅಮೂಲ್ಯವೆಂದು ದಕ್ಷಿಣ ಭಾರತದ ಜನರು ನಂಬಿದ್ದರು. ಇದು ಮಳೆಯ ಅಗತ್ಯತೆ, ಬರಗಾಲವನ್ನು ಸಂಕೇತಿಸುವಂತಿದೆ. ಹೀಗಾಗಿ ಇವರು ತಮ್ಮ ನೀರಾವರಿಯ ಇತಿಹಾಸವನ್ನು ಪುರಾಣ-ದಂತಕತೆಗಳಿಂದ ತಿಳಿಸುವುದನ್ನು ನೋಡಿದರೆ, ಬೃಹತ್‌ಶಿಲಾ ಸಂಸ್ಕೃತಿಯಲ್ಲಿ ನೀರಿನ ಬಳಕೆ ಬಗೆಗೆ ನಿರ್ದಿಷ್ಟ ಕಾಲ, ಮಹತ್ವ ಸಿಕ್ಕಿದಂತಾಗಿದೆ.[೬] ಈ ಕಾಲಕ್ಕೆ ಸಂಬಂಧಪಟ್ಟ ನೆಲೆಗಳನ್ನು ಉತ್ಖನನ ಮಾಡಿದ್ದು, ಕೃಷ್ಣಾ, ತುಂಗಭದ್ರಾ, ಕಾವೇರಿ ನದಿಗಳ ಪರಿಸರದಲ್ಲಿ ಅವು ವ್ಯಾಪಕವಾಗಿವೆ.[೭] ಸ್ವಾಭಾವಿಕ ಜಲಸಂಪತ್ತು ರಕ್ಷಿಸಲು ಅಣೆಕಟ್ಟು, ಜಲಾಶಯಗಳು ಹಿಂದೆ ನಿರ್ಮಾಣವಾಗಿದ್ದವು. ಮಳೆ ಬಾರದಿದ್ದರೂ ನೀರು ಸಂಗ್ರಹಿಸುವ ಕಲೆ ಭಾರತೀಯರಿಗೆ ಈ ಹಿನ್ನೆಲೆಯಲ್ಲಿ ತಿಳಿದಿತ್ತು. ಶೇ. ೬೦ರಷ್ಟು ಬೃಹತ್‌ಶಿಲಾ ಸಂಸ್ಕೃತಿ ನೆಲೆಗಳಲ್ಲಿ ಕೃತಕ ನೀರಾವರಿಯ ಲಕ್ಷಣಗಳು ಕಂಡು ಬಂದಿವೆ.[೮] ೧೮೫೦ರಲ್ಲಿ ಇವುಗಳನ್ನು ಮೊದಲು ಪತ್ತೆ ಹಚ್ಚಿದವನು ಮೆಡೋಸ್ ಟೇಲರ್. ಕೃತಕ ಕೆರೆನೀರಾವರಿಯ ಸ್ಥಳಗಳೆಂದರೆ : ಬ್ರಹ್ಮಗಿರಿ, ಚಂದ್ರವಳ್ಳಿ, ಮಸ್ಕಿ(ಕರ್ನಾಟಕ), ಪೋರಕಲಾಮ್ (ಕೇರಳ), ಸಾಣೂರು ಮತ್ತು ಕುನ್ನತ್ತೂರು (ತಮಿಳುನಾಡು) ಇತ್ಯಾದಿ[೯].

ನೀರಾವರಿ ಕಾರ್ಯಗಳಲ್ಲಿ ಕೆರೆ, ಕಾಲುವೆ, ಕೋಡಿಗಳ ನಿರ್ಮಾಣವು ಮಹತ್ತರ ಧಾರ್ಮಿಕ, ಸಾಮಾಜಿಕ ಕಾರ್ಯಗಳೆಂಬ ವಿಚಾರ ಶಾಸನಗಳಲ್ಲಿದೆ. ಪ್ರಭಾವಿತರು, ಸಂಸ್ಥಾಪಕರು, ರಾಜರು, ನೊಬೆಲರು ಮತ್ತು ಅಧಿಕಾರಿಗಳು ನೀರಾವರಿ ಕೆಲಸಗಳನ್ನು ಮಾಡಿಸುತ್ತಿದ್ದರು[೧೦]. ಕಾಕತೀಯರು ಕೈಗೊಂಡ ನೀರಾವರಿ ಕೆಲಸಗಳ ಬಗ್ಗೆ ಶಾಸನಗಳು ಬೆಳಕು ಚೆಲ್ಲುತ್ತವೆ.[೧೧] ರಾಜ್ಯಾಳ್ವಿಕೆಯ ಸಂದರ್ಭದಲ್ಲಿ ಅರಸರು ನೀರಿನತೆರಿಗೆ (ನೀರ್ಕೂಲಿ)ಯನ್ನು ಪಡೆಯುತ್ತಿದ್ದರು. ಚಾರ್ಲ್ಸ್ ಟ್ರವೆಲಿನ್ ಅವರು ನೀರಾವರಿ ವಿಲ್ಲಕ್ಕಿಂತಲೂ ಮಿಗಿಲಾದದು ಎಂದು ಈ ಪ್ರದೇಶದ ಕೃಷಿ ಸಂಪತ್ತನ್ನು ಅವಲೋಕಿಸಿದಾರೆ.[೧೨]

ದಕ್ಷಿಣ ಭಾರತದಲ್ಲಿ ವ್ಯವಸಾಯವು ಆದಿ ಕಬ್ಬಿಣಯುಗದಿಂದಲೇ ಇತ್ತೆಂಬುದು ಸ್ಪಷ್ಟ. ಪುರಾತತ್ತ್ವ ಆಧಾರಗಳ ಪ್ರಕಾರ ಆದಿಚೆನ್ನಲ್ಲೂರು ಬಳಿ ತಾಮರಪರಣಿ ಪರಿಸರದಲ್ಲಿ ಭತ್ತವನ್ನೂ ಹೆಚ್ಚಾಗಿ ಬೆಳೆಯುತ್ತಿದ್ದರು. ಇದರ ಬಗ್ಗೆ ನಿಖರವಾಗಿ ಗುರುತಿಸುವುದು ಐತಿಹಾಸಿಕ ರಾಜವಂಶಗಳ ಆಳ್ವಿಕೆಯಿಂದಲೇ ಎನ್ನಬಹುದು.

ಸಂಗಮಕಾಲದ ದಕ್ಷಿಣಭಾರತದಲ್ಲಿ 'ತಿಣೈ' ಎಂಬ ಭೂಪ್ರದೇಶವಿತ್ತು. 'ತೊಲ್ಕಪ್ಪಿಯಂ' ಗ್ರಂಥದಲ್ಲಿ ಇದರ ಉಲ್ಲೇಖವಿದೆ. ಇದರಲ್ಲಿ ಐದು ಭೌಗೋಳಿಕ ಪ್ರದೇಶಗಳಿವೆ. ಕಾದುರೈ-ಉಲಗಮ್ (ಅರಣ್ಯ), ಮೈವರೈ-ಉಲಗಂ (ಬೆಟ್ಟಗಳು), ತಿರುಪುನಲ್ ಉಲಗಮ್ (ಸಮತಟ್ಟಾದ ಭೂಮಿ) ಮತ್ತು ಪೆರುಮನಲ್ ಉಲಗಮ್ (ಮರುಳುಗಾಡು) ಎಂದು ನಾಲ್ಕನ್ನು ತಿಳಿಸಿದ್ದಾರೆ. ಮಾನವ ನಿರ್ಮಿತ ಪ್ರದೇಶಗಳನ್ನು ಕವಿಗಳು ಕುರುಂಜಿ (ಪರ್ವತ ಪ್ರದೇಶ), ಮುಲೈ (ಅರಣ್ಯ, ಸಸ್ಯವರ್ಗ), ಮರುಥಂ (ಕೃಷಿ ಪ್ರದೇಶ), ನೆಥಾಲ್ (ಕರಾವಳಿ ಪ್ರದೇಶ), ಪಾಲೈ (ಬಂಜರು ಭೂಮಿ) ಎಂಬ ೫ ಪ್ರದೇಶಗಳನ್ನು ತಿಳಿಸಿದ್ದಾರೆ. ಚೇರ, ಚೋಳ ಮತ್ತು ಪಾಂಡ್ಯ ಅರಸರು ವ್ಯವಸಾಯ, ನೀರಾವರಿ ಚಟುವಟಿಕೆಗಳಿಗೆ ಪ್ರೋತ್ಸಾಹಿಸಿದ್ದರು. ಚೋಳ ರಾಜ್ಯದಲ್ಲಿ ಕಾವೇರಿನದಿಯ ಪ್ರವಾಹದಿಂದ ಅನೇಕ ಹಾನಿಯಾಗಿತ್ತು. ರಾಜ ಕರಿಕಾಳ ಚೋಳನು ರಕ್ಷಣಾತ್ಮಕ ಕೆಲಸಗಳನ್ನು ಕಾವೇರಿ ನದಿಯ ಎರಡೂ ದಂಡೆಗಳ ಅಭಿವೃದ್ಧಿ ಮಾಡಿದ ಬಗೆಗೆ ಶಾಸನಗಳ ಉಲ್ಲೇಖವಿದೆ. 'ಶಿಲಪ್ಪದಿಗಾರಂ'ನಲ್ಲಿ ಕಾವೇರಿನದಿ ಮತ್ತು ಕಾಲುವೆಗಳ ನೀರು ಸರಬರಾಜು ಮತ್ತಿತರ ವಿವರಗಳಿವೆ.

ಸಂಗಮಕಾಲದ ತರುವಾಯ ಸಮಕಾಲೀನ ಸಂದರ್ಭದಲ್ಲಿ ನದಿನೀರಿಗಾಗಿ ಕದನ, ಯುದ್ಧ-ಸಂಘರ್ಷಗಳು ನಡೆದಿರಬೇಕು. ಇಲ್ಲವಾದರೆ ಆಳರಸರು ವಿಪುಲವಾಗಿ ನೀರಾವರಿ ಕೆಲಸಗಳನ್ನು ಕೈಗೊಳ್ಳಲು ಕಾರಣವೇನು? ಎಂಬ ಕುತೂಹಲಕ್ಕೆ ಕೆರೆ, ಅಣೆಕಟ್ಟುಗಳ ನಿರ್ಮಾಣದ ಹಿಂದೆ ಜನರ ಮನಸ್ಸು ಪ್ರತಿನಿಧಿಸಿದೆ ಎಂಬುದು ಸ್ಪಷ್ಟ.

ದಕ್ಷಿಣ ಭಾರತದ ಕರ್ನಾಟಕದಲ್ಲಿ ಆದಿಕಾಲದಿಂದಲೂ ನೀರಿನ ಉಪಯೋಗವಿದೆ ಎಂದು ನಂಬಲಾಗಿದೆ. ಬೃಹತ್‌ಶಿಲಾ ಸಂಸ್ಕೃತಿಯಲ್ಲಿ ಮಾನವ ವಿಪುಲವಾಗಿ ನೀರಿನ ಬಳಕೆ ಮಾಡಿಕೊಂಡ ಸಂಗತಿ ಗಮನಾರ್ಹ. ಮೌರ್ಯರು ನಾಲೆ, ನೀರ್ಗಾಲುವೆ, ಸರೋವರಗಳನ್ನಲ್ಲದೆ, ಅರವಟ್ಟಿಗೆಗಳ ನಿರ್ಮಾಣ ಮಾಡಿದ್ದನ್ನು ಐತಿಹಾಸಿಕವಾಗಿ ಗುರುತಿಸಬಹುದು.

ಶಾತವಾಹನರು ಕೈಗೊಂಡ ನೀರಾವರಿ ಕೆಲಸಗಳು ಬಳ್ಳಾರಿ ಜಿಲ್ಲೆಯ ಹಡಗಲಿ, ಬಳ್ಳಾರಿ, ಹೊಸಪೇಟೆ ತಾಲೂಕುಗಳಲ್ಲಿ ಕಂಡುಬರುತ್ತವೆ. ರಾಮಾಯಣದಲ್ಲಿ ಬರುವ ಐದು ಸರೋವರಗಳಲ್ಲಿ ಪಂಪಾಸರೋವರ ಈ ಕಾಲಕ್ಕೆ ಪ್ರಮುಖವಾಗಿತ್ತು. ಪ್ಲಿನಿ, ಟಾಲಮಿ ಮತ್ತು ಪೆರಿಪ್ಲಸ್ ಮೊದಲಾದ ಯಾತ್ರಿಕರು ಈ ಕಾಲದ ನೀರಾವರಿ ಬಗ್ಗೆ ತಿಳಿಸಿದ್ದಾರೆ. ಇಲ್ಲಿ ಶಾತಕರ್ಣಿಯ ಉಲ್ಲೇಖವುಂಟು. ಈ ಮನೆತನದ ೧೭ನೇ ರಾಜ ಹಾಲನು ಸಪ್ತಗೋದಾವರಿ ನದಿದಂಡೆಯ ಮೇಲೆ ಮದುವೆಯಾಗುತ್ತಾನೆ. ಇವರ ತರುವಾಯ ಬಂದ ಇಕ್ಷ್ವಾಕು ವಂಶದ ಅರಸರು ಕೃಷ್ಣಾನದಿಗೆ ಮಣ್ಣಿನ ಕಟ್ಟಡವನ್ನು

ನಿರ್ಮಿಸಿದ್ದರು. ಕ್ರಿ. ಶ. ೬ನೇ ಶತಮಾನಕ್ಕೆ ಸೇರಿದ ಕಾಲುವೆ, ಇಟ್ಟಿಗೆ, ಸುಣ್ಣದಕಲ್ಲು, ಮಣ್ಣಿನ ಅವಶೇಷಗಳು ಉತ್ಖನನದಿಂದ ಬೆಳಕಿಗೆ ಬಂದಿರುವುದರಿಂದ ಈ ವಂಶಕ್ಕೆ ಮಹತ್ವವಿದೆ. ಕದಂಬರ ಖ್ಯಾತ ಅರಸ ಮಯೂರವರ್ಮ ಅಭೀರ, ಶಕಸ್ಥಾನ, ಸೇಂದ್ರಕ, ಪುನ್ನಾಟ, ತ್ರಿಕೂಟ, ಪಲ್ಲವರು, ಪರಿಯಾತ್ರಿಕ ಮತ್ತು ಮೌಕಾರಿಗಳನ್ನು ಸೋಲಿಸಿದ ಸ್ಮರಣಾರ್ಥ ಚಂದ್ರವಳ್ಳಿ ಕೆರೆ ಕಟ್ಟಿಸಿದ್ದನು. ಕಾಕುಸ್ಥವರ್ಮ (೪೩೫-೪೫೦) ಕದಂಬ ರಾಜ್ಯದಲ್ಲಿ ಅನೇಕ ನೀರಾವರಿ ಕೆಲಸಗಳನ್ನು ಕೈಗೊಂಡನು. ತಾಳಗುಂದದ ಕೆರೆಯೇ ಇದಕ್ಕೆ ಉದಾಹರಣೆ. ಈ ಅರಸರು 'ನೀರಿಲಿ' ಎಂಬ ಮನೆಕಂದಾಯವಲ್ಲದೆ, ಪೆರಿಯಕೆರೆ ಎಂಬ ಹಿರಿಯ ಕೆರೆಗೆ ಕಂದಾಯ ಪಡೆಯುತ್ತಿದ್ದರು.

ಗಂಗ ಅರಸ ದುರ್ವಿನೀತ ಅನೇಕ ಕೆರೆ, ಅಣೆಕಟ್ಟುಗಳನ್ನು ಕಟ್ಟಿಸಿದನೆಂದೂ, ಅವು ಸಮುದ್ರದೋಣಾದಿಯಲ್ಲಿ ಇದ್ದವೆಂದೂ, ನಲ್ಲಾಳ ತಾಮ್ರ ಶಾಸನದಲ್ಲಿದೆ. ಈ ಕಾಲದ ಅನಂತವರ್ಮನ್ ಎಂಬ ಅರಸ ಕಲಿಂಗನಗರದ ಕೆರೆನಿರ್ಮಾಣ ಮಾಡಿದ್ದ. ಇವರು ನೊಳಂಬವಾಡಿ ಪ್ರದೇಶದಲ್ಲಿ ಕೆರೆ, ಕಟ್ಟೆಗಳನ್ನು ನಿರ್ಮಿಸಿದ್ದು ಸ್ಮರಣೀಯ.

ಪಾಂಡ್ಯರು ಮತ್ತು ಪಲ್ಲವರು ಕಾವೇರಿ, ಕೃಷ್ಣಾನದಿಗಳಿಗೆ ಕಾಲುವೆ ತೋಡಿಸಿ, ಅಡ್ಡ ಕಟ್ಟೆಗಳನ್ನು ನಿರ್ಮಿಸಿದ್ದಾರೆ. ಪಲ್ಲವರು 'ಕೂಪವರ್ತಕಸ್' ಎಂಬ ಹೆಸರಿನಲ್ಲಿ ನೀರಿನ ತೆರಿಗೆ ಸಂಗ್ರಹಿಸುತ್ತಿದ್ದರು. ಜಯಂತಿವರ್ಮನ್ (೬೪೫-೬೭೦) ವೈಗೈ ನದಿಗೆ ಕೆರೆ, ಕೋಡಿ, ಕಾಲುವೆಗಳ ನಿರ್ಮಾಣ ಮಾಡಿದ್ದನೆಂದು ತಿಳಿದು ಬರುತ್ತದೆ.

ಬದಾಮಿ ಚಾಲುಕ್ಯರ ಕಾಲದಲ್ಲಿ ವಿಪುಲವಾದ ನೀರಾವರಿ ಕಾಮಗಾರಿಗಳು ಚುರುಕುಗೊಂಡವು. ಎರಡನೇ ನಾಗವರ್ಮ ಅಭಿಧಾನ ವಸ್ತುಕೋಶದಲ್ಲಿ (೧೦೪೨) ದೇವಮಾತೃಕ ಮತ್ತು ನದೀ ಮಾತೃಕ ಎಂಬ ವ್ಯವಸಾಯದ ಎರಡು ಬಗೆಗಳನ್ನು ಹೇಳುತ್ತಾ, ಬರಿಯ ಮಳೆ ನೀರಲ್ಲದೆ, ನೀರಾವರಿ ಮಾಡುತ್ತಿರುವುದನ್ನು ತಿಳಿಸಲಾಗಿದೆ. ಚೋಳರು ಸಹಾ ಕಾವೇರಿ ನದಿಗೆ ಅಣೆಕಟ್ಟು ನಿರ್ಮಿಸಿ, ಅದರಿಂದ ನಾನಾ ಬಗೆಯ ಉಪಯೋಗವನ್ನು ರೈತರು ಪಡೆದಿದ್ದರು. ಕುಲೋತ್ತುಂಗಚೋಳ ಮೈಸೂರಿನ ಬಳಿ ಸಿಂಧುವಳ್ಳಿ ಕೆರೆ ಕಟ್ಟಿಸಿದ್ದನು.

ರಾಷ್ಟ್ರಕೂಟರ (೭೫೨) ಕಾಲದಲ್ಲಿ ಅರಸರಲ್ಲದೆ, ಶ್ರೀಮಂತರು, ಉನ್ನತ ಅಧಿಕಾರಿಗಳು ಸಾಮಾಜಿಕ ಕಾರ್ಯದಲ್ಲಿ ತೊಡಗಿದ್ದರು. ಈ ರಾಜ್ಯದಲ್ಲಿ ಪರಂಪೋಕು ಭೂಮಿ, ಸಸ್ಯವಲಯ, ಅಡವಿ, ಸರೋವರ ಮತ್ತು ಸಾರ್ವತ್ರಿಕ ಬಾವಿಗಳಿದ್ದವು. ಈ ಕಾಲಕ್ಕೆ ಸೇರಿದ ಶ್ರೀವಿಜಯನು ಕವಿರಾಜಮಾರ್ಗದಲ್ಲಿ 'ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್' ಎನ್ನುತ್ತಾ ಕರ್ನಾಟಕದ ಪ್ರಾಚೀನ ಭೌಗೋಳಿಕತೆಯನ್ನು ಎರಡುನದಿಗಳ ಮಧ್ಯೆ ಗುರುತಿಸುವುದು ಗಮನಾರ್ಹ.

ಕಲ್ಯಾಣ ಚಾಲುಕ್ಯರ ಕಾಲದ ರಾಣಿಯರು ಹೆಚ್ಚಾಗಿ ನೀರಾವರಿಕ್ಷೇತ್ರದಲ್ಲಿ ಆಸಕ್ತರಾಗಿದ್ದರು. ರಾಣಿಮಾಯಣಮತಿ ಸಹಸ್ರಲಿಂಗ ಎಂಬ ಜಲಾಶಯವನ್ನು ನಿರ್ಮಿಸಿದಳೆನ್ನಲಾಗಿದೆ. ಇವಳ ಮಗ ಕರ್ಣ 'ಮೇರುತುಂಗ' ಸರೋವರದಲ್ಲಿ ಕರ್ಣಸಾಗರ ನಿರ್ಮಿಸಿದ. ಇವರ ಕಾಲದ ಇಂಜಿನಿಯರುಗಳು ಕಲ್ಲಿನ ತೂಬುಗಳ ತಾಂತ್ರಿಕತೆಯನ್ನು ಬಲ್ಲವರಾಗಿದ್ದರು. ಅತೀ ದೊಡ್ಡ ಕೆರೆ ನಿರ್ಮಾಣವಾದುದೇ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ. ಈಗ ಅದು ಬದಾಮಿ ತಾಲೂಕಿನ ಕಟಗೇರಿಯಲ್ಲಿದೆ. ಕ್ಷಾಮ ಬಂದಾಗ

ಇವರು ನೀರಾವರಿ ಕೆಲಸಗಳನ್ನು ಕೈಗೊಳ್ಳುತ್ತಿದ್ದರು. ಈ ಅರಸರಿಂದ ಆದಿತ್ಯ ಭಟಾರನೆಂಬುವನು ಪುಲಿಗೆ (ಹುಲಿಗಿ) ಎಂಬ ಗ್ರಾಮವನ್ನು ದೊರಕಿಸಿದನೆಂದೂ, ಅವನು ತುಂಗಭದ್ರಾ ನದಿಯ ದಂಡೆಯನ್ನು ಸಮೀಕ್ಷಿಸಿ ಕಾಲುವೆಯೊಂದನ್ನಲ್ಲದೆ, ಅನೇಕ ಉಪ ಕಾಲುವೆಗಳನ್ನು ಕಮಲದ ದಂಟನ್ನು ಸೀಳುವಂತೆ ನಿರ್ಮಿಸಿದನೆಂದು ಹೇಳಲಾಗಿದೆ.[೧೪]

ಕನ್ನಡ ಶಾಸನಗಳಲ್ಲಿ ಕೆರೆ, ಕಟ್ಟೆ, ಕೊಳ, ಕುಂಟೆ, ಪುಷ್ಕರಣೆ, ಸಮುದ್ರ, ಡೊಣೆ, ಹೊಕ್ಕರಣೆ ಮುಂತಾದ ನೀರಾವರಿ ಬಗೆಗಳನ್ನು ಉಲ್ಲೇಖಿಸಲಾಗಿದೆ. ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ'ದಲ್ಲಿ ಬಾವಿಗಳನ್ನು ಕೂಪ, ವಾಪಿ ಮತ್ತು ಪುಷ್ಕರಣೆ ಎಂದು ನದಿಗೆ ಅಡ್ಡಲಾಗಿ ಅಣೆಕಟ್ಟು ಕಟ್ಟಿದ್ದಕ್ಕೆ ತಟಾಕವೆಂತಲೂ ಕರೆದಿರುವರು. ಕ್ರಿ. ಶ. ೧೦೬೦ರ ಎಳಂದೂರು ತಾಲೂಕಿನ ಶಾಸನದಲ್ಲಿ ಕಾವೇರಿ ನದಿಯ ತೂಬು ಮತ್ತು ಕಾಲುವೆಗಳನ್ನು ಉಲ್ಲೇಖಿಸಲಾಗಿದೆ. ಶಿಕಾರಿಪುರದ ಶಾಸನದಲ್ಲಿ ವರದಾನದಿಗೆ ಅಣೆಕಟ್ಟು ನಿರ್ಮಿಸಿದ ಉಲ್ಲೇಖವಿದೆ. ಕಾಲುವೆ, ಕೆರೆ, ಸೇತುವೆಗಳನ್ನು ನಾಶಮಾಡಿದವರಿಗೆ ಉಗ್ರಶಿಕ್ಷೆ ಕೊಡುತ್ತಿದ್ದರೆಂದು ವಿಜ್ಞಾನೇಶ್ವರನು ಮಿತಾಕ್ಷರ(ಸಂಹಿತೆ)ದಲ್ಲಿ ಹೇಳಿದ್ದಾನೆ.

ರನ್ನನ ಅಜಿತಪುರಾಣದಲ್ಲಿ ಅರಘಟ್ಟ ಎಂಬ ಪರ್ಶಿಯನ್ ಚಕ್ರದಂತಹ ಘಟೀಯಂತ್ರದ ಉಲ್ಲೇಖವಿದೆ. ಇದರಿಂದ ನೀರಿನ ಓಟವನ್ನು ನಿಯಂತ್ರಿಸಲು ಉಪಯೋಗಿಸುತ್ತಿದ್ದ ಅಗಳಿ ಮತ್ತು ನೀರೊತ್ತು ಮೊದಲಾದ ಉಪಾಯಗಳಿದ್ದವು. ವಚನಗಳಲ್ಲಿ ರೂಪಕವಾಗಿ ಜಲವನ್ನು ಬಳಸಿದ್ದಾರೆ.

ಚೋಳರು (೮೪೬-೧೧೪೬) ಕಾವೇರಿ ನದಿಗೆ ಉರ್ರೈಯೂರ್ ಹತ್ತಿರ ಕೆರೆ, ಕಟ್ಟೆಗಳನ್ನು ನಿರ್ಮಿಸಿದ್ದರು. ಪಲ್ಲವರ ಸಿಂಹ ವಿಷ್ಣು ಚೋಳರ ರಾಜ್ಯಕ್ಕೆ ಕಾವೇರಿ ನೀರನ್ನು ಬಿಟ್ಟು ತಾಳೆಮರ, ಭತ್ತ ಬೆಳೆಯಲು ಅನುಕೂಲ ಮಾಡಿದ್ದು ಸ್ಮರಣೀಯ. ರಾಣಿ ಸೆಂಬಿಯಾನ್ ಮಹಾದೇವಿ 'ತಿರುಮಲಪಾಡಿ' ಎಂಬ ಸಣ್ಣಕೆರೆ ನಿರ್ಮಿಸುತ್ತಾಳೆ. ಒಂದನೇ ರಾಜರಾಜನೂ (೯೮೫-೧೦೧೪) ೩ ಕೆರೆಗಳನ್ನು ನಿರ್ಮಿಸಿದ್ದಾನೆ. ಕುಲೋತ್ತುಂಗ ಚೋಳ, ಮುನಿಯುರ್ ಮತ್ತು ಮೈಸೂರಿನ ಸಿಂಧುವಳ್ಳಿ ಕೆರೆಗಳನ್ನು ಕಟ್ಟಿಸಿದ್ದು ಗಮನಾರ್ಹ. ಚೋಳರ ಕಾಲದಲ್ಲಿ ೩೨ ವಿಧವಾದ ನೀರಾವರಿ ತೆರಿಗೆಗಳಿದ್ದವು.

ದ್ವಾರಸಮುದ್ರದ ಹೊಯ್ಸಳರು ತಮ್ಮ (೧೦೨೭-೧೩೪೨) ಆಳ್ವಿಕೆಯಲ್ಲಿ, ರಾಜಕೀಯ ಭದ್ರತೆಯೊಂದಿಗೆ ಗಡಿಯನ್ನೂ ವಿಸ್ತರಿಸುತ್ತಾ ಅತೀ ಹೆಚ್ಚು ನೀರಾವರಿ ಕೆಲಸಗಳನ್ನು ಕೈಗೊಂಡಿದ್ದರು. ಮಳೆ ನೀರಿಗೆ ಗೋಕಟ್ಟೆ ಮತ್ತು ಕಾಲುವೆಗಳ ನಿರ್ಮಾಣವಲ್ಲದೆ, ಕೆರೆ, ಏರಿ, ಕಟ್ಟೆ, ಕೊಳ, ಕುಟ್ಟೆ, ಕುಮ್ಮೆ, ಸರೋವರ, ತೀರ್ಥ, ತಟಾಕ, ದೊಣೆ ಎಂಬ ವಿವಿಧ ತರಹದ ಜಲಸಂಪನ್ಮೂಲಗಳನ್ನು ನಿರ್ಮಿಸಿದ ಬಗ್ಗೆ ಉಲ್ಲೇಖವಿದೆ. ಇವರ ಕಾಲದ ಕೆರೆಗಳ ನಿರ್ಮಾಣವು ಧಾರ್ಮಿಕ ಕಾರ್ಯವೆಂದು ನಂಬಲಾಗಿತ್ತು. ಕ್ರಿ. ಶ. ೧೩೦೦ರಲ್ಲಿ ರಾಜಧಾನಿ ದ್ವಾರಸಮುದ್ರಕ್ಕೆ ಎಲಜಿ(ಯಗಚಿ) ನದಿಯಿಂದ ಕಾಲುವೆಯ ಮೂಲಕ ನೀರನ್ನು ಒದಗಿಸಲಾಗುತ್ತಿತ್ತೆಂದು ತಿಳಿದುಬರುತ್ತದೆ. ಕರ್ನಲ್ ಮೆಕೆಂಜಿ ಐದುನೂರು ವರ್ಷಗಳ ತರುವಾಯ ಈ ಅವಶೇಷಗಳನ್ನು ವೀಕ್ಷಿಸಿ ಆಗಿನ ಜನರ ವೈಜ್ಞಾನಿಕ ಕುಶಲತೆಯನ್ನು ಕೊಂಡಾಡಿದ್ದಾನೆ. 'ಮೂರು ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ ಹೊಯ್ಸಳರು ೨೦೪ ಹೊಸ ಕೆರೆಗಳನ್ನು ನಿರ್ಮಿಸಿದ್ದು,

೫೦ ಕೆರೆಗಳನ್ನು ನವೀಕರಿಸಿದ್ದರು. ಸುಮಾರು ೧೧೪ ಕೆರೆಗಳ ನಿರ್ಮಾಣ ಕಾರ್ಯ ಗಮನೀಯವಾದದು'.[೧೫]

ಕನ್ನಡ ವಿಶ್ವಕೋಶ ಲೋಕೋಪಕಾರ (೧೦೨೪)ದಲ್ಲಿ ನೀರಿನ ಉಗಮ ಸ್ಥಾನವನ್ನು ಕಂಡುಹಿಡಿಯಲು ಪ್ರಾಚೀನರು ಅನುಸರಿಸುತ್ತಿದ್ದ ಮಾರ್ಗಗಳಾದ ಗಿಡಗಳು, ಮರಗಳು, ಬಳ್ಳಿಗಳು ಮತ್ತು ಇತರ ವಿಧವಾದ ಸಂಕೇತಗಳ ಪಟ್ಟಿಯನ್ನು ಕೊಟ್ಟು ನೀರಿನ ಮೂಲವನ್ನು ಅವು ತೋರಿಸಿಕೊಡುತ್ತವೆ. ಮುಳ್ಳುಗಳಿಲ್ಲದ ಬನ್ನಿಮರ, ದೊಡ್ಡ ಹುತ್ತ ಇರುವ ಕಡೆ ೬ ಅಡಿ ಅಗೆದರೆ ನೀರಿನ ಸ್ಥಾನವು ದೊರೆಯುತ್ತದೆಂದು ಹೇಳಲಾಗಿದೆ.

ವಾರಂಗಲ್ಲಿನ ಕಾಕತೀಯರು ಕೃತಕ ಜಲಾಶಯಗಳ ನಿರ್ಮಾಣದಲ್ಲಿ ತೊಡಗಿದ್ದರು. ಇವರು ಕೆರೆಗೆ ಸಮುದ್ರ, ಸೆರುವು ಅಥವಾ ತೆರುವು ಮತ್ತು ಕೆರೆ ಎಂದು ಕರೆದಿದ್ದಾರೆ. ಸಮುದ್ರ ಎಂಬುದು ದೊಡ್ಡ ಕೆರೆ. ಶೆಟ್ಟಿಕೆರೆ ಮತ್ತು ಕೇಸರಿ ಸಮುದ್ರ ತುಂಬಿರುತ್ತಿದ್ದವೆಂಬ ಅಂಶ ಶಾಸನಗಳಲ್ಲಿದೆ. ೨ನೇ ಪ್ರೊಲನು (೧೧೧೦-೧೧೫೮) ಸರಿಸಮುದ್ರ ಕೆರೆಯನ್ನು ನಿರ್ಮಿಸಿದ ಬಗ್ಗೆ ಕಜಪೇಟ ಶಾಸನದಿಂದ ವೇದ್ಯವಾಗುವುದು.

ಗಣಪತಿದೇವ (೧೧೯೯-೧೨೬೨)ನು ಅನೇಕ ನೀರಾವರಿ ಕಾಮಗಾರಿಗಳನ್ನು ನೆಲ್ಲೂರು ಭಾಗದಲ್ಲಿ ಕೈಗೊಂಡಿದ್ದನು. ಕೃಷ್ಣಾ - ಗೋದಾವರಿ ಮುಖಜಭೂಮಿ, ಗಣಪಾಪುರಂ ಸೈಯುತ್ಯಕ್ಕೆ ಏಕಶಿಲನಗರಮ್ (ವಾರಂಗಲ್) ಮತ್ತು ವಿದಿಶ ಎಂಬ ನಗರ ನಿರ್ಮಾಣ ಮತ್ತು ಕಡಪ, ಕರ್ನೂಲುಗಳಲ್ಲಿ ಕುಮಾರ ಸಮುದ್ರಂ, ತಿರುಪುರಸಮುದ್ರಂ ಎಂಬ ಎರಡು ಕೆರೆಗಳನ್ನು ಮಹಾಪ್ರಧಾನಿ ಕೊಡೆರಾಯ ಗಂಗಾಯದೇವ, ಅಂಬದೇವ ಕಟ್ಟಿಸಿದ. ಕಾಕತೀಯರ ಕಾಲದಲ್ಲಿ ನೀರಾವರಿ ವಿಭಾಗ ಪ್ರತ್ಯೇಕವಾಗಿತ್ತು.

ಕನ್ನಡ ನಾಡಿನಲ್ಲಿ ಬಾವಿಗಳನ್ನು ಅಗೆಯುವುದು, ಕೆರೆಗಳನ್ನು ಕಟ್ಟುವುದು ಒಂದು ಪುಣ್ಯದ ಕೆಲಸವೆಂದು ಜನರು ನಂಬಿದ್ದರು. ಅರಸರು, ಅರಸಿಯರು, ರಾಜನ ಅಧಿಕಾರಿಗಳು ಮತ್ತು ಶ್ರೀಮಂತರು ದೇವಸ್ಥಾನವನ್ನು ಕಟ್ಟಲು ತೋರಿದ ಭಕ್ತಿ ಭಾವದಿಂದಲೇ ಕೆರೆ ಮತ್ತು ಜಲಾಶಯುಗಳನ್ನು ಕಟ್ಟಿಸುತ್ತಿದ್ದರು. ಐತಿಹಾಸಿಕವಾಗಿ ದೋರಸಮುದ್ರ, ಬಲ್ಲಾಳರಾಯನಸಮುದ್ರ, ದೇವರಾಯಸಮುದ್ರ, ಭರಮಸಾಗರ ಮೊದಲಾದ ಕೆರೆಗಳನ್ನು ಕಟ್ಟಿರುವುದು ಅವಿಸ್ಮರಣೀಯ.

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ಪ್ರದೇಶಗಳು ಸಂಪದ್ಭರಿತವಾಗಿದ್ದು, ಹಲವು ಯುದ್ಧಗಳಿಗೆ, ವಿವಾದಗಳಿಗೆ ಕಾರಣವಾಗಿದ್ದವು. ಈ ಕಾಲದಲ್ಲಿ ರೈತರು ಕಡಪ, ಅನಂತಪುರಗಳಲ್ಲಿ ಉಳುಮೆ ಮಾಡಲು ಅರಣ್ಯ ಕಡಿದರು. ಭಾಸ್ಕರ ಎಂಬ ಸಂಗಮ ವಂಶದ ರಾಜ ಪ್ರತಿನಿಧಿ ದೊಡ್ಡಗಾತ್ರದ 'ಪೊರು ಮಾಮಿಳ್ಳ' ಎಂಬ ಕೆರೆಯನ್ನು ಕಡಪ ಜಿಲ್ಲೆಯ ಬದ್ವಾಲ್‌ನಲ್ಲಿ ಕಟ್ಟಿಸಿದ್ದಾನೆ. ೧ನೇ ಬುಕ್ಕರಾಯ ಸಹಸ್ರಾರು ಕೆಲಸಗಾರರಿಂದ ಕೆರೆಗಳನ್ನು ಕಟ್ಟಿಸುತ್ತಿದ್ದ. ಇವನು ಕಡಪದ ಕಲುಚಪಲ್ಲಿ ಹತ್ತಿರ ತನ್ನಿಚ್ಛರ ಅಧಿಕಾರಿಗಳ ಮೂಲಕ ಕೆರೆಗಳನ್ನು ನಿರ್ಮಿಸುತ್ತಾನೆ.

ಎರಡನೇ ಬುಕ್ಕ ಮತ್ತು ಒಂದನೇ ದೇವರಾಯನ ಕಾಲದಲ್ಲಿ ವಿಜಯನಗರ ಪಟ್ಟಣದಲ್ಲಿ ದೊಡ್ಡ ಜಲಾಶಯುವನ್ನು ತುಂಗಭದ್ರಾನದಿಗೆ ಕಟ್ಟಿದರು. ಇಂದಿಗೂ ಹಳೆಯ

ಕಾಲದ ಕಾಲುವೆಗಳಿವೆ. ನ್ಯೂನಿಜ್‌ನು ತುಂಗಭದ್ರಾನದಿಯಿಂದ ೫ ಸಣ್ಣ ಕಾಲುವೆಗಳ ಮೂಲಕ ಹರಿದು ಹೋಗುವ ನೀರಿನ ಬಗ್ಗೆ ಹೇಳುತ್ತಾ, ತುರ್ತು ಕಾಲುವೆ ೧೧ ಮೈಲು ನೀರಾವರಿ ಪ್ರದೇಶಕ್ಕೆ ನೀರುಣಿಸುತ್ತಿದ್ದ ಬಗ್ಗೆ ಉಲ್ಲೇಖಿಸುತ್ತಾನೆ. ಇದರ ಕಾರ್ಯವನ್ನು ಎರಡನೆಯ ಬುಕ್ಕನ ಜಲಸೂತ್ರಧಾರಿ ಸಿಂಗೆಯಭಟ್ಟನು ಪ್ರತಾಪ ಬುಕ್ಕರಾಯನ ಆಜ್ಞೆಯಂತೆ ಮಾಡಿದ್ದ. ಅವನು ಮಂಡಲ, ಪೆನುಗೊಂಡ, ಸಿರುವಾರ ಕೆರೆಗಳಿಗೆ ಕಾಲುವೆ ನಿರ್ಮಿಸಿದನೆಂದು ತಿಳಿಸುತ್ತಾನೆ.

ಈ ಕಾಲದ ನೀರಿನ ಅಭಾವನೀಗಿಸಲು ಬಾವಿಗಳ ತೋಡುವುದು ಅವ್ಯಾಹತವಾಗಿ ನಡೆದಿತ್ತು. ಹೆಗ್ಗಡೆಸೋವಣ್ಣ ಅಣ್ಣನು ಕ್ರಿ. ಶ. ೧೪೦೫ರಲ್ಲಿ ಮಲಪನಗುಡಿಯಲ್ಲಿ ಮಾಳಿಗೆಯುಳ್ಳ (ಮಾಳಿಗೆ ಕೂಪರಾಮ) ಬಾವಿಯನ್ನು ಕಟ್ಟಿಸಿದನು.[೧೬] ಹೆಗಡೆ ಹಿತಲಬಾಗಿಲ ಬಸವಣ್ಣ ಅಣ್ಣನು ಅರಸನ ಆಜ್ಞೆಯ ಮೇರೆಗೆ ಕಾಲುವೆ ಕಟ್ಟಿಸಿದ ವಿಷಯ ತಿಳಿದು ಬರುತ್ತದೆ. ಆಗಿನ ಸಂದರ್ಭದಲ್ಲಿ ಅಧಿಕ ಭೂಮಿ ನೀರಾವರಿಗೆ ಪರಿವರ್ತನೆಯಾಯಿತು.

ವಿಜಯನಗರದ ಅರಸ ಪ್ರೌಢಪ್ರತಾಪರಾಯನ (೧೪೦೬-೧೪೨೨) ಮಂತ್ರಿಯಾದ ಲಕ್ಷ್ಮೀಧರನು ಮಗುವಾಗಿದ್ದ ಅವಧಿಯಲ್ಲಿ ತಾಯಿ ಹಾಲೆರೆಯುವಾಗ ಹಾಡಿದ ನೀತಿಪಾತ ಶಾಸನದಲ್ಲಿ ಹೀಗಿದೆ :

ಕೆರೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ
ಗ್ಗ್ಗರೆವಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ(ಂ)
ಯೆರೆದಳ್ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಎಂದು ಆದರ್ಶದ ನೀತಿ ತಿಳಿದುಬರುತ್ತದೆ.[೧೭] ಹರಿಹರದ ಹತ್ತಿರ ಹರಿದ್ರಾನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಪ್ರಜೆಗಳು ಕಟ್ಟಿದ್ದಕ್ಕಾಗಿ ಮೊದಲನೇ ದೇವರಾಯ ೧೪೧೦ ರಿಂದ ಅನೇಕ ವರ್ಷ ಹೊಸದಾಗಿ ಜಾರಿಗೆ ತಂದ ನೀರಾವರಿ ಭೂಮಿಗಳಿಗೆ ಕಂದಾಯ ರಿಯಾಯಿತಿ ತೋರಿಸಿ ಅವರಿಗೆ ಉತ್ತೇಜನ ಕೊಟ್ಟನು. ತರುವಾಯ ೧೪೨೪ರಲ್ಲಿ ಈ ಅಣೆಕಟ್ಟು ಕೊಚ್ಚಿ ಹೋದಾಗ ಎರಡನೇ ದೇವರಾಯನು ಅದರ ದುರಸ್ತಿಗಾಗಿ ಉದಾರವಾಗಿ ವ್ಯಯ ಮಾಡಿದ. ಕಮಲಾಪುರದ ಕೆರೆಯನ್ನು ಈ ಅರಸನು ಮಡದಿಯ ಸ್ಮರಣೆಗಾಗಿ ಕಟ್ಟಿಸುತ್ತಾನೆ. ಇದೇ ರೀತಿ ಈ ಹಿಂದೆ ಬುಕ್ಕರಾಯನು ಹನ್ನೆ (ಪೆನ್ನಾರ್-ಪಿನಾಕಿನಿ) ನದಿಯ ನೀರನ್ನು ತಿರುಗಿಸಿ ಕಾಲುವೆ ಮೂಲಕ ಪೆನುಗೊಂಡೆಗೆ ನೀರು ಬರುವಂತೆ ಮಾಡಿದ್ದ. ಮಂಡಲದ ಕಾಲುವೆ ಎಂದು ಅದರ ಹೆಸರು.

೧೪೪೯ ರಲ್ಲಿ ಸಾಳುವ ನರಸಿಂಹರಾಯ ಅನಂತಪುರದ ಹತ್ತಿರ ಕಣಿವೆಯಲ್ಲಿ ನರಸಿಂಭುದಿ ಕೆರೆ ಕಟ್ಟಿಸಿದ. ನಂತರ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಅನೇಕ ಕೆರೆಕಟ್ಟೆಗಳು ನಿರ್ಮಾಣಗೊಂಡವು. ಹೊಸಪೇಟೆ ಸಮೀಪದ ರಾಯರಕೆರೆ ಇವನ ಹೆಮ್ಮೆಯ ಯೋಜನೆ. ಇದರ ಬಗ್ಗೆ ನ್ಯೂನಿಜ್, ಡೊಮಿಂಗೊಪಾಯಿಸ್ ತಿಳಿಸಿದ್ದಾರೆ. ತುರ್ತುಕಾಲುವೆ ಅಣೆಕಟ್ಟನ್ನು ಚಿಂತಾಯಕ ದೇವಣ್ಣನು ಮತ್ತು ಬೊಮೋಜನು ಕಟ್ಟಿಸಿದ ಸಂಗತಿ ಶಾಸನಗಳಿಂದ ಲಭ್ಯ. ಹಿರಿಯ ಕಾಲುವೆಯನ್ನು (ತುರ್ತು) ಹೆಗಡೆ ಹಿತಲಬಾಗಿಲ ಬಸವಣ್ಣನು ಅರಸ ವಿರೂಪಾಕ್ಷನ ಆಜ್ಞೆಯ ಮೇರೆಗೆ ಕಟ್ಟಿಸಿದ. ಇನ್ನೊಂದು ಕಾಲುವೆಯನ್ನು ಅವಿಕಥವಿಪ್ಪರಸನು

ಬುಕ್ಕಸಾಗರದಲ್ಲಿ ಕಟ್ಟಿಸಿದ್ದನು. ನಾಗಾಂಬಿಕಾ ಸಮುದ್ರವೆಂಬ ಕೆರೆಯನ್ನು ನಾಗೇನಹಳ್ಳಿಯಲ್ಲಿ ಕ್ರಿ. ಶ. ೧೫೧೬ರಲ್ಲಿ ನಿರ್ಮಿಸಿದ್ದು ತಾಯಿಯ ಸ್ಮರಣೆಗಿರಬೇಕು. ಇನ್ನೊಂದು ಕೆರೆಯನ್ನು ಸೀತಾರಾಮ ತಾಂಡವ ಹತ್ತಿರ ೧೫೩೯ರಲ್ಲಿ ಕಟ್ಟಿಸಲಾಗಿದೆ.[೧೭] ಈ ಅರಸರು ನಿರ್ಮಿಸಿದ ಸುಮಾರು ೪೦ಕ್ಕೂಹೆಚ್ಚು ಕೆರೆಗಳು ಹೊಸಪೇಟೆ ತಾಲೂಕಿನಲ್ಲಿಯೇ ಕಂಡುಬರುತ್ತವೆ. ಪರೋಜಿ, ಕಮಲಾಪುರ, ಅಕ್ಕಿಕೆರೆ, ದಣ್ಣಾಯಕನಕೆರೆ ಮತ್ತು ರಾಯರಕೆರೆ ಬೃಹತ್ ಗಾತ್ರದಲ್ಲಿ ನಿರ್ಮಾಣಗೊಂಡಿವೆ.

ಕುಡಿಯುವ ನೀರಿಗಾಗಿ ಚಿಕಿಲಹಳ್ಳಿ ಕಣಿವೆ ಮತ್ತು ಬಡವಲಿಯ ಕಣಿವೆ ಹೆದ್ದಾರಿಗಳು ಕೂಡುವಲ್ಲಿ ಪಾಳೆಗೆಯುಳ್ಳ ಬಾವಿ ತೋಡಿಸಿ ವನ ಬೆಳೆಸಿದ್ದು ಗಮನಾರ್ಹ. ಇಂದಿಗೂ ಈ ಬಾವಿಯನ್ನು ನೋಡಬಹುದು. ಇದರ ಕೆಲಸ ಮಾಡಿದ ಕೆಲಸಗಾರರಿಗೆ ಭೂದಾನ ಮಾಡಿದ್ದರು. ವಿಜಯನಗರಕಾಲದಲ್ಲಿ ನೀರಾವರಿ ಉತ್ಕೃಷ್ಟ ಬೆಳೆಗೆ ಪೂರಕವಾಗಿ ಉಚ್ಛ್ರಾಯ ಸ್ಥಿತಿಗೆ ಕಾರಣವಾಯಿತು. ಜನರು ಪ್ರತಿರೋಧ ಒಡ್ಡಿದಾಗ ರಾಜ ಅಣೆಕಟ್ಟು, ಕೆರೆ, ಕಟ್ಟೆಗಳನ್ನು ಕಟ್ಟಿಸುತ್ತಿದ್ದ ಎನ್ನಬಹುದು. ಅರ್ಕಾವತಿ ನದಿಗೆ ೧೫೩೩ರಲ್ಲಿ ಅಚ್ಯುತ ದೇವರಾಯ ದೊಡ್ಡಕೆರೆಯನ್ನು ಕಟ್ಟಿಸುತ್ತಾನೆ.[೧೮] ಕಾಲುವೆಗಳ ತೋಡಿಸಿ ಬೆಂಗಳೂರಿಗೆ ನೀರು ಸರಬರಾಜು ಮಾಡಲಾಗುತ್ತಿತ್ತು. ಕಟ್ಟು-ಕೊಡಗೆ, ದೇಣಿಗೆ ಮುಂತಾದ ನೀರಾವರಿ ಕೆಲಸಗಳನ್ನು ಮಾಡುತ್ತಿದ್ದರು.

ವಿಜಯನಗರೋತ್ತರ ಸಂದರ್ಭದಲ್ಲಿ ಕಿರು ಸಂಸ್ಥಾನಗಳು ರಾಜಕೀಯವಾಗಿ ಏಳಿಗೆಯಾದವು. ಇವುಗಳಲ್ಲಿ ಪಾಳೆಯಪಟ್ಟುಗಳು ಮಾತ್ರ ಗಮನಾರ್ಹವಾಗಿವೆ. ಕೋಟೆಗಳಂತೆ ಕೆರೆ, ಕಟ್ಟೆಗಳನ್ನೂ ಇವರು ನಿರ್ಮಿಸಿದ್ದರು. ಚಿತ್ರದುರ್ಗ, ಹರಪನಹಳ್ಳಿ, ಕೆಳದಿ, ತರೀಕೆರೆ, ಬಸವಾಪಟ್ಟಣ, ರಾಯದುರ್ಗ, ಬಳ್ಳಾರಿ, ಸುರಪುರ, ಹಾಗಲವಾಡಿ, ಬಾಣಾವಾರ ಮೊದಲಾದವರ ಆಳ್ವಿಕೆಯಲ್ಲಿ ನೀರಾವರಿ ಕೆಲಸಗಳಿಗಾಗಿಯೇ ಪಾಳೆಯ ಗಾರರ ವಿರುದ್ಧ ದಂಗೆಗಳು ನಡೆದಿವೆ ಎಂದು ಊಹಿಸಲಾಗಿದೆ.

ಬಹಮನಿ ಸುಲ್ತಾನರು ಮತ್ತು ಹೈದರಾಲಿ, ಟಿಪ್ಪು ಸುಲ್ತಾನರು ಅನೇಕ ರೀತಿಯ ನೀರಾವರಿ ಕೆಲಸಗಳನ್ನು ಕೈಗೊಂಡಿದ್ದರು. ಈ ತಂದೆ-ಮಗ ಇಬ್ಬರು ಆಕ್ರಮಿಸಿದ ಪಾಳೆಯ ಪಟ್ಟುಗಳಲ್ಲಿ ನೀರಾವರಿ ಕೆಲಸಗಳು ಕುಂಠಿತಗೊಂಡಿರಬೇಕು. ಅಪಾರದ್ರವ್ಯವನ್ನು ದೋಚುವುದು ಇವರ ಪ್ರವೃತ್ತಿಯಾಗಿತ್ತು ಎನ್ನಲಾಗಿದೆ. ಇದರ ನಡುವೆಯೂ ಗುಡೆಕೋಟೆ ಅರಸರು ಬೊಮ್ಮಲಿಂಗನ ಕೆರೆ, ರಾಯದುರ್ಗದ ಅರಸರು ಇತರೆಡೆ ಕೆರೆಗಳನ್ನು ಕಟ್ಟಿಸಲು ಮುಂದಾದರು. ಚಿತ್ರದುರ್ಗದ ಅರಸರು ಭರಮಸಾಗರ, ಆಡುಮಲ್ಲೇಶ್ವರ ಕೆರೆಗಳಲ್ಲದೆ, ಭರಮಣ್ಣನಾಯಕ, ದಳವಾಯಿ ಮುದ್ದಣ್ಣನವರು ಇತರ ಕೆರೆಕಟ್ಟೆಗಳನ್ನು ಕಟ್ಟಿಸಿದ್ದು ಸ್ಪಷ್ಟ.

ಮೈಸೂರು ಅರಸರ ಆಳ್ವಿಕೆಯಲ್ಲಿ ಅಣೆಕಟ್ಟುಗಳನ್ನು ಕಟ್ಟಿ-ಕಾಲುವೆಗಳನ್ನು ತೋಡಿಸಿದ ಉಲ್ಲೇಖಗಳಿವೆ. ಕಂಠೀರವ ನರಸರಾಜನ ಕಾಲದ ಬಂಗಾರದೊಡ್ಡಿ ಕಾಲುವೆ ಕಾಮಗಾರಿ ಕೆಲಸ ಕೈಗೊಂಡಿದ್ದು ತಿಳಿದುಬರುತ್ತದೆ. ಇಂಗ್ಲಿಷ್ ವರದಿಗಾರ ರೆವರೆಂಡ್ ಮಾರ್ಟಿನ್ ಹೇಳುವಂತೆ : ಚಿಕ್ಕದೇವರಾಜ ಒಡೆಯರು ೧೭೦೧ರಲ್ಲಿ ಮೈಸೂರು ಜಿಲ್ಲೆಯಲ್ಲಿ ಕಾವೇರಿ ನದಿಗೆ ಒಂದು ಬೃಹತ್ ಮಣ್ಣಿನ ಅಣೆಕಟ್ಟನ್ನು ಕಟ್ಟಿ, ಒಂದು ದೊಡ್ಡ ಕಾಲುವೆಯನ್ನು

ನಿರ್ಮಿಸಿ, ಕಾವೇರಿ ನದಿಯ ನೀರು ಕೆಳಗಿನ ಕೊಳ್ಳಕ್ಕೆ ಪ್ರವೇಶಿಸದಂತೆ ತಡೆದರಂತೆ. ಒಂದು ವರ್ಷದಲ್ಲಿ ಅದು ಕೊಚ್ಚಿ ಹೋಯಿತು. ದಿವಾನ್ ಪೂರ್ಣಯ್ಯನವರು ಲಕ್ಷ್ಮಣತೀರ್ಥಕ್ಕೆ ಅಡ್ಡಲಾಗಿ ಸಾಗರಕಟ್ಟೆ ಅಣೆಕಟ್ಟನ್ನು ನಿರ್ಮಿಸಿದ್ದು ಸ್ಮರಣೀಯ. ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಅವಧಿಯಲ್ಲಿ ಮಲೆನಾಡಿನ ೫೭೦ ಹಳ್ಳಿಗಳ ಕೊಳಚೆ ಬಾವಿಗಳನ್ನು ಶುದ್ಧಗೊಳಿಸಿ, ೫೪ ಹೊಸ ಬಾವಿಗಳನ್ನು ತೋಡಿಸಿ ಕುಡಿಯಲು ನೀರನ್ನು ಒದಗಿಸಿದರು. ಒಟ್ಟು ೧,೧೪,೦೦೦ ಕೊಳವೆ ಬಾವಿಗಳು ಇವರ ಕಾಲದಲ್ಲಿ ಉಪಯೋಗದಲ್ಲಿದ್ದವು. 'ಕೆರೆ ನಿರ್ವಹಣಾ ಸಮಿತಿ' ರಚಿಸಿ ಆಮೂಲಕ ನೂರಾರು ಕೆರೆ ಕಟ್ಟಿಸಿದರು. ಹಲವು ಕೆರೆಗಳನ್ನು ಜೀರ್ಣೋದ್ಧಾರ ಮಾಡಿಸಿದರು. ಬೇತಮಂಗಲ ಕೆರೆಯನ್ನು ಜೀರ್ಣೋದ್ಧಾರ ಮಾಡಿ ಕೋಲಾರದ ಚಿನ್ನದ ಗಣಿಗೆ ನೀರುಬಿಟ್ಟರು. ಮೈಸೂರಿನ ಜನರಿಗೆ ಕುಡಿಯುವ ನೀರಿಗಾಗಿ 'ವಾಣೀ ವಿಲಾಸ ವಾಟರ್ ವರ್ಕ್ಸ್' ಕಟ್ಟಿಸಿ ನೀರಿನ ಸೌಲಭ್ಯ ಒದಗಿಸಿದರು. ನಂತರ 'ನೀರಾವರಿ ಅಭಿವೃದ್ಧಿ ನಿಧಿ' ಸ್ಥಾಪನೆ ಮಾಡಿ ರಾಜ್ಯದಲ್ಲೆಲ್ಲ ನೀರಾವರಿ ಕೆಲಸ ಕಾರ್ಯಗಳನ್ನು ಕೈಗೊಂಡರು. ಇವರ ಕಾಲದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರ ಪಾತ್ರ ಗಮನಾರ್ಹವಾದುದು.

ಬ್ರಿಟಿಷರ ಆಳ್ವಿಕೆಯಲ್ಲಿ ಕೆರೆ-ನೀರಾವರಿಗೆ ಪ್ರೋತ್ಸಾಹ ಕಡಿಮೆಯಾಗಿತ್ತು. ಇವರು ಕುಡಿಯುವ ನೀರಿಗಾಗಿ ಬಾವಿಗಳನ್ನು ತೋಡಿಸಿದ್ದರು. ಅಲ್ಲದೆ ಅತೀ ಹೆಚ್ಚು ಲಾಭ ತರುವಂಥ, ವರಮಾನವಿರುವ ನೀರಾವರಿ ಯೋಜನೆಗಳನ್ನು ಬೆಂಬಲಿಸುತ್ತಿದ್ದರು. ಮೈಸೂರು ಸಂಸ್ಥಾನವು ಬ್ರಿಟಿಷರ ಅಪ್ಪಣೆ ಪಡೆದು ನೀರಾವರಿ ಯೋಜನೆ ಕೈಗೊಳ್ಳಬೇಕಿತ್ತು. ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಹೈದರಾಬಾದ್, ಮದ್ರಾಸ್ ಮತ್ತು ಮುಂಬಯಿ ಕರ್ನಾಟಕಗಳಲ್ಲಿ ಬ್ರಿಟಿಷರ ಪ್ರಾಬಲ್ಯವಿತ್ತು.

ಮದ್ರಾಸ್ ಅಧಿಪತ್ಯದ ಅನುಮತಿಯೊಂದಿಗೆ ಮೈಸೂರು ಸಂಸ್ಥಾನ ಕೃಷ್ಣರಾಜಸಾಗರ ಅಣೆಕಟ್ಟು ನಿರ್ಮಿಸಿದ್ದು ಸ್ಪಷ್ಟ. ಹೀಗೆ ಹೈದರಾಬಾದ್ ಮತ್ತು ಮದ್ರಾಸ್ ಅಧಿಪತ್ಯದ ಜಂಟಿಯೋಜನೆಯಾಗಿ ತುಂಗಭದ್ರಾ ಜಲಾಶಯ ನಿರ್ಮಾಣ ಮಾಡಿದ್ದು ಮಹಾಸಾಧನೆ ಎನ್ನಬೇಕು. ಮೈಸೂರು ಸಂಸ್ಥಾನವು ಅಯ್ಯನಕೆರೆ, ಮದಗದಕೆರೆ, ವ್ಯಾಸಸಮುದ್ರ, ಅಣಜಿಕೆರೆ ಮೊದಲಾದ ಕೆರೆಗಳ ದುರಸ್ತಿ ಮಾಡಿಸಿದ್ದು ತಿಳಿದುಬರುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ನೀರಾವರಿ ಯೋಜನೆ ವೈಜ್ಞಾನಿಕವಾಗಿ ಬೆಳೆಯಿತು. ಯಾವುದಾದರೊಂದು ಜಾಗದಲ್ಲಿ ಬೆಳೆಗೆ ಬೇಕಾಗುವಷ್ಟು ಮಳೆ ಬೀಳದಿದ್ದಲ್ಲಿ, ಆ ಬೆಳೆಗೆ ಕೃತಕವಾಗಿ ತಕ್ಕಷ್ಟು ಮಟ್ಟಿಗೆ ನೀರನ್ನು ಒದಗಿಸುವುದು ಅಗತ್ಯ ಎಂದು ಅರಿತರು. ಭಾರತ ಸ್ವಾತಂತ್ರ್ಯ ಪಡೆದ ತರುವಾಯ ಪಂಚವಾರ್ಷಿಕ ಯೋಜನೆಗಳ ಮೂಲಕ ನೀರಾವರಿ ಯೋಜನೆಗಳನ್ನು ಕೈಗೊಳ್ಳಲಾಯಿತು. ಬೃಹತ್, ಮಧ್ಯಮ ಮತ್ತು ಸಣ್ಣನೀರಾವರಿ ಯೋಜನೆಗಳೆಂದು ವಿಂಗಡಿಸಿದರೆ ಸು. ಮೂರು ನೂರಕ್ಕೂ ಹೆಚ್ಚಿವೆ.

ಕರ್ನಾಟಕ ಪ್ರಾಚೀನ ಕಾಲದಿಂದಲೂ ಅನೇಕ ಭೂಭಾಗಗಳನ್ನು ಹೊಂದಿತ್ತು. ಮಧ್ಯಕಾಲ ಮತ್ತು ಬ್ರಿಟಿಷರ ಅವಧಿಯಲ್ಲಿ ಅವು ಬದಲಾಗಿದ್ದವು. ೧೯೫೬ರ ಏಕೀಕರಣದ ತರುವಾಯ ಕರ್ನಾಟಕ ಒಂದು ಸೀಮಿತ ಗಡಿಯನ್ನು ಹೊಂದಿತು. ಆದರೂ ಕನ್ನಡದ ಭೂಭಾಗಗಳು ಕರ್ನಾಟಕಕ್ಕೆ ಸೇರಬೇಕೆಂಬುದು ನ್ಯಾಯ. ಇದಕ್ಕಾಗಿ ಚಳವಳಿಗಳು

ನಡೆಯುತ್ತಿವೆ. ಕರ್ನಾಟಕದ ವೈಶಿಷ್ಟ್ಯವೆಂದರೆ ಕರಾವಳಿ, ಮಲೆನಾಡು ಮತ್ತು ಬಯಲುಸೀಮೆ ಎಂಬ ಲಕ್ಷಣಗಳಿಂದ ಕೂಡಿರುವುದು. ಬಯಲುಸೀಮೆಯನ್ನು ತುಂಗಭದ್ರಾನದಿ ಪ್ರತ್ಯೇಕಿಸುತ್ತದೆ. ಉತ್ತರಕರಾವಳಿ, ದಕ್ಷಿಣಕರಾವಳಿ, ಪಶ್ಚಿಮಘಟ್ಟ, ಪೂರ್ವಘಟ್ಟ, ಉತ್ತರ ಪ್ರಸ್ಥಭೂಮಿ, ದಕ್ಷಿಣಪ್ರಸ್ಥಭೂಮಿ ಹಾಗೂ ಮಲೆನಾಡು ಎಂಬ ಭೌಗೋಳಿಕ ಲಕ್ಷಣಗಳನ್ನು ನೋಡಬಹುದು.

ಕರ್ನಾಟಕದಲ್ಲಿ ಇಂದು ಜಲಸಂಪತ್ತನ್ನು ಹೆಚ್ಚಾಗಿ ಕ್ರೋಢೀಕರಿಸಲಾಗಿದೆ. ಕಾವೇರಿನದಿ ಕಣಿವೆಯಲ್ಲಿ ಕಬಿನಿ, ಸುವರ್ಣಾವತಿ, ಶಿಂಷಾ, ಮಧ್ಯಕಾವೇರಿ, ಅರ್ಕಾವತಿ, ಪಾಲಾರ್, ಚಿನ್ನಾರ ಮುಂತಾದ ನದಿಗಳಿದ್ದು, ಸಂಪೂರ್ಣ ಜಲಾನಯನ ಪ್ರದೇಶಗಳಾಗಿವೆ. ಅದೇ ರೀತಿ ಕೃಷ್ಣಾಕೊಳ್ಳದಲ್ಲಿ ಕೃಷ್ಣಾ ಮೇಲ್ದಂಡೆ, ಘಟಪ್ರಭಾ, ಮಲಪ್ರಭಾ, ಭೀಮಾ ಮೇಲ್ದಂಡೆ, ಭೀಮಾಕೆಳದಂಡೆ, ತುಂಗಭದ್ರಾ, ವೇದಾವತಿ, ಗೋದಾವರಿ ಮುಂತಾದ ನದಿಗಳಿಂದ ಸಂಪೂರ್ಣ ಜಲಾನಯನ ಮಾಡಲು ಸರ್ಕಾರ ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ.

❑❑

# ೩. ನದಿಗಳ ಉಗಮ ಮತ್ತು ಭೌಗೋಳಿಕ ಪರಿಚಯ

ಕರ್ನಾಟಕದಲ್ಲಿ ಅನೇಕ ನದಿಗಳು ಹುಟ್ಟಿ ಹರಿಯುವಾಗ ಕೆರೆ, ಕಟ್ಟೆ, ಅಣೆಕಟ್ಟುಗಳನ್ನು ನಿರ್ಮಿಸಿಕೊಂಡು ನೀರಾವರಿ, ಜಲವಿದ್ಯುತ್‌ಗೆ ಅನುಕೂಲ ಮಾಡಿಕೊಟ್ಟಿವೆ. ಬೇರೆ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಸುಮಾರು ೬೦ಕ್ಕೂ ಹೆಚ್ಚು ನದಿಗಳಿವೆ. ಮೇಲ್ಮೈ ಲಕ್ಷಣಗಳಿಗೆ ಅನುಗುಣವಾಗಿ ನೀರಿನ ಹರಿವು ಪಶ್ಚಿಮದಿಂದ ಪೂರ್ವದ ಕಡೆಗೆ ಇದೆಯಾದರೂ, ಪಶ್ಚಿಮ ದಿಕ್ಕಿಗೆ ಹರಿಯುವ ನದಿಗಳೂ ಇವೆ. ಇಲ್ಲಿನ ಜಲಸಂಪತ್ತನ್ನು ೧) ಪಶ್ಚಿಮಕ್ಕೆ ಹರಿಯುವ ನದೀಜಾಲ ೨) ಕೃಷ್ಣಾ ನದೀ ಜಾಲ ೩) ಕಾವೇರಿ ನದೀಜಾಲ ೪) ಗೋದಾವರಿ ನದೀಜಾಲ ಹಾಗೂ ೫) ಪಾಲಾರ್-ಪೆನ್ನಾರ್ ನದೀಜಾಲವೆಂದು ಐದು ಭಾಗಗಳಾಗಿ ವಿಂಗಡಿಸಬಹುದಾಗಿದೆ.[೨೦]

ಮೇಲಿನಂತೆ ಕರ್ನಾಟಕದಲ್ಲಿ ಹುಟ್ಟಿದ ನದಿಗಳು ಮತ್ತು ಬೇರೆ ರಾಜ್ಯಗಳಲ್ಲಿ ಹುಟ್ಟಿ ಕರ್ನಾಟಕದಲ್ಲಿ ಹರಿಯುವ ನದಿಗಳು ಮಹಾರಾಷ್ಟ್ರ, ಗೋವಾ, ಕೇರಳ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಪಾಂಡಿಚೇರಿಗಳಲ್ಲಿ ಹರಿದು ಅರಬ್ಬೀಸಮುದ್ರ, ಬಂಗಾಳ ಕೊಲ್ಲಿಯನ್ನು ಸೇರುತ್ತವೆ.

ಕರ್ನಾಟಕದ ಜಲಸಂಪತ್ತಿನ ಮೂಲವೆಂದರೆ ಪಶ್ಚಿಮಘಟ್ಟಗಳು. ಇಲ್ಲಿ ಹುಟ್ಟಿ ಹರಿಯುವ ನದಿಗಳು ನೀರಾವರಿಗಿಂತ ಜಲಪಾತಗಳನ್ನು ಸೃಷ್ಟಿಸಿ, ಕರಾವಳಿ ಮೂಲಕ ಅರಬ್ಬಿಸಮುದ್ರವನ್ನು ಸೇರುತ್ತವೆ. ಘಟ್ಟ ಪ್ರದೇಶಗಳಿಂದ ಹರಿದುಬಂದು ಮೆಕ್ಕಲು ಮಣ್ಣು ಕರಾವಳಿ ಪ್ರದೇಶದ ಫಲವತ್ತತೆಯನ್ನು ಹೆಚ್ಚಿಸುತ್ತದೆ. ಸಸ್ಯ, ಮಣ್ಣಿನಿಂದ ಹರಿದು ಬರುವ ಸಾರವತ್ತಾದ ಅಂಶ ಕರ್ನಾಟಕದ ಕರಾವಳಿ ಕಡಲು ಮೀನುಗಾರಿಕೆಯ ಸಮೃದ್ಧ ನೆಲೆಯಾಗಲು ಕಾರಣವಾಗಿದೆ. ಪಶ್ಚಿಮ ನದೀಜಾಲವು[೨೧] ಕಾಳಿ (೧೬೧ ಕಿ. ಮೀ.) , ಶರಾವತಿ (೧೩೨ ಕಿ. ಮೀ), ಅಘನಾಶಿನಿ (೧೨೧ ಕಿ. ಮೀ), ನೇತ್ರಾವತಿ (೯೬ ಕಿ. ಮೀ), ತಟ್ಟೆಹಳ್ಳ (೯೦ ಕಿ. ಮೀ.), ಸೀತಾ (೮೦ ಕಿ. ಮೀ), ಕುಮಾರಧಾರಾ (೭೪ ಕಿ. ಮೀ) ಗಂಗಾವಳಿ (೭೨ ಕಿ. ಮೀ) ಮತ್ತು ಚಕ್ರ (೭೨ ಕಿ. ಮೀ) ಪ್ರಮುಖ ನದಿಗಳಿಂದ ಕೂಡಿದೆ. ಗೌರಿಹೊಳೆ, ಗುರಪುರ, ತದಡಿ, ಸ್ವರ್ಣ, ವಾರಾಹಿ, ಹರಿದ್ರಾವತಿ, ಬೆಣ್ಣೆ ಹೊಳೆ, ಬೇಡ್ತಿ ಇತರ ೫೭ ನದಿಜಾಲಗಳಿವೆ. ಸರ್ಕಾರವು ಇವುಗಳನ್ನು ಪೂರ್ವಕ್ಕೆ ತಿರುಗಿಸಿ ನೀರಾವರಿ ಮಾಡಲು ಯೋಜಿಸಿದೆ. ಈ ನದಿಗಳಿಂದ ಶಿವಮೊಗ್ಗ, ಚಿಕ್ಕಮಗಳೂರು, ಉತ್ತರ ಕನ್ನಡ, ದಕ್ಷಿಣಕನ್ನಡ, ಕೊಡಗು, ಬೆಳಗಾವಿ ಮತ್ತು ಹಾಸನ ಜಿಲ್ಲೆಗಳಲ್ಲಿ ಸಾಕಷ್ಟು ಪ್ರದೇಶ ನೀರಾವರಿಗೊಳಪಟ್ಟಿದೆ. ಇತರ ನದಿಗಳ ವಿವರದ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದ್ದು, ಕೆಲವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ನದಿಗಳು ಹುಟ್ಟುವುದು ಎತ್ತರವಾದ ಪ್ರದೇಶದಲ್ಲಿ. ಇದಕ್ಕನುಗುಣವಾಗಿ ಕರ್ನಾಟಕದ ಪಶ್ಚಿಮ ಘಟ್ಟಗಳ ಪರ್ವತ ಶ್ರೇಣಿಗಳಲ್ಲಿ ಅನೇಕ ನದಿಗಳು ಹುಟ್ಟುತ್ತವೆ. ಈ ನದಿಗಳು ನೀರಾವರಿ ಕೃಷಿ, ಜಲವಿದ್ಯುತ್, ಕಾರ್ಖಾನೆ, ಪಶುಪಾಲನೆ, ಯುದ್ಧ, ಒಪ್ಪಂದಗಳಿಗೆ, ಆಧ್ಯಾತ್ಮಿಕ ನೆಲೆಗಳಿಗೆ ಆವಾಸಸ್ಥಾನಗಳಾಗಿವೆ. ಇವು ಸುಂದರ ಭೌಗೋಳಿಕ ಪ್ರದೇಶವನ್ನು ನಿರ್ಮಿಸುವಂತೆ, ಸುಂದರ ನಗರಗಳನ್ನು ಸೃಷ್ಟಿಸುತ್ತವೆ. ಹೀಗೆ ನದಿಗಳಿಂದ ನಾನಾ ಬಗೆಯ ಉಪಯೋಗವನ್ನು ನೋಡಬಹುದು.

೧. **ತುಂಗಾನದಿ** : ಪಶ್ಚಿಮ ಘಟ್ಟಗಳ ವರಹ ಪರ್ವತದ ತುಟ್ಟತುದಿಯ ಗಂಗಾ ಮೂಲದಲ್ಲಿ ತುಂಗಾನದಿ ಹುಟ್ಟುವುದು. ಈ ಸ್ಥಳ ಶೃಂಗೇರಿ ತಾಲೂಕಿನಲ್ಲಿದ್ದು, ೧೧೯೮.೦ ಮೀಟರ್ ಎತ್ತರದಿಂದ ನೀರು ಹರಿದು ಬಂದು ನದಿಯಾಗಿ ಹರಿಯುತ್ತದೆ. ಮೊದಲಿಗೆ ಈಶಾನ್ಯಕ್ಕೆ ಹರಿದು ಶೃಂಗೇರಿ ಮೂಲಕ ಹಾದು, ವಾಯವ್ಯಕ್ಕೆ ಬಾಗ್ಗುಂಜಿಗೆ ತಿರುಗಿ ಮತ್ತು ಹರಿಹರಪುರದ ಹತ್ತಿರ ಹರಿವ ದಿಕ್ಕನ್ನು ಬದಲಿಸಿದ ನಂತರ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸುವುದು. ಶಿವಮೊಗ್ಗ ಜಿಲ್ಲೆಯಲ್ಲಿ ೫೦ ರಿಂದ ೫೫ ಕಿ. ಮೀ. ಇದರ ಉದ್ದವಿದ್ದು, ಇದರ ನೀರಿನ ಬಗ್ಗೆ 'ಗಂಗಾಸ್ನಾನಂ ತುಂಗಾಪಾನಂ' ಎಂಬ ಜನಾಭಿಪ್ರಾಯವೂ ಇದೆ. ಗಾಜನೂರು ಬಳಿ ಇದಕ್ಕೆ ಅಣೆಕಟ್ಟನ್ನು ನಿರ್ಮಿಸಲಾಗಿದೆ.

೨. **ಭದ್ರಾನದಿ** : ಈ ನದಿಯು ಸಹ ಪಶ್ಚಿಮ ಘಟ್ಟಗಳ ವರಹ ಪರ್ವತದ ಗಂಗಾಮೂಲದಲ್ಲಿ ಜನಿಸುತ್ತದೆ. ಇದರ ಉದ್ದ ೧,೧೯೮.೦ ಮೀಟರುಗಳು. ಮೊದಲಿಗೆ ಪೂರ್ವಾಭಿಮುಖವಾಗಿ ಹರಿದನಂತರ ಕಳಸ ಹತ್ತಿರ ಈಶಾನ್ಯಕ್ಕೆ ತಿರುಗಿ, ಬಾಳೆಹೊನ್ನೂರು ಸಮೀಪ ಹರಿದು, ನಂತರ ಹೆಬ್ಬೆ ಹತ್ತಿರ ಸೋಮವಾಹಿನಿಯಿಂದ ಜಗರ ಕಣಿವೆ ಸೇರುತ್ತದೆ. ಮುಂದೆ ಲಕ್ಕವಳ್ಳಿ ಸಮೀಪವಿರುವ ಭದ್ರಾ ಅಣೆಕಟ್ಟನ್ನು ತಲುಪುತ್ತದೆ.[೨೨] ಅಲ್ಲಿಂದ ಭದ್ರಾವತಿ ಮೂಲಕ ಶಿವಮೊಗ್ಗ ಜಿಲ್ಲೆಯಲ್ಲಿ ಹರಿಯುವುದು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಈ ನದಿಯ ಹರಿವು ೩.೨ ಕಿ. ಮೀ. ಈ ನದಿಗೆ ಲಕ್ಕವಳ್ಳಿ ಹತ್ತಿರ ಜಲಾಶಯ ನಿರ್ಮಿಸಿ, ನೀರಾವರಿ ಮತ್ತು ವಿದ್ಯುತ್ ಉತ್ಪಾದನೆಗೆ ಅನುಕೂಲ ಕಲ್ಪಿಸಲಾಗಿದೆ. ಈ ಎರಡು ಸಹೋದರ ನದಿಗಳು (ತುಂಗಾ ಮತ್ತು ಭದ್ರಾ) ಶಿವಮೊಗ್ಗ ಜಿಲ್ಲೆಯ ಕೂಡಲಿ ಹತ್ತಿರ ಸಂಗಮಗೊಂಡು ತುಂಗಭದ್ರಾ ಎಂದು ಕರೆಸಿಕೊಳ್ಳುತ್ತದೆ.

೩. **ನೇತ್ರಾವತಿ** : ಇದರ ಉಗಮವು ವರಹಪರ್ವದ ಗಂಗಾಮೂಲ. ಪಶ್ಚಿಮಕ್ಕೆ ಹರಿದು ಬಂಗಾಡಿ ಕಣಿವೆಯ ಹತ್ತಿರದಿಂದ ಬೆಳ್ತಂಗಡಿ ಮೂಲಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರವೇಶಿಸುತ್ತದೆ. ಉಪ್ಪಿನಂಗಡಿಯಿಂದ ಮತ್ತೊಂದು ಹೊಳೆಯಾದ ಕುಮಾರಧಾರಾ ಬಂದು ಇದಕ್ಕೆ ಸೇರುತ್ತದೆ. ಪವಿತ್ರ ಧರ್ಮಕ್ಷೇತ್ರವಾದ ಧರ್ಮಸ್ಥಳವು ಈ ನದಿಯ ದಂಡೆಯ ಮೇಲಿದೆ. ನಂತರ ನೇತ್ರಾವತಿ ಅರಬ್ಬಿಸಮುದ್ರವನ್ನು ಸೇರುವುದು.

೪. **ಹೇಮಾವತಿ** : ಹೇಮಾವತಿಗೆ ಬಂಗಾರದನದಿ ಎನ್ನುವರಲ್ಲದೆ, ಎಣ್ಣೆಯಂತೆ ಹೊಳೆಯುವ ಹೊಳೆ ಎಂದು ಕರೆಯುವರು. ಮೂಡಿಗೆರೆ ತಾಲೂಕಿನ ಜವಳಿ ಹತ್ತಿರ ಕಾವೇರಿ ನದಿಗೆ ಉಪನದಿಯಾಗಿ ಹರಿಯುತ್ತದೆ. ಆಗ್ನೇಯಕ್ಕೆ ೩೫ ಕಿ. ಮೀ. ಹರಿದು ಇದೇ ಜಿಲ್ಲೆಯ (ಚಿಕ್ಕಮಗಳೂರು) ಮೂಡಿಗೆರೆ ತಾಲೂಕಿನ ಹಿರೇಸಾಗರ ಮೂಲಕ ಹಾಸನ ಜಿಲ್ಲೆಗೆ ಪ್ರವೇಶಿಸುವುದು. ಈ ನದಿಯ ಪುರಾಣಕಥೆ ಇಂತಿದೆ: ಹಿರಣ್ಯಾಯಕ್ಷನ

ಮಗ ಕಶ್ಯಾಪನಿಂದ ದಿತಿದೇವಿ ನೀರಿನ ಮೂಲಕ ಭೂಮಿಗೆ ಸೇರಿದಳು. ಎತ್ತರವಾದುದು ತುಂಗಾ, ಸುಂದರವಾದುದು ಭದ್ರಾ, ಕಣ್ಣಿನ ನದಿ ನೇತ್ರ ಎನ್ನತ್ತಾರೆ. ಹೀಗೆ ದಾಕ್ಷಾಣಿಯು ಪಾರ್ವತಿಯ ಮಗಳು, ದೇವರಾದ ಶಿವನಿಗೆ ಸಂಬಂಧಿಸಿದಂತೆ ಇತರ ಕಥೆಗಳಿವೆ.

**೫. ವೇದಾವತಿ** : ಇದಕ್ಕೆ 'ಹಗರಿ' ಎಂದು ಕರೆಯುವರು. ಬಾಬಾಬುಡನ್ ಗಿರಿಯ ಪೂರ್ವದ ಮುಳ್ಳಯ್ಯನಗಿರಿ ಪರ್ವತದಲ್ಲಿ ಹುಟ್ಟುತ್ತದೆ. ವೇದ ಎಂದರೆ ಗೌರಿ ಹಳ್ಳ (ಜಲಮೂಲ) ಎಂದಾಗುತ್ತದೆ. ವೇದ ಮತ್ತು ಆವತಿ ಎಂಬ ಪ್ರತ್ಯೇಕ ಹೊಳೆಗಳು ಸೇರಿ ಈ ನದಿಯಾಗಿದೆ. ಉಗಮದಿಂದ ಹರಿವನ್ನು ಕಣಿವೆ, ಹೊಳೆ, ಹಳ್ಳ, ದಂಡೆಗಳ ಮೂಲಕ ಪೂರ್ವದ ಕಡೆ ಹರಿದು, ಉತ್ತರಕ್ಕೆ ಶಾಕುನಗಿರಿ ಹತ್ತಿರ ಅಣೆಕಟ್ಟು ಕಟ್ಟಿದ್ದಾರೆ. ಅದಕ್ಕೆ ಅಯ್ಯನಕೆರೆ ಎನ್ನುವರು. ಚಿಕ್ಕಮಗಳೂರು-ಕಡೂರು ದಾರಿಯಲ್ಲಿ ಸಕ್ಕರೆ ಪಟ್ಟಣದ ಹತ್ತಿರ (ವೇದ) ಹೊಳೆ ಸಾಗಿ ಕಡೂರು ತಾಲೂಕಿನ ಈಶಾನ್ಯಕ್ಕೆ ಹರಿಯುವುದು. ಉತ್ತರದ ಹೊಳೆಯಾದ ಆವತಿಯು ಮುಳ್ಳಯ್ಯನಗಿರಿಯ ಬಳಿ ಇಳಿಮುಖದಿಂದ ಪೂರ್ವಕ್ಕೆ ಮತ್ತು ಎರಡು ಗಿರಿ ಕಣಿವೆಗಳ ಮಧ್ಯೆ ಶಿವನಗಿರಿ ಹಾಗು ಹಗರಿ ಕನಗಿರಿ ಮೂಲಕ ಮದಗಕೆರೆ ಸೇರುತ್ತದೆ. ಎರಡು ಹೊಳೆಗಳು ಕಡೂರಿನ ಸಮೀಪ ಸೇರಿ ವೇದಾವತಿಯಾಗುತ್ತದೆ.[೨೩] ಈ ಜಿಲ್ಲೆಯಲ್ಲಿ ೫೫ ಕಿ. ಮೀ. ಹರಿದು ಚಿತ್ರದುರ್ಗ ಜಿಲ್ಲೆಯನ್ನು ಪ್ರವೇಶಿಸುವುದು. ಹಿರಿಯೂರಿನ ಬಳಿ ಇದಕ್ಕೆ ವಾಣಿವಿಲಾಸಸಾಗರ ಅಣೆಕಟ್ಟು ನಿರ್ಮಾಣವಾಗಿದೆ.

**೬. ಯಗಚಿ:** ಯಗಚಿ ನದಿಗೆ 'ಬದರಿ' ಎಂದು ಕರೆಯುವರು. ಚಿಕ್ಕಮಗಳೂರು ತಾಲೂಕಿನ ಬಾಬಾಬುಡನ್‌ಗಿರಿ ಪರ್ವತ ಸಾಲಿನ ಸೀತಲಯ್ಯನಗಿರಿಯಲ್ಲಿ ಇದರ ಉಗಮ. ಚಿಕ್ಕಮಗಳೂರು ಜಿಲ್ಲೆಯಲ್ಲಿ ೨೦ ಕಿ.ಮೀ. ಹರಿದು ಅಂಬಲಿ ಗ್ರಾಮದ ಮೂಲಕ ಹಾಸನ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇದು ಹೇಮಾವತಿಗೆ ಪ್ರಮುಖ ಉಪನದಿಯಾಗಿ ಹಾಸನ ಜಿಲ್ಲೆಯ ಗೊರೂರು ಬಳಿ ಸೇರುತ್ತದೆ.

**೭. ಕೃಷ್ಣಾನದಿ** : ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಮಾಧವ ಪರ್ವತ ಶ್ರೇಣಿಯ ಮಹಾಬಲೇಶ್ವರದಲ್ಲಿ ಕೃಷ್ಣಾನದಿ ಜನಿಸುತ್ತದೆ. ೧೩೩೬.೫ ಮೀಟರ್ ಎತ್ತರದಿಂದ ನದಿ ಹುಟ್ಟಿ ೧೪೦೦ ಕಿ.ಮೀ. ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ಹರಿದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ನದಿಯ ಇಕ್ಕೆಲಗಳಲ್ಲಿ ಫಲವತ್ತಾದ ಮಣ್ಣಿದೆ. ಈ ನದಿಗೆ ವಿಷ್ಣು ಹೆಸರಿನ ಕೃಷ್ಣ ಎಂಬ ಪುರುಷನಾಮವಿದ್ದು, ಕೃಷ್ಣಾವತಾರವೆಂದು ಕೆಲವರು ತಿಳಿದಿದ್ದಾರೆ. ಈ ನದಿ ಮಂಗಾವತಿ ಹತ್ತಿರ ಬೆಳಗಾವಿ ಜಿಲ್ಲೆಯನ್ನು ಪ್ರವೇಶ ಮಾಡಿ ೩೫ ಕೀ. ಮೀ. ಉತ್ತರಕ್ಕೆ ಚಿಕ್ಕೋಡಿ ಮತ್ತು ೭೦ ಕಿ. ಮೀ. ದೂರ ಬೆಳಗಾವಿಯಿಂದ ಹರಿಯುತ್ತದೆ. ಕೊಲ್ಹಾಪುರದ ಹತ್ತಿರ ಪಂಚಗಂಗಾ ನದಿ ಬಂದು ಸೇರುತ್ತದೆ. ಕೃಷ್ಣಾನದಿ ಚಿಕ್ಕೋಡಿ, ಅಥಣಿ ಮತ್ತು ಶಹಾಪುರ ತಾಲೂಕುಗಳಲ್ಲಿ ಹರಿದು ಗಡಿನಿರ್ಮಿಸಿದೆ. ದೂದಗಂಗಾ, ವೇದಗಂಗಾ ಮುಂತಾದ ಉಪನದಿಗಳಿವೆ. ಚಿಂಚೊಳಿ ಹತ್ತಿರ ಹಳಹಳ್ಳ ಬಂದು ಸೇರುತ್ತದೆ. ಇದಕ್ಕೆ ಅಣೆಕಟ್ಟು ನಿರ್ಮಿಸಿದ ಬಗ್ಗೆ ಮುಂದೆ ತಿಳಿಸಲಾಗಿದೆ.

**೮. ಘಟಪ್ರಭಾ:** ಮಹಾರಾಷ್ಟ್ರದ ಪಶ್ಚಿಮಘಟ್ಟಗಳ ಸುಂದರಗಡದಲ್ಲಿ ಇದು ಜನಿಸುತ್ತದೆ. ಬೆಳಗಾವಿಯ ಶೆಟ್ಟಿಹಳ್ಳಿ ಹತ್ತಿರ ಪ್ರವೇಶಿಸಿ ಚಿಕ್ಕೋಡಿ ಹತ್ತಿರ ಹಿರಣ್ಯಕೇಶಿ ನದಿ ಬಂದು ಸೇರುತ್ತದೆ. ಹುಕ್ಕೇರಿ ತಾಲೂಕಿನ ಸುಲ್ತಾನಪುರದಿಂದ ಹರಿದು ಬಂದು

೫೩ ಮೀಟರ್ ಎತ್ತರದಿಂದ ಗೋಕಾಕ್ ಫಾಲ್ಸ್ ನಿರ್ಮಿಸಿದೆ. ಇದು ಬೆಳಗಾವಿ ಜಿಲ್ಲೆಯ ರಮಣೀಯ ಸ್ಥಳ. ನಂತರ ಬಿಜಾಪುರ ಜಿಲ್ಲೆಯನ್ನು ಮುಧೋಳ ತಾಲೂಕಿನ ಮೂಲಕ ಪ್ರವೇಶಿಸಿ ಬೀಳಗಿ ಹತ್ತಿರ ಕೃಷ್ಣಾನದಿಯನ್ನು ಸೇರುತ್ತದೆ. ಇದಕ್ಕೆ ಧೂಪದಾಳ ಮತ್ತು ಹಿಡಕಲ್ ಜಲಾಶಯಗಳನ್ನು ನಿರ್ಮಿಸಿದ್ದಾರೆ.[೨೪]

೯. **ಮಲಪ್ರಭಾ** : ಪಶ್ಚಿಮ ಘಟ್ಟಗಳ ಕ್ಷೋರ ಪರ್ವತದ ಕಣಕುಬಿ ಈ ನದಿಯ ಮೂಲ. ೭೯೩ ಮೀಟರ್ ಎತ್ತರದಿಂದ ಹುಟ್ಟಿ, ೧೬ ಕಿ. ಮೀ. ಪಶ್ಚಿಮಕ್ಕೆ ಹರಿದು ಖಾನಾಪುರ ತಾಲೂಕಿನ ಜಾಂಬೋಟಿ ಸೇರುತ್ತದೆ. ಈ ನದಿ ಖಾನಾಪುರ, ಸಂಪಗಾವಿ ಪರಸಗಡ್ ಮತ್ತು ರಾಮದುರ್ಗ ತಾಲ್ಲೂಕುಗಳಲ್ಲಿ ಹರಿಯುವುದು. ೬ ಕಿ. ಮೀ. ಅಂತರದಿಂದ ಸೌದತ್ತಿ ಸಮೀಪ ಹರಿದು ಮುನವಳ್ಳಿ ಪರ್ವತಗಳ ಮೂಲಕ ಹರಿದುಬರುತ್ತದೆ. ನವಿಲುತೀರ್ಥ ಬಳಿ ಜಲಾಶಯವನ್ನು ನಿರ್ಮಿಸಲಾಗಿದೆ. ಇದಕ್ಕೆ ಮಲಪಹರಿಣಿ (ಮಲಪಹರಿ) ಮತ್ತು ಮಾಲಿನಿ ಎನ್ನುತ್ತಾರೆ. ಇದರ ಉಪನದಿಗಳು ಬೆಣ್ಣೆಹಳ್ಳ, ತುಪರಿನಾಲ ಮುಂತಾದವು ಇವೆ. ಇವೆರಡು ಹೊಳೆಆಲೂರು ಸಮೀಪ ಮಲಪ್ರಭಾವನ್ನು ಸೇರುತ್ತವೆ. ಖಾನಾಪುರ, ಜಾಂಬೋಟಿ, ಮುಗಪಖಾನಹುಬ್ಬಳ್ಳಿ, ತುರಮರಿ, ಸಂಗೊಳ್ಳಿ, ಪೀರಾಪುರ, ಎಕ್ಕುಂಡಿ ಮತ್ತು ಮುನವಳ್ಳಿ ಸ್ಥಳಗಳಲ್ಲಿ ಹರಿದು ಕೂಡಲಸಂಗಮದ ಹತ್ತಿರ ಕೃಷ್ಣಾ ನದಿಯನ್ನು ಸೇರುತ್ತದೆ.

೧೦. **ಮಾರ್ಕಂಡೇಯ** : ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಬೈಲೂರು ಗ್ರಾಮದ ಹತ್ತಿರ ಮಾರ್ಕಂಡೇಯ ನದಿ ಹುಟ್ಟುತ್ತದೆ. ಬೆಳಗಾವಿಗೆ ೨೨ ಕಿ. ಮೀ. ಅಂತರದಿಂದ ಹುಕ್ಕೇರಿ, ಗೋಕಾಕ ತಾಲ್ಲೂಕುಗಳಲ್ಲಿ ಹರಿದು, ಬೆಣ್ಣೆಹಳ್ಳವನ್ನು ದಾಸನಹಟ್ಟಿ ಹತ್ತಿರ ಸೇರುತ್ತದೆ. ಗೊಡಚಿನಮಲ್ಕಿ ಹತ್ತಿರ ಮಾರ್ಕಂಡೇಯ ಜಲಾಶಯ ನಿರ್ಮಿಸಲಾಗುತ್ತಿದ್ದು, ನಂತರ ಇದು ಘಟಪ್ರಭಾವನ್ನು ಸೇರುತ್ತದೆ.

೧೧. **ದೂಧ್‌ಗಂಗಾ** : ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಭೋಳಕರವಾಡಿಯ ಉತ್ತರಕ್ಕೆ ಹುಟ್ಟುತ್ತದೆ. ಸಿಂಧನೆರ್ಲಿಗೆ ೧೦ ಕಿ. ಮೀ. ದೂರದಲ್ಲಿ (ಪೂನಾ-ಬೆಂಗಳೂರು ರಸ್ತೆ ಹತ್ತಿರ) ಹರಿದು ಅನೇಕ ಹಳ್ಳಿಗಳನ್ನು ಸುತ್ತಿ ಕೊನೆಗೆ ಕೊಲ್ಲಾಪುರ, ಬೆಳಗಾವಿ ಮೂಲಕ ಹರಿದು ಬರುತ್ತದೆ. ಚಿಕ್ಕೋಡಿ ತಾಲೂಕಿನ ಯಡೂರು (ಎನ್. ಎಚ್. ೪) ಹತ್ತಿರ ಬೆಳಗಾವಿಯಲ್ಲಿ ೧೦೯ ಕಿ. ಮೀ. ಹರಿಯುವುದು. ವೇದಗಂಗಾ ಇದಕ್ಕೆ ಸೇರಿಕೊಂಡು ಯಡೂರು ಹತ್ತಿರ ಕೃಷ್ಣಾನದಿಯೊಂದಿಗೆ ವಿಲೀನಗೊಳ್ಳುತ್ತದೆ.

೧೨. **ಮಹದಾಯಿ**: ಖಾನಾಪೂರ ತಾಲೂಕಿನ ದೇವಗಾಂವ ಈ ನದಿಯ ಮೂಲಸ್ಥಳ. ಪಶ್ಚಿಮಕ್ಕೆ ಹರಿಯುವಾಗ ಭಂಡೂರನಾಳ ಉಪನದಿಯಾಗಿ ಸೇರುತ್ತದೆ. ಎರಡು ಪರ್ವತ ಶ್ರೇಣಿಗಳ ಮೂಲಕ ಪಶ್ಚಿಮಕ್ಕೆ ಹರಿದು ವಜ್ರಾಪೋಹದಲ್ಲಿ (ಖಾನಾಪುರ) ಜಲಾಶಯ ನಿರ್ಮಿಸಿದ್ದಾರೆ. ಇದು ಕರ್ನಾಟಕದಲ್ಲಿ ೩೫ ಕಿ. ಮೀ., ಗೋವಾದಲ್ಲಿ ೪೫ ಕಿ. ಮೀ. ಹರಿಯುವುದರ ಮೂಲಕ ಪಣಜಿ ಹತ್ತಿರ ಅರಬ್ಬಿ ಸಮುದ್ರವನ್ನು ಸೇರುತ್ತದೆ. ಇದಕ್ಕೆ ನೀರಾವರಿ ಯೋಜನೆಗಳನ್ನು ಕೈಗೊಂಡು ೨೦೦೦ ಚ. ಕಿ. ಮೀ.ಗೆ ನೀರು ಒದಗಿಸಲಾಗಿದೆ.

ಕಾವೇರಿ ನದೀ ಜಾಲವು ಬಹು ದೊಡ್ಡ ನೀರಾವರಿ ಪ್ರದೇಶವನ್ನು ಹೊಂದಿದೆ. ಕೊಡಗಿನ ಭಾಗಮಂಡಲದಲ್ಲಿ ಹುಟ್ಟುವ ಕಾವೇರಿ, ಪೂರ್ವಾಭಿಮುಖವಾಗಿ ಹರಿದು ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಿಗೆ ನೀರನ್ನು ಒದಗಿಸುತ್ತದೆ. ಇದಕ್ಕೆ ಕರ್ನಾಟಕದಲ್ಲಿ ಹಾರಂಗಿ, ಯಗಚಿ, ಹೇಮಾವತಿ, ಲಕ್ಷ್ಮಣತೀರ್ಥ, ಕಪಿಲಾ, ಸುವರ್ಣಾವತಿ, ಶಿಂಷಾ ಅರ್ಕಾವತಿ ಹೀಗೆ ಸುಮಾರು ಇಪ್ಪತ್ತು ಉಪದಿಗಳು ಬಂದು ಸೇರುತ್ತವೆ. ಕರ್ನಾಟಕದಲ್ಲಿ ಕಾವೇರಿ ಹರಿವು ೪೦೦ ಕಿ. ಮೀ., ಕಣಿವೆ ವಿಸ್ತಾರ ಸು. ೩೦,೦೦೦ ಚ. ಕಿ.ಮೀ. ಕಾವೇರಿ ಜಲಸಂಪತ್ತು ಸು. ೧೧ ಶತಕೋಟಿ ಘನಮೀಟರ್. ೩ ಲಕ್ಷ ಹೆಕ್ಟೇರು ಭೂಮಿಗೆ ನೀರಾವರಿ ಸೌಲಭ್ಯವಾಗಿದೆ. ಹಾಸನ, ಕೊಡಗು, ಬೆಂಗಳೂರು, ತುಮಕೂರು ಜಿಲ್ಲೆಗಳೂ ಪ್ರಯೋಜನ ಪಡೆಯುತ್ತವೆ. ಮೈಸೂರು ಮತ್ತು ಬೆಂಗಳೂರಿಗೆ ಕುಡಿಯುವ ನೀರು ಕಾವೇರಿ ನದಿಯಿಂದಲೇ ಪೂರೈಕೆಯಾಗುತ್ತದೆ.

ಗೋದಾವರಿ ನದಿ ಜಾಲವು ಬೀದರ್ ಜಿಲ್ಲೆಯ ಮಾಂಜರಾ, ಕಾರಂಜಾ, ಮಧುರನಾಲಾ, ದೇವನಾಲಾ ಮತ್ತು ಹೆಬ್ಬಾಳಗಳನ್ನು ಹೊಂದಿದೆ. ಇವುಗಳಿಂದ ೦.೧೭ ಲಕ್ಷ ಹೆಕ್ಟೇರುಗಳಷ್ಟು ಮಾತ್ರ ನೀರಾವರಿ ಸೌಲಭ್ಯ ಆಗುವುದು. ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳ ನಡುವೆ ಆದ ಒಪ್ಪಂದದಿಂದ ಕಾರಂಜಾಯೋಜನೆ ಪ್ರಗತಿಯಲ್ಲಿದೆ.

ಪಾಲಾರ್-ಪೆನ್ನಾರ್ ನದೀ ಜಾಲವು ನಂದೀದುರ್ಗದ ಪೂರ್ವಕ್ಕೆ ಹರಿಯುವ ನದಿಗಳನ್ನು ಒಳಗೊಂಡಿದೆ. ಪಿನಾಕಿನಿ (ಉತ್ತರ ಮತ್ತು ದಕ್ಷಿಣ), ಪಾಲಾರ್ ಮತ್ತು ಪೆನ್ನಾರ್ ಪ್ರಮುಖವಾದವು. ಕೋಲಾರ ಜಿಲ್ಲೆ ಹೆಚ್ಚು ಭಾಗ, ಬೆಂಗಳೂರು ಜಿಲ್ಲೆಯ ೧/೩, ತುಮಕೂರು ಜಿಲ್ಲೆಯ ಕಾಲು ಭಾಗ ನದೀ ಜಾಲಕ್ಕೆ ಒಳಪಡುತ್ತದೆ. ೧.೩೭ ಲಕ್ಷ ಹೆಕ್ಟೇರ್ ಪ್ರದೇಶವೂ ನೀರಾವರಿ ಸೌಲಭ್ಯ ಪಡೆದಿದೆ.

ಕೃಷ್ಣಾ ನದೀ ಜಾಲಕ್ಕೆ ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳು ಸೇರಿವೆ. ಇದರ ವ್ಯಾಪ್ತಿಗೆ ವೇದಾವತಿ, ವರದಾ, ಭೀಮಾ, ಘಟಪ್ರಭಾ, ಮಲಪ್ರಭಾ, ಡೋಣಿ ಮೊದಲಾದ ಉಪನದಿಗಳಿವೆ. ತುಂಗಭದ್ರಾ ಕರ್ನೂಲಿನ ಬಳಿ ಕೃಷ್ಣಾವನ್ನು ಸೇರುತ್ತದೆ. ಈ ನದಿ ಕಣಿವೆ ೨೮ ಕೋಟಿ ಘನಮೀಟರು ನೀರು ಒದಗಿಸುತ್ತದೆ. ೬೩ ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಶೇ. ೧೨ ರಷ್ಟು ನೀರಾವರಿಗೆ ಒಳಪಟ್ಟಿದೆ. ಹೀಗೆ ಕರ್ನಾಟಕದ ಜಲಸಂಪತ್ತಿನಿಂದ ವಿದ್ಯುತ್ ಉತ್ಪಾದನೆ, ನೀರಾವರಿಗೆ ಹೆಚ್ಚು ಒತ್ತುಕೊಡ ಲಾಗಿದೆ.

ಹೀಗೆ ಕರ್ನಾಟಕದಲ್ಲಿ ಅನೇಕ ನದಿಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವನ್ನು ತಿಳಿಸಲಾಗಿದ್ದು, ಉಳಿದವುಗಳ ಪಟ್ಟಿಯನ್ನು ಮುಂದೆ ಕೊಡಲಾಗುವುದು. ಇತರ ನದಿಗಳ ಹೆಸರುಗಳು ಇಂತಿವೆ : ಹಿರೇಹಳ್ಳ, ಬಳ್ಳಾರಿ ನಾಲಾ, ಹಿರಾಣ್ಯಕ್ಷಿ, ವೇದಗಂಗಾ, ಅಗ್ರಾಣಿ, ಬರಪೊಳೆ, ಹಾರಂಗಿ, ಕುಮಾರಧಾರಾ, ಲಕ್ಷ್ಮಣತೀರ್ಥ ಮುಂತಾದವುಗಳನ್ನು ಹೆಸರಿಸಬಹುದು.[೨೫]

## ನದಿಗಳ ಉಗಮ ಮತ್ತು ಹರಿವು

| ನದಿ | ಮೂಲ | ಉದ್ದ ಕಿ. ಮೀ. |
|---|---|---|
| ಕೃಷ್ಣಾ | ಮಹಾಬಲೇಶ್ವರ - ಮಹಾರಾಷ್ಟ್ರ | ೪೮೩ |
| ತುಂಗ-ಭದ್ರಾ | ಗಂಗಾಮೂಲ - ಚಿಕ್ಕಮಗಳೂರು ಜಿಲ್ಲೆ | ೩೮೧ |
| ಕಾವೇರಿ | ತಲಕಾವೇರಿ - ಕೊಡಗು ಜಿಲ್ಲೆ | ೩೮೧ |
| ಮಲಪ್ರಭಾ | ಕಣಕುಂಬಿ - ಬೆಳಗಾವಿ ಜಿಲ್ಲೆ | ೩೦೪ |
| ವೇದಾವತಿ | ಬಾಬಾಬುಡನ್‌ಗಿರಿ - ಚಿಕ್ಕಮಗಳೂರು ಜಿಲ್ಲೆ | ೨೯೩ |
| ಭೀಮಾ | ಭೀಮಾಶಂಕರ - ಮಹಾರಾಷ್ಟ್ರ | ೨೯೦ |
| ಹೇಮಾವತಿ | ಜಾವಳಿ - ಚಿಕ್ಕಮಗಳೂರು ಜಿಲ್ಲೆ | ೨೪೫ |
| ಕಪಿಲಾ | ವೈನಾಡು - ಕೇರಳ | ೨೩೦ |
| ಘಟಪ್ರಭಾ | ರಾಮಘಟ್ಟ - ಬೆಳಗಾವಿ ಜಿಲ್ಲೆ | ೨೧೬ |
| ಡೋಣಿ | ಜತ್ - ಮಹಾರಾಷ್ಟ್ರ | ೧೯೫ |
| ವರದಾ | ವರದಾಮೂಲ - ಶಿವಮೊಗ್ಗ ಜಿಲ್ಲೆ | ೧೮೫ |
| ಕಾಳಿ | ಸೂಪ - ಉತ್ತರ ಕನ್ನಡ ಜಿಲ್ಲೆ | ೧೮೪ |
| ಲಕ್ಷ್ಮಣತೀರ್ಥ | ಮುಸಿಕಾಡು - ಕೊಡಗು ಜಿಲ್ಲೆ | ೧೮೦ |
| ಅರ್ಕಾವತಿ | ನಂದಿದುರ್ಗ - ಕೋಲಾರ ಜಿಲ್ಲೆ | ೧೬೧ |
| ಶಿಂಷಾ | ದೇವರಾಯನದುರ್ಗ - ತುಮಕೂರು ಜಿಲ್ಲೆ | ೧೩೦ |
| ಶರಾವತಿ | ಅಂಬುತೀರ್ಥ - ಶಿವಮೊಗ್ಗ ಜಿಲ್ಲೆ | ೧೨೮ |
| ಅಘನಾಶಿನಿ | ಶಂಕರಹೊಂಡ - ಉತ್ತರ ಕನ್ನಡ ಜಿಲ್ಲೆ | ೧೨೧ |
| ಮಾಂಜರ | ಬಾಲಾಘಾಟ್ - ಮಹಾರಾಷ್ಟ್ರ | ೧೧೬ |
| ಪಾಲಾರ್ | ಗೌತಮಗುಡ್ಡ - ಕೋಲಾರ ಜಿಲ್ಲೆ | ೧೦೮ |
| ಕುಮುದ್ವತಿ | ಹುಂಬುಚ - ಶಿವಮೊಗ್ಗ ಜಿಲ್ಲೆ | ೯೬ |
| ನೇತ್ರಾವತಿ | ಸಂಸ - ಚಿಕ್ಕಮಗಳೂರು ಜಿಲ್ಲೆ | ೯೬ |

## ಜಲಪಾತಗಳು

| ಜಲಪಾತ | ನದಿ | ಅಡಿ/ಎತ್ತರ |
|---|---|---|
| ಜೋಗ | ಶರಾವತಿ | ೯೬೦ |
| ಮಾಗೋಡು | ಬೇಡ್ತಿ(ಗಂಗಾವಳಿ) | ೮೦೦ |
| ಸಾರತ್ | ಸಾರತ್ (ಕೊಡಗು) | ೪೩೪ |
| ಉಂಚಳ್ಳಿ | ಅಘನಾಶಿನಿ | ೩೭೯ |
| ಶಿವಗಂಗಾ | ಗಣೇಶಪಾಲ (ಸೋಂದಾ) | ೩೫೩ |
| | ಎರಡನೇಹಂತ | |
| ಶಿವನಸಮುದ್ರ | ಕಾವೇರಿ | ೩೩೦ |
| ಲಾಲ್‌ಗುಳಿ | ಕಾಳಿ | ೩೦೦ |
| ಬುರುರೇಜೋಗ | ಅಘನಾಶಿನಿ | ೩೦೦ |
| ಗೋಕಾಕ್ | ಘಟಪ್ರಭಾ | ೧೭೧ |
| ಚುಂಚನಕಟ್ಟೆ | ಕಾವೇರಿ | ೮೦ |

# ೪. ಅಣೆಕಟ್ಟುಗಳ ನಿರ್ಮಾಣ ಯೋಜನೆ

ಕೃಷಿ ಕ್ರಾಂತಿಗೆ ಜಲವೇ ಆಧಾರ. ಜಲಸಂಪತ್ತು ಆರ್ಥಿಕ ಪ್ರಗತಿಗೂ ನಾಂದಿಯಾಗಿರುವುದು ಸ್ಪಷ್ಟ. ಆ ಮೂಲಕ ಜಲವಿದ್ಯುತ್, ಕೈಗಾರಿಕೆ ಮತ್ತು ಕುಡಿಯಲು ನೀರನ್ನು ಬಳಸಿಕೊಳ್ಳುವ ರೀತಿ ಮುಖ್ಯವೆನಿಸಿದೆ. ಕರ್ನಾಟಕದ ಬಹುತೇಕ ನದಿಗಳು ಮಳೆಗಾಲದಲ್ಲಷ್ಟೆ ಹರಿಯುತ್ತವೆ. ಬೇಸಿಗೆಯಲ್ಲಿ ಬತ್ತುವುದು ಸಹಜ. ಈ ನದಿಗಳ ಪೈಕಿ ಕೃಷ್ಣಾಕಣಿವೆಯ ಪಾಲುಗಾರಿಕೆ ನೀರಾವರಿಯಲ್ಲಿ ಅಗ್ರಸ್ಥಾನ ಪಡೆದಿದೆ. ರಾಜ್ಯದ ನೀರಾವರಿ ಪ್ರದೇಶದ ಶೇ. ೫೮.೬೬ ರಷ್ಟು (೧,೧೧,೭೪೧ ಚ. ಕಿ.ಮೀ.) ಕೃಷ್ಣಾ ಮತ್ತು ಅದರ ಉಪನದಿಗಳಿಂದ ನೀರಾವರಿಯಾಗುತ್ತದೆ. ಕಾವೇರಿ ಮತ್ತು ಉಪನದಿಗಳಿಂದ ಶೇ. ೧೮.೯೭ರಷ್ಟು (೩೬,೧೩೩ ಚ. ಕಿ.ಮೀ.), ಪಶ್ಚಿಮ ವಾಹಿನಿ ನದಿಗಳಿಂದ ಶೇ. ೧೨.೮೮ (೨೪, ೫೩೦ ಚ.ಕಿ.ಮೀ.) ನೀರಾವರಿಯಾಗುತ್ತದೆ. ರಾಜ್ಯದಲ್ಲಿ ಹರಿಯುತ್ತಿರುವ ಎಲ್ಲ ನದಿಗಳಿಂದ ಒಟ್ಟು ೩,೪೩೮ ಟಿ.ಎಂ.ಸಿ. ನೀರಿನ ಪ್ರಯೋಜನವಿದ್ದರೂ, ೧೬೯೫ ಟಿ.ಎಂ.ಸಿ. ಮಾತ್ರ ಬಳಸಲಾಗುತ್ತದೆ. (೧ ಟಿ.ಎಂ.ಸಿ.=೧,೦೦೦x೧೦,೦೦೦ ಘನ ಅಡಿಗಳು ಅಥವಾ ೧೦ ಸಾವಿರ ಹೆಕ್ಟೇರು ಭೂಮಿಗೆ ಹರಿಯುವ ನೀರಿನ ಸಾಮರ್ಥ್ಯ).

ಹರಿಯುವ ಹಳ್ಳ, ಕೊಳ್ಳ, ನದಿ, ಕಾಲುವೆಗಳಿಗೆ ಕೆರೆ, ಕಟ್ಟೆ, ಅಣೆಕಟ್ಟುಗಳನ್ನು ನಿರ್ಮಿಸುವ ಕಾರ್ಯ ಪ್ರಾಚೀನ ಕಾಲದಿಂದಲೂ ಸಾಗಿಬಂದಿದೆ. ಜನಸಾಮಾನ್ಯರಿಂದ ಇಂತಹ ಕೆಲಸಗಳು ಆಗುವುದೇ ಇಲ್ಲ. ದೊಡ್ಡ ಕೆಲಸಕ್ಕೆ ಅಪಾರವಾದ ಹಣ ಶ್ರಮ ಬೇಕಾಗುತ್ತದೆ. ಹೀಗಾಗಿ ಸಂಘ, ಸಂಸ್ಥೆಗಳಿಗಿಂತ ಸರ್ಕಾರವೇ ಇಂತಹ ಕೆಲಸಕ್ಕೆ ಕೈ ಹಾಕುತ್ತದೆ. ಬ್ರಿಟಿಷರು ಮತ್ತು ಕರ್ನಾಟಕ ಸರ್ಕಾರವು ಕೈಗೊಂಡ ನೀರಾವರಿಯ ಮಹತ್ತರವಾದ ಅಣೆಕಟ್ಟು, ಜಲಾಶಯ, ಯೋಜನೆಗಳನ್ನು ಸೂಕ್ಷ್ಮವಾಗಿ ತಿಳಿಸಲಾಗುವುದು.

## ೧. ವಾಣಿವಿಲಾಸಸಾಗರ ಯೋಜನೆ

ವಾಣಿವಿಲಾಸಸಾಗರ ಯೋಜನೆಯನ್ನು ವೇದಾವತಿ ನದಿಗೆ ಅಡ್ಡಲಾಗಿ ಚಿತ್ರದುರ್ಗ ಜಿಲ್ಲೆಯ, ಹಿರಿಯೂರು ತಾಲೂಕಿನ ಮಾರೀಕಣಿವೆಯಲ್ಲಿ ಕಟ್ಟಲಾಗಿದೆ. ಇದು ಏಷ್ಯಾ ಖಂಡದಲ್ಲಿಯೇ ಮೊದಲನೇ ಅತಿ ದೊಡ್ಡ ಯೋಜನೆ. ಇದನ್ನು ೧೮೯೭ರಲ್ಲಿ ಆರಂಭಿಸಿ ೧೯೦೭ರಲ್ಲಿ ಮುಕ್ತಾಯಗೊಳಿಸಿಲಾಯಿತು. ಆಗಿನ ದಿವಾನರಾಗಿದ್ದ ಕೆ. ಶೇಷಾದ್ರಿ ಅಯ್ಯರ್ ಪೂರ್ಣಗೊಳಿಸಲು ಸಹಕರಿಸಿದ್ದರು. ಅಣೆಕಟ್ಟಿಗೆ ಗಾರೆಯನ್ನು ಬಳಸಿ ४೦೫ ಮೀಟರ್ ಉದ್ದ ೫೦ ಮೀಟರ್ ಎತ್ತರ ಕಟ್ಟಲಾಗಿದೆ. ಈ ಅಣೆಕಟ್ಟಿನ ನೀರಿನ ಸಾಮರ್ಥ್ಯ ೯೦೩ ದ.ಲ.ಘ. ಮೀ. ಈಗ ಉಪಲಬ್ಧದ ನೀರಿನಂತೆ ಕಟ್ಟೆಯಲ್ಲಿ ಹೆಚ್ಚಾಗಿ ನೀರು ತುಂಬುವುದೇ ಇಲ್ಲ. ವಾಣಿವಿಲಾಸಸಾಗರದ ಕೆಳಗಡೆ ಇರುವ ಕಾರ್ತಿಕೇನಹಳ್ಳಿ ಅಣೆಕಟ್ಟಿನಿಂದ ನೀರನ್ನು ವ್ಯವಸಾಯಕ್ಕೆ ಬಳಸುತ್ತಾರೆ. ಕ್ರಮವಾಗಿ ಎರಡು ಕಾಲುವೆಗಳು ೪೭ ಮತ್ತು ೪೮ ಕಿ.

ಮೀ. ಉದ್ದ ಇವೆ. ಪಿರಿಯಾಪಟ್ಟಣ ತಾಲೂಕಿನ ೧೦,೦೦೦ ಹೆಕ್ಟೇರ್ ಭೂಮಿಗೆ ಇದು ನೀರು ಒದಗಿಸುತ್ತದೆ. ಪಿರಿಯಾಪಟ್ಟಣದ ಜನತೆಗೆ ಸಂತೋಷವಾದರೆ, ಉಳಿದ ಗ್ರಾಮದ ರೈತರು ನೀರಿಗಾಗಿ ಗೋಗರೆದು ಪ್ರತಿಭಟನೆ ನಡೆಸುತ್ತಿದ್ದಾರೆ.

## ೨. ಕೃಷ್ಣರಾಜಸಾಗರ ಯೋಜನೆ

ಮೈಸೂರು ಸಂಸ್ಥಾನದ ಪ್ರತಿಷ್ಠೆಯ ಪ್ರತೀಕವೆನಿಸಿದೆ ಈ ಯೋಜನೆ. ಕೃಷ್ಣರಾಜ ಸಾಗರ ಅಣೆಕಟ್ಟಿನ ನಿರ್ಮಾಣ ೧೯೧೧ರಲ್ಲಿ ಆರಂಭವಾಗಿ ೧೯೩೨ರಲ್ಲಿ ಕೊನೆಗೊಂಡಿತು. ಮಂಡ್ಯ ಜಿಲ್ಲೆಯ ಪಾಂಡವಪುರ ತಾಲೂಕು ಕನ್ನಂಬಾಡಿ ಹಳ್ಳಿಯಲ್ಲಿ ಕಾವೇರಿಗೆ ಅಡ್ಡಲಾಗಿ ೨,೬೨೧ ಮೀಟರ್ ಉದ್ದ ಮತ್ತು ೪೩ ಮೀಟರ್ ಎತ್ತರದ ಗಾರೆಯ ಅಣೆಕಟ್ಟನ್ನು ಕಟ್ಟಲಾಗಿದೆ.[೨೬] ಇದು ಖ್ಯಾತ ಇಂಜಿನಿಯರ್ ಸರ್. ಎಂ. ವಿಶ್ವೇಶ್ವರಯ್ಯನವರ ಶ್ರಮದ ಫಲ ಎಂದರೆ ತಪ್ಪಲ್ಲ. ಅಣೆಕಟ್ಟು ಮೂರು ಕಾಲುವೆಗಳನ್ನು ಹೊಂದಿದ್ದು. ಪ್ರಮುಖ ಕಾಲುವೆಗೆ ಸರ್. ಎಂ. ವಿಶ್ವೇಶ್ವರಯ್ಯನವರ (ಮೈಸೂರಿನ ದಿವಾನರು) ಹೆಸರಿಟ್ಟಿದ್ದಾರೆ. ಇದು ೪೫ ಕಿ. ಮೀ. ಉದ್ದವಿದ್ದು, ೩೩೦ ಕಿ. ಮೀ. ಉದ್ದದ ಇತರ ಶಾಖೆಗಳಿಂದ ಕೂಡಿದೆ. ಇದರ ಕೆಳಮಟ್ಟದಲ್ಲಿ ಎರಡು ಕಾಲುವೆಗಳಿದ್ದು, ಒಂದು ಬಲದಂಡೆ ಇನ್ನೊಂದು ಎಡದಂಡೆ. ಕ್ರಮವಾಗಿ ಇವು ೩೨ ಕಿ. ಮೀ ಮತ್ತು ೨೧ ಕಿ. ಮೀ. ಹರಿಯುತ್ತವೆ. ಕೃಷ್ಣರಾಜಸಾಗರದ ಅಚ್ಚುಕಟ್ಟಿನ ಪ್ರದೇಶದಲ್ಲಿ ಕೆಲವು ಜಲನೆಲೆಗಳು ಮತ್ತು ಕೆರೆಗಳು ಇದ್ದು ಅವು ಮಂಡ್ಯ, ಮದ್ದೂರು, ನಾಗಮಂಗಲ, ಮಳವಳ್ಳಿ ತಾಲ್ಲೂಕುಗಳಲ್ಲದೆ, ಮೈಸೂರು ಜಿಲ್ಲೆ ಮತ್ತು ತಾಲೂಕಿನಲ್ಲಿ ಇವುಗಳಿಂದ ಕೂಡಿಕೊಂಡು ಒಟ್ಟು ೭೭,೦೦೦ ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಬಳಸಲಾಗುತ್ತದೆ. ಮೈಸೂರು ಜಿಲ್ಲೆಯ ಮೈಸೂರು, ಟಿ. ನರಸೀಪುರ, ನಂಜನಗೂಡು, ಹೆಗ್ಗಡದೇವನ ಕೋಟೆ, ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲೂಕಿನ ಅತ್ಯವಶ್ಯಕವಾದ ಸುಮಾರು ಪ್ರದೇಶಗಳಿಗೆ ನೀರು ಒದಗಿಸಲು ಕೃಷ್ಣ ರಾಜಸಾಗರ ಬಲದಂಡೆ ಕಾಲುವೆ (ವರುಣಾ) ಕೆಲಸ ೧೯೭೮ರಲ್ಲಿ ಕೈಗೊಳ್ಳಲಾಗಿತ್ತು. ಇಂದಿಗೂ ಇದರ ಕಾಮಗಾರಿಗಳು ಕೆಲವು ಕಡೆ ನಡೆಯುತ್ತಿವೆ. ೧೩೫ ಕಿ. ಮೀ. ಉದ್ದವಿರುವ ಮತ್ತು ಅಣೆಕಟ್ಟಿನ ಬಲದಂಡೆಯಿಂದ ಮುಂದುವರಿಯುತ್ತಿದ್ದು, ೩೨, ೩೭೫ ಹೆ. ಭೂಮಿಗೆ ನೀರು ಒದಗಿಸುವ ಸಾಮರ್ಥ್ಯ ಹೊಂದಿದೆ. ೧೯೩೧ರಲ್ಲಿ ನೀರಾವರಿ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದ್ದು, ಅವುಗಳನ್ನು ವಿವಿಧ ಹಂತಗಳಲ್ಲಿ ಅಭಿವೃದ್ಧಿಪಡಿಸಲಾಯಿತು. ೧೯೪೪ರಲ್ಲಿ ಮಂಜೂರಾದ ಭೂಮಿಗೆ ೪೫,೫೮೦ ಹೆ. ನೀರು ಒದಗಿಸಲು ಆರಂಭಿಸಲಾಯಿತು. ಅಣೆಕಟ್ಟಿನ ಎಡದಂಡೆ ಕಾಲುವೆ ಪ್ರಸ್ತುತ ೭೯,೩೫೨ ಹೆ. ಭೂಮಿಗೆ ನೀರನ್ನು ಒದಗಿಸುತ್ತದೆ. ನೀರಾವರಿ ಬೇಸಾಯದ ಪ್ರಮಾಣವು ಹೆಚ್ಚಾಗಿರುವ ಕಾರಣ ಪ್ರಮುಖ ಮತ್ತು ಉಪಕಾಲುವೆಗಳ ಮೂಲಕ ಹೆಚ್ಚು ಪ್ರಮಾಣದಲ್ಲಿ ನೀರನ್ನು ಉಪಯೋಗಿಸುವ ಅವಶ್ಯಕತೆಯು ಉಂಟಾಗುವುದು. ಇದರಿಂದ ನೀರಾವರಿ ವ್ಯವಸ್ಥೆಯ ನಿರ್ವಹಣೆ ಕಷ್ಟ. ನಂತರ ನವೀಕರಣ ಯೋಜನೆಗೆ ೬೩ ಕೋಟಿ ರೂಪಾಯಿ ವೆಚ್ಚ ಮಾಡಿ ಕಾರ್ಯರೂಪಕ್ಕೆ ತರಲು ಪ್ರಯತ್ನಿಸಲಾಗಿದೆ. ಕಳೆದ ವರ್ಷ ವರುಣಾ ಕಾಲುವೆಗೆ ರಾಜ್ಯ ಸರ್ಕಾರ ಕೋಟಿಗಟ್ಟಲೆ ಕಾಮಗಾರಿಗೆಂದು ಹಣ ಮಂಜೂರು ಮಾಡಿ ಕಾಮಗಾರಿ ಕೆಲಸ ಅಷ್ಟಕ್ಕಷ್ಟೆ ನಡೆದಿದೆ ಎಂಬ ರೈತರ ಆಕ್ರೋಶವಿದೆ.[೨೭]

## ೩. ಹೇಮಾವತಿ ಯೋಜನೆ

ಹಾಸನ ಜಿಲ್ಲೆಯ ಗೊರೂರು ಗ್ರಾಮದ ಕೃಷ್ಣರಾಜಸಾಗರ ಮೇಲ್ಭಾಗದಲ್ಲಿ ಸೇರುವ ಕಾವೇರಿಯ ಉಪನದಿಯಾದ ಹೇಮಾವತಿಗೆ ಅಡ್ಡಲಾಗಿ ಹೇಮಾವತಿ ಯೋಜನೆಯನ್ನು (೧೯೬೩) ಕಾರ್ಯರೂಪಕ್ಕೆ ತರಲಾಗಿದೆ.[೨೮] ಇದು ೪,೬೯೨ ಮೀಟರ್ ಉದ್ದ, ೫೮.೫ ಮೀಟರ್ ಎತ್ತರವಿದ್ದು ಸಂಕೀರ್ಣವಾದ ಅಣೆಕಟ್ಟು ನಿರ್ಮಿಸಲಾಗಿದೆ. ಇದರಿಂದ ಮೂರು ಕಾಲುವೆಗಳು ಹೊರಡುತ್ತವೆ: ಎಡದಂಡೆ ಕಾಲುವೆ, ಬಲದಂಡೆ ಕಾಲುವೆ, ಉನ್ನತ ಮಟ್ಟದ ಕಾಲುವೆ. ಹೀಗೆ ಇವು ೯೩ ಕಿ. ಮೀ., ೨೩೩ ಕಿ. ಮೀ., ೧೦೬ ಕಿ. ಮೀ. ಉದ್ದವಾಗಿವೆ. ಇದರಿಂದ ಹಾಸನದ ಅರಕಲಗೂಡು, ಹೊಳೆನರಸೀಪುರ, ಚನ್ನರಾಯ ಪಟ್ಟಣ ಮತ್ತು ಹಾಸನ ತಾಲೂಕುಗಳು, ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ, ಪಾಂಡವಪುರ, ನಾಗಮಂಗಲ, ಮದ್ದೂರು ಮತ್ತು ಮಂಡ್ಯ ತಾಲೂಕು, ಮೈಸೂರು ಜಿಲ್ಲೆಯ ಕೃಷ್ಣ ರಾಜನಗರ, ತುಮಕೂರು ಜಿಲ್ಲೆಯ ತುಮಕೂರು, ತಿಪಟೂರು, ತುರುವೆಕೆರೆ, ಗುಬ್ಬಿ ಮತ್ತು ಕುಣಿಗಲ್ ತಾಲ್ಲೂಕುಗಳ ೨.೬೩ ಲಕ್ಷ ಹೆ. ಭೂಮಿಗೆ ನೀರು ಒದಗಿಸುತ್ತದೆ. ಈ ಸಂಬಂಧ ಕಾಲುವೆ ತೋಡಿ ರೈತರಿಗೆ ನೀರು ವಿತರಿಸಲು ಬಾಗೂರು - ನವಿಲೆ ಸುರಂಗ ಮಾರ್ಗದಲ್ಲಿ ಅನೇಕ ನಿರಾಶ್ರೀತರು ಕಷ್ಟ-ನಷ್ಟಗಳಿಗೊಳಗಾದರು.

## ೪. ಕಬಿನಿ ಯೋಜನೆ

ಕಾವೇರಿಯ ಉಪನದಿಯಾಗಿ ಕಬಿನಿಯು ಕೃಷ್ಣರಾಜಸಾಗರದ ಕೆಳಗಡೆ ಸೇರುತ್ತದೆ. ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕು ಬಿದರಹಳ್ಳಿಯಲ್ಲಿ ಅದಕ್ಕೆ ಅಡ್ಡಲಾಗಿ ಕಬಿನಿ ಅಣೆಕಟ್ಟನ್ನು ಕಟ್ಟಲಾಗಿದೆ. ಅದು ಸಂಕೀರ್ಣವಾದ ಅಣೆಕಟ್ಟು ಆಗಿದ್ದು, ೨೭೩೨ ಮೀಟರ್ ಉದ್ದ ಮತ್ತು ತಳಪಾಯ ಮಟ್ಟದಿಂದ ಸರಾಸರಿ ೨೮.೮೮. ಎತ್ತರ, ೫೬೩ದ. ೮. ಘ. ಮೀ. ನೀರನ್ನು ಕೂಡಿಸಿಡುವ ಸಾಮರ್ಥ್ಯ ಹೊಂದಿದೆ. ಇದಕ್ಕೆ ೩ ಕಾಲುವೆಗಳಿದ್ದು; ಎಡದಂಡೆ, ಬಲದಂಡೆ ಮತ್ತು ಬಲದಂಡೆಯ ಎಡಕಾಲುವೆಗಳು ಕ್ರಮವಾಗಿ ೨೭. ಕಿ. ಮೀ, ೨೦೨ ಕಿ. ಮೀ. ಮತ್ತು ೨೩.೨ ಕಿ. ಮೀ ಉದ್ದ ಇವೆ. ಇದು ಮುಗಿದರೆ ೮೯,೦೦೦ ಹೆ. ಭೂಮಿಗೆ ಮೈಸೂರು ಜಿಲ್ಲೆಯ ಎಚ್. ಡಿ. ಕೋಟೆ, ನಂಜನಗೂಡು, ಟಿ. ನರಸೀಪುರ, ಎಳಂದೂರು ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ನೀರು ಒದಗಿಸುತ್ತದೆ.[೨೯] ಇಡೀ ಯೋಜನೆಯಲ್ಲಿ ೩೦,೦೦೦ ಕಿ. ವ್ಯಾ. ವಿದ್ಯುಚ್ಛಕ್ತಿ ಉತ್ಪಾದನೆ ಮಾಡುವ ಯೋಜನೆಯನ್ನು ಹೊಂದಿದೆ. ಎತ್ತರದ ಪ್ರದೇಶಕ್ಕೆ ನೀರಿನ ಹರಿವು ಬರಬೇಕೆಂದು ರೈತರ ಕೂಗು ಕೇಳಿಬರುತ್ತದೆ.

## ೫. ಹಾರಂಗಿ ಯೋಜನೆ

ಕಾವೇರಿ ನದಿಯ ಉಪನದಿ ಹಾರಂಗಿ. ಈ ನದಿಗೆ ಅಡ್ಡಲಾಗಿ ಹುದುಗೂರು ಬಳಿ (ಸೋಮವಾರಪೇಟೆ) ಅಣೆಕಟ್ಟು ಕಟ್ಟಲಾಗಿದೆ.[೩೦] ಇದು ೮೪೫.೮ ಮೀಟರ್ ಉದ್ದ, ತಳಪಾಯದಿಂದ ೫೦ ಮೀಟರ್ ಎತ್ತರವಿದ್ದು ಸಂಕೀರ್ಣ ಅಣೆಕಟ್ಟಾಗಿದೆ. ಇದು ೧೯೦ ಕಿ. ಮೀ. ಉದ್ದದ ಎಡ ಮತ್ತು ೨೨೭ ಕಿ. ಮೀ. ಉದ್ದದ ಬಲ ಕಾಲುವೆಗಳನ್ನು

ಹೊಂದಿದೆ. ಈ ಅಣೆಕಟ್ಟು ಕೊಡಗಿನ ಸೋಮವಾರಪೇಟೆ, ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕು, ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ, ಕೃಷ್ಣರಾಜನಗರ ಮತ್ತು ಹುಣಸೂರು ತಾಲೂಕುಗಳ ಸು. ೫೩,೦೦೦ ಹೆಕ್ಟೇರ್ ಭೂಮಿಗೆ ನೀರನ್ನು ಒದಗಿಸುತ್ತದೆ. ಆದರೂ ನೀರಿನ ವಿತರಣೆಗಾಗಿ ಆಗಾಗ ಸಂಘರ್ಷಗಳು ನಡೆಯುತ್ತಿರುತ್ತವೆ.

## ೬. ತುಂಗಭದ್ರಾ ಯೋಜನೆ

ಹೈದರಾಬಾದ್ ಮತ್ತು ಮದ್ರಾಸ್ ಪ್ರಾಂತೀಯ ಸರ್ಕಾರಗಳು ಕೂಡಿ ೧೯೪೫ರಲ್ಲಿ ತುಂಗಭದ್ರಾ ಯೋಜನೆಯನ್ನು ಪ್ರಾರಂಭಿಸಿದವು. ಹೊಸಪೇಟೆಯ ಸಮೀಪ ೩ ಕಿ. ಮೀ. ದೂರದಲ್ಲಿರುವ ಮಲ್ಲಾಪುರದಲ್ಲಿ ಅಣೆಕಟ್ಟು ನಿರ್ಮಾಣಗೊಂಡಿದೆ. ಪ್ರತ್ಯೇಕವಾದ ಎರಡು ಸರ್ಕಾರಗಳು ನದಿಯ ವಿರುದ್ಧ ದಿಕ್ಕುಗಳಿಂದ ಜಂಟಿಯಾಗಿ ಅಣೆಕಟ್ಟನ್ನು ಕಟ್ಟಲು ಪ್ರಾರಂಭಿಸಿದ ಕೆಲಸ ೧೯೫೩ರಲ್ಲಿ ಮುಕ್ತಾಯವಾಯಿತು. ಅದೇ ವರ್ಷ ಬಲದಂಡೆ ಕೆಳಮಟ್ಟ ಕಾಲುವೆಯ ಮೂಲಕ ನೀರಾವರಿಯನ್ನು ಪ್ರಾರಂಭಿಸಿದರು. ಅಣೆಕಟ್ಟು ೨,೪೪೦ ಮೀ. ಉದ್ದವಿದ್ದು ಅತಿ ಆಳದ ಅಸ್ತಿಭಾರದಿಂದ ೪೯ ಮೀಟರ್ ಎತ್ತರವಿದೆ. ೩,೭೬೬ ದ.ಲ.ಘ.ಮೀ ನೀರನ್ನು ಶೇಖರಿಸುತ್ತದೆ. ಎಡದಂಡೆ ಕಾಲುವೆ ೨೨೬ ಕಿ. ಮೀ. ದೂರ ಕೊಪ್ಪಳ, ರಾಯಚೂರು ಜಿಲ್ಲೆಗಳಲ್ಲಿ ಹರಿಯುತ್ತಿದ್ದು, ಮೊದಲಿನ ೩೦ ಕಿ. ಮೀ. ಗುಡ್ಡಗಾಡು ಮತ್ತು ವಿಜಯನಗರದ ಅವಶೇಷಗಳಿರುವ ಪ್ರದೇಶದಲ್ಲಿ ನಿರ್ಮಾಣಗೊಂಡಿದೆ. ಕಾಲುವೆಯು ಸಣಾಪುರ ಮತ್ತು ಶಿವಪುರದ ಎರಡು ಉಪಜಲಾಶಯಗಳ ಮೂಲಕ ಹರಿದು ೧೦೮೪ ಮೀಟರ್ ಉದ್ದ ಸುರಂಗದ ಮೂಲಕ ಹೋಗುತ್ತದೆ. ವಿದ್ಯುಚ್ಛಕ್ತಿಗಾಗಿ ೨೪ನೇ ಕಿ. ಮೀ. ದೂರದವರೆಗೆ ಎತ್ತರ ಪ್ರದೇಶಕ್ಕೆ ಈ ಕಾಲುವೆ ನೀರನ್ನು ಒಯ್ದು ೧೯೮ ಕ್ಯುಸೆಕ್ಸ್ ನೀರನ್ನು  ಬಿಡುಗಡೆ ಮಾಡುವಂತೆ ರಚಿಸಿರುವರು. ನಂತರ ೮೭ ಕ್ಯುಸೆಕ್ಸ್ ನೀರನ್ನು ನೀರಾವರಿಗಾಗಿ ಬಳಸಲಾಗುತ್ತದೆ. ಈ ಕಾಲುವೆಯ ಉದ್ದಕ್ಕೂ ಅಂಚು ಕಟ್ಟಲಾಗಿದ್ದು. ೨.೪ ಲಕ್ಷ ಹೆಕ್ಟರ್ ಜಮೀನಿಗೆ ಉಪಯೋಗವಾಗಬೇಕೆಂದು ಇದನ್ನು ನಿಯೋಜಿಸಲಾಗಿದೆ. ಎಡದಂಡೆ ಉನ್ನತ ಮಟ್ಟದ ಕಾಲುವೆ ಸಣ್ಣದಾಗಿದ್ದು ೧೨. ಕಿ. ಮೀ. ಉದ್ದವಾಗಿದೆ. ಕೊಪ್ಪಳ ಜಿಲ್ಲೆಯಲ್ಲಿ ೩೨೦ ಹೆಕ್ಟೇರ್  ಭೂಮಿ ನೀರಾವರಿ ಪ್ರದೇಶವಾಗಿದೆ.

ಬಲದಂಡೆ ಕಾಲುವೆಗೆ ಅದರ ಮೊದಲು ೨೨ ಕಿ. ಮೀ. ವಿದ್ಯುಚ್ಛಕ್ತಿ ಕಾಲುವೆಯೆಂದು ಮಾಡಿದ್ದಾರೆ. ೧೦. ಕಿ. ಮೀ. ವರೆಗೆ ಒರಟಾದ ಭೂಪ್ರದೇಶದಲ್ಲಿ ಹರಿದು ಹಂಪಿ ಹತ್ತಿರ ೩೩.೪ ಮೀಟರ್ ಎತ್ತರದ ಜಲಪಾತವಿದ್ದು (ಎಚ್.ಪಿ.ಸಿ) ವಿದ್ಯುಚ್ಛಕ್ತಿಗಾಗಿ ಉಪಯೋಗಿಸಲಾಗುತ್ತದೆ. ೭೧ ಕ್ಯುಸೆಕ್ಸ್ ನೀರಿನ  ಹರಿವಿನಲ್ಲಿ ೩೦ ಕ್ಯುಸೆಕ್ಸ್ ನೀರನ್ನು ನದಿಗೆ ಬಿಡಲಾಗುತ್ತದೆ. ಕೇವಲ ೫೧ ಕ್ಯುಸೆಕ್ಸ್ ನೀರನ್ನು ಮಾತ್ರ ಸರಬರಾಜು ಮಾಡುತ್ತದೆ. ೨೨೭ ಕಿ. ಮೀ. ವರೆಗೆ ಕರ್ನಾಟಕದಲ್ಲಿ ಹರಿದು ಉಳಿದ ೯೮ ಕಿ. ಮೀ. ಕರ್ನೂಲ್ ಜಿಲ್ಲೆಯಲ್ಲಿ ಹರಿಯುತ್ತದೆ. ಕರ್ನಾಟಕದಲ್ಲಿ ೩೭,೦೦೦ ಹೆಕ್ಟೇರುಗಳಷ್ಟು ಭೂಮಿಗೆ ನೀರು ಉಣಿಸುತ್ತದೆ. ಬಲದಂಡೆ ಮೇಲ್ಮಟ್ಟದ ಕಾಲುವೆ ೧೯೫ ಕಿ.ಮೀ. ಉದ್ದವಿದ್ದು, ೧೦೯ ಕಿ. ಮೀ. ಕರ್ನಾಟಕದಲ್ಲಿ ಹರಿದು ಉಳಿದ ಭಾಗವು ಆಂಧ್ರದಲ್ಲಿ ಹರಿಯುತ್ತದೆ. ಇದು ೮೧,೦೦೦ ಹೆಕ್ಟೇರ್ ಭೂಮಿಗೆ ಕರ್ನಾಟಕದಲ್ಲಿ ನೀರು ಒದಗಿಸುತ್ತದೆ. ಅಲ್ಲದೆ ವಿದ್ಯುಚ್ಛಕ್ತಿಯಲ್ಲಿ ೧,೭೨,೫೦೦ ಕಿ. ವ್ಯಾ. ಉತ್ಪಾದನೆ ಮಾಡುತ್ತದೆ.

ಭಾರತ ಸರ್ಕಾರ ನೇಮಿಸಿರುವಂತೆ ತುಂಗಭದ್ರಾ ಮಂಡಳಿಯು ಅಣೆಕಟ್ಟಿನ ಬಲಗಡೆಯ ಅರ್ಧಭಾಗದ ಆಡಳಿತ ಮತ್ತು ನಿಯಂತ್ರಣವನ್ನು ನೋಡಿಕೊಳ್ಳುತ್ತದೆ. ಮಂಡಳಿಗೆ ಕೇಂದ್ರ ನೀರಾವರಿ ಮಂತ್ರಿಗಳು ನೇಮಿಸಿದ ಒಬ್ಬ ಅಧ್ಯಕ್ಷ ಹಾಗೂ ಭಾರತ ಸರ್ಕಾರ, ಆಂಧ್ರ ಪ್ರದೇಶ ಮತ್ತು ಕರ್ನಾಟಕ ಸರ್ಕಾರಗಳು ನೇಮಿಸಿದ ೩ ಜನ ಸದಸ್ಯರು ಇರುತ್ತಾರೆ. ಬಲದಂಡೆ ಕಾಲುವೆಗೆ ನಿಗದಿತ ಪ್ರಮಾಣದ ನೀರು ಬಿಡುವಂತೆ ಆಂಧ್ರದ ಬೇಡಿಕೆಯಿದ್ದು, ಬಳ್ಳಾರಿ ಪ್ರದೇಶದ ರೈತರು ಸಹ ಬೆಳೆಗಳಿಗೆ ಸೂಕ್ತ ಸಮಯದಲ್ಲಿ ನೀರಿನ ಪೂರೈಕೆಯನ್ನು ಮಾಡುವಂತೆ ಒತ್ತಾಯಿಸುತ್ತಾರೆ. ರಾಯಚೂರು ಜಿಲ್ಲೆಯ ಕೆಲವು ಭಾಗಗಳ ರೈತರು ಆಗಾಗ ನೀರಿಗಾಗಿ ಹೋರಾಟ ಮಾಡುತ್ತಾ ಬಂದಿದ್ದಾರೆ.

### ೭. ಭದ್ರಾಜಲಾಶಯ ಯೋಜನೆ

ಇದು ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿನ ಲಕ್ಕವಳ್ಳಿ ಸಮೀಪವಿದೆ. ಶಿವಮೊಗ್ಗ ಜಿಲ್ಲೆಯ ಗಡಿಭಾಗದ ಸಿಂಗನಮನೆ ಹತ್ತಿರ ಭದ್ರಾಜಲಾಶಯವನ್ನು ಹಿಂದಿನ ಮೈಸೂರು ಸರ್ಕಾರ ೧೯೪೭ರಲ್ಲಿ ಪ್ರಾರಂಭಿಸಿತು. ಈ ಯೋಜನೆ ಭದ್ರಾನದಿಗೆ ಅಡ್ಡಲಾಗಿ ಗಚ್ಚಿನ ಅಣೆಕಟ್ಟನ್ನು ನಿರ್ಮಿಸಲಾಗಿದೆ. ಅಣೆಕಟ್ಟು ೪೪೦ ಮೀ. ಉದ್ದ ಮತ್ತು ಆಳದ ಅಸ್ತಿಬಾರದ ಮೇಲಿನಿಂದ ೭೨ ಮೀ. ಎತ್ತರವಿದೆ. ಇದಕ್ಕೆ ಎರಡು ಕಾಲುವೆಗಳಿದ್ದು ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ನೀರಿನ ಕೊರತೆ ಇರುವ ಪ್ರದೇಶಗಳಿಗೆ ಅಲ್ಪವಾಗಿ ನೀರು ಒದಗಿಸುತ್ತದೆ. ಈ ಅಣೆಕಟ್ಟಿನ ಎಡದಂಡೆ ಕಾಲುವೆ ೭೭ ಕಿ.ಮೀ. ಉದ್ದವಿದ್ದು ೮,೩೦೦ ಹೆಕ್ಟೇರಿಗೆ ನೀರನ್ನು ಪೂರೈಸುತ್ತದೆ. ಬಲದಂಡೆ ಕಾಲುವೆಯು ೧೦೦ ಕಿ.ಮೀ. ಉದ್ದವಿದ್ದು ೯೭,೭೦೦ ಹೆಕ್ಟೇರ್ ಭೂಮಿಗೆ ನೀರನ್ನು ಒದಗಿಸುತ್ತದೆ. ಈ ಯೋಜನೆಯು ಚಿಕ್ಕಮಗಳೂರಿನ ತರೀಕೆರೆ ತಾಲೂಕು, ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ, ಭದ್ರಾವತಿ, ಚನ್ನಗಿರಿ, ಹೊನ್ನಾಳಿ ಮತ್ತು ದಾವಣಗೆರೆ ಜಿಲ್ಲೆಯ ದಾವಣಗೆರೆ, ಹರಿಹರ ಮತ್ತು ಹರಪನಹಳ್ಳಿ ತಾಲ್ಲೂಕುಗಳಿಗೆ ಫಲಕಾರಿಯಾಗಿದೆ. ೩೩,೦೦೦ ಕಿ. ವ್ಯಾ. ವಿದ್ಯುಚ್ಛಕ್ತಿಯನ್ನು ಕೂಡ ಉತ್ಪಾದಿಸಲಾಗುತ್ತದೆ. ದಾವಣಗೆರೆ ಭಾಗಕ್ಕೆ ನೀರಿನ ಅಭಾವವೆಂದು ಆಗಾಗ ಹೋರಾಟಗಳು ಸಂಭವಿಸುತ್ತವೆ. ಹೊಳಲ್ಕೆರೆ, ಚನ್ನಗಿರಿ ಪ್ರದೇಶಕ್ಕೆ ಅಲ್ಪಪ್ರಮಾಣದಲ್ಲಾದರೂ ಸರಿಯಾಗಿ ನೀರು ದೊರಕುತ್ತಿಲ್ಲ.

### ೮. ತುಂಗಾ ಅಣೆಕಟ್ಟು

ತುಂಗಾ ನದಿಗೆ ಅಡ್ಡಲಾಗಿ ಶಿವಮೊಗ್ಗ ತಾಲೂಕು ಗಾಜನೂರು ಎಂಬಲ್ಲಿ ೩೫೦ ಮೀಟರ್ ಉದ್ದ, ೧೮೦ ಮೀ. ನದಿ ಪಾತ್ರಕ್ಕಿಂತ ೧೨.೬ ಮೀಟರ್ ಎತ್ತರದಲ್ಲಿ ಅಣೆಕಟ್ಟು ಕಟ್ಟಲಾಗಿದೆ. ಅಣೆಕಟ್ಟಿನಿಂದ ಎಡ ಮತ್ತು ಬಲದಂಡೆ ಕಾಲುವೆಗಳು ಕ್ರಮವಾಗಿ ೧೦೦ ಕಿ. ಮೀ. ಮತ್ತು ೫೩ ಕಿ. ಮೀ. ಉದ್ದಕ್ಕೆ ಕಟ್ಟಲ್ಪಟ್ಟಿವೆ. ಶಿವಮೊಗ್ಗ ಜಿಲ್ಲೆಯ ಮತ್ತು ಹೊನ್ನಾಳಿ ತಾಲೂಕಿನ ೮೭೦೦ ಹೆಕ್ಟೇರು ಜಮೀನಿಗೆ ಅವು ನೀರನ್ನು ಒದಗಿಸುತ್ತವೆ. ಪ್ರವಾಹ ಬಂದಾಗ ಅದರ ಶಕ್ತಿ ಕುಂದಿಸಲು ಉರುಳು ಬಾಗಿಲುಗಳನ್ನು ಒದಗಿಸಲಾಗಿದ್ದು, ಆ ಕಾಲಕ್ಕೆ ಅಣೆಕಟ್ಟು ನೋಡುವುದು ಕಣ್ಣಿಗೆ ಹಿತವನ್ನುಂಟು ಮಾಡುತ್ತದೆ. ಇತ್ತೀಚೆಗೆ ಸರ್ಕಾರ ತುಂಗಾತಿರುವು ಯೋಜನೆಯ ಸರ್ವೇಕ್ಷಣೆಯ ಶಂಕುಸ್ಥಾಪನೆ ಮಾಡಿದ್ದು, ಚಿತ್ರದುರ್ಗ ಜಿಲ್ಲೆಯ ಜನರ ಕನಸು ನನಸಾಗುವ ಪ್ರಯತ್ನವಿದೆ. ಇದಕ್ಕಾಗಿ ಇಂದಿಗೂ

ಚಳವಳಿ ನಡೆಸುತ್ತಿರುವ ಜಿಲ್ಲಾ ನೀರಾವರಿ ಹೋರಾಟ ಸಮಿತಿಗಳು (ಚಿತ್ರದುರ್ಗ) ಹುಟ್ಟಿಕೊಂಡಿವೆ.

## ೯. ಘಟಪ್ರಭಾ ಯೋಜನೆ

ಸ್ವಾತಂತ್ರ್ಯ ಬಂದ ತರುವಾಯ ಸರ್ಕಾರ ಘಟಪ್ರಭಾ ಯೋಜನೆಯನ್ನು ರೂಪಿಸಿತು. ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಹಿಡಕಲ್ ಎಂಬಲ್ಲಿ ಘಟಪ್ರಭಾ ನದಿಗೆ ಅಡ್ಡಲಾಗಿ ಶೇಖರಣೆ ಅಣೆಕಟ್ಟು ಕಟ್ಟುವ ಉದ್ದೇಶವನ್ನು ಈ ಯೋಜನೆಯಲ್ಲಿ ಅಳವಡಿಸಲಾಗಿದೆ.

ಈ ಸಂಕೀರ್ಣ ಅಣೆಕಟ್ಟಿನ ಉದ್ದವು ೪,೫೭೫ ಮೀ. ಎತ್ತರ ೫೫ ಮೀ. ಇದೆ. ಇದರಿಂದ ಮೂರು ಕಾಲುವೆಗಳನ್ನು ನಿರ್ಮಿಸಲಾಗಿದೆ. ಒಂದು ಎಡದಂಡೆಯಲ್ಲಿದ್ದು, ಹಿಡಕಲ್ ಅಣೆಕಟ್ಟಿಗೆ ೧೬ ಕಿ. ಮೀ. ಕೆಳಗಡೆ ಅಂದರೆ ಧೂಪದಾಳ ಕಟ್ಟೆಯಿಂದ ನೀರನ್ನು ಒಯ್ಯುತ್ತದೆ. ಈ ಯೋಜನೆಯನ್ನು ಕೆಳಗಿನ ೪ ಹಂತಗಳಲ್ಲಿ ಪೂರ್ಣಗೊಳಿಸಲಾಗಿದೆ.

ಮೊದಲಹಂತ : ಘಟಪ್ರಭಾ ಎಡದಂಡೆ ಕಾಲುವೆ ೭೦ ಕಿ. ಮೀ. ವರೆಗೆ ಮತ್ತು ಎರಡು ಶಾಖಾ ಕಾಲುವೆಗಳು; ಅಂತಿಮವಾಗಿ ೮೬,೮೬೦ ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಒದಗಿಸುವುದಾಗಿದೆ.

ಎರಡನೇ ಹಂತ : ಘಟಪ್ರಭಾ ಎಡದಂಡೆ ಕಾಲುವೆ ೭೧ ರಿಂದ ೧೧೪ ಕಿ. ಮೀ. ಮತ್ತು ಹಿಡಕಲ್ ಅಣೆಕಟ್ಟು ಕಟ್ಟುವಿಕೆ ೫೨,೫೨೦ ಹೆಕ್ಟೇರಿಗೆ ನೀರನ್ನು ಒದಗಿಸುವ ಯೋಜನೆಯಾಗಿದೆ.

ಮೂರನೇ ಹಂತ : ಘಟಪ್ರಭಾ ಬಲದಂಡೆ ಕಾಲುವೆ ೧೯೨ ಕಿ. ಮೀ. ಉದ್ದ, ೧,೭೭,೭೬೦ ಹೆಕ್ಟೇರುಗಳಿಗೆ ನೀರನ್ನು ಒದಗಿಸುವುದಾಗಿದೆ.

ನಾಲ್ಕನೇ ಹಂತ : ಎಡದಂಡೆ ಮೇಲ್ಮಟ್ಟ ಕಾಲುವೆ ೬೦,೦೦೦ ಹೆಕ್ಟೇರ್ ಜಮೀನಿಗೆ ನೀರು ಪೂರೈಸುವುದಾಗಿದೆ.

ಮೊದಲನೇ ಹಂತವು ಸಂಪೂರ್ಣವಾಗಿದೆ. ಎರಡನೇ ಹಂತವು ೧೯೮೪ರ ಆರಂಭದಲ್ಲಿ ಮುಗಿದಿದೆ. ಮೂರನೇ ಹಂತ ಮುಕ್ತಾಯಗೊಂಡಿದ್ದು, ನಾಲ್ಕನೇ ಹಂತ ಪ್ರಗತಿಯಲ್ಲಿದೆ. ಇದರಿಂದ ಬೆಳಗಾವಿ ಜಿಲ್ಲೆಯ ಗೋಕಾಕ್, ಚಿಕ್ಕೋಡಿ, ಅಥಣಿ, ಹುಕ್ಕೇರಿ, ಸೌದತ್ತಿ, ರಾಮದುರ್ಗ ಮತ್ತು ರಾಯಬಾಗ್ ತಾಲೂಕುಗಳು ಮತ್ತು ವಿಜಾಪುರ ಜಿಲ್ಲೆಯ ಮುಧೋಳ, ಜಮಖಂಡಿ, ಬೀಳಗಿ ಮತ್ತು ಬಾಗಲಕೋಟೆ ಜಿಲ್ಲೆಯ ಹುನಗುಂದ ಮತ್ತು ಬಾದಾಮಿ ತಾಲೂಕುಗಳಿಗೆ ನೀರನ್ನು ಒದಗಿಸುವ ಗುರಿಯಿದೆ.

## ೧೦. ಮಲಪ್ರಭಾ ಯೋಜನೆ

ಈ ಯೋಜನೆಯು ನವಿಲುತೀರ್ಥದ ಬಳಿ ನಿಯೋಜಿಸಲಾಗಿದ್ದು, ಇದನ್ನು ಗಚ್ಚಿನಿಂದ ಕಟ್ಟಲಾಗಿದೆ. ೧೫೪ ಮೀ. ಉದ್ದ ಹಾಗೂ ೪೫ ಮೀ. ಎತ್ತರವಿದ್ದು, ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿ ಹತ್ತಿರ ಮಲಪ್ರಭಾ ನದಿಗೆ ಅಡ್ಡಲಾಗಿ ಈ ಅಣೆಕಟ್ಟನ್ನು ಕಟ್ಟಲಾಗಿದೆ. ಈ ಯೋಜನೆಯು ೨.೧೪ ಲಕ್ಷ ಹೆಕ್ಟೇರ್ ಜಮೀನಿಗೆ ನೀರು ಉಣಿಸಲಿದ್ದು, ಬೆಳಗಾವಿ ಜಿಲ್ಲೆಯ ಸೌದತ್ತಿ ಮತ್ತು ರಾಮದುರ್ಗ ತಾಲೂಕು, ಧಾರವಾಡ

ಜಿಲ್ಲೆಯ ನರಗುಂದ, ನವಲಗುಂದ, ರೋಣ, ಹುಬ್ಬಳ್ಳಿ ಮತ್ತು ಗದಗ ತಾಲೂಕುಗಳಲ್ಲದೆ, ಬಾಗಲ ಕೋಟೆ ಜಿಲ್ಲೆಯ ಬಾದಾಮಿ ತಾಲೂಕಿಗೆ ನೀರು ಒದಗಿಸುತ್ತದೆ. ಬಲದಂಡೆ ಕಾಲುವೆ ೧೩೮ ಕಿ. ಮೀ. ಯೋಜನೆಯಲ್ಲಿ ಸೇರಿದೆ. ಈಗಿರುವ ಕೊಲ್ಚಿ ಕಾಲುವೆಯನ್ನು ಕೂಡ ೬೧ ಕಿ. ಮೀ.ಗಳವರೆಗೆ ವಿಸ್ತರಿಸಲಾಗಿದೆ. ೧೬೮ ಕಿ. ಮೀ. ಕಾಲುವೆಗೆ ಖ್ಯಾತ ಇಂಜಿನಿಯರ್ ಬಾಳೇಕುಂದ್ರಿ ಹೆಸರಿಡಲಾಗಿದೆ. ಜಲಾಶಯದ ಮುಂಗೆರೆ(Fore Shore)ಯಿಂದ ಏತದ ಮೂಲಕ ನೀರನ್ನು ಒದಗಿಸುವ ಯೋಜನೆಯನ್ನು ಅಳವಡಿಸ ಲಾಗಿದೆ.[೩೧]

## ೧೧. ಕಾರಂಜಾ ಯೋಜನೆ

ಕಾರಂಜಾ ಅಣೆಕಟ್ಟು ಬೀದರ ಜಿಲ್ಲೆಯ, ಭಾಲ್ಕಿ ತಾಲೂಕು ಬಾಲ್ಯಹಳ್ಳಿ ಹತ್ತಿರ ಗೋದಾವರಿ ಕಣಿವೆಯ ಮಾಂಜರಾದ ಉಪನದಿಯಾದ ಕಾರಂಜಾ ನದಿಗೆ ಅಡ್ಡಲಾಗಿ ನಿರ್ಮಿಸಲಾಗಿದೆ. ನದಿಯ ಎರಡೂ ದಂಡೆಗೆ ಕಾಲುವೆಗಳ ರಚನೆಯನ್ನು ನಿಯೋಜಿಸ ಲಾಗಿದ್ದು, ಜಲಾಶಯದ ಮುಂಗೆರೆಯಿಂದ ಏತದ ಕಾಲುವೆಗಳನ್ನು ಅಳವಡಿಸಲಾಗಿದೆ. ಬೀದರ ಜಿಲ್ಲೆಯ ೫೮,೭೪೫ ಹೆಕ್ಟೇರ್ ಜಮೀನು ಸಾಗುವಳಿಗೆ ತೆಗೆದುಕೊಳ್ಳಲಾಗಿದ್ದು, ಒಟ್ಟಿನಲ್ಲಿ ೩೫,೬೨೮ ಹೆಕ್ಟೇರ್ ಜಮೀನಿಗೆ ನೀರನ್ನು ಒದಗಿಸುವ ಯೋಜನೆಯಿದೆ. ೧೯೭೩ರಲ್ಲಿ ಇದನ್ನು ಆರಂಭಿಸಿ, ೪೨.೧೧ ಕೋಟಿ ರೂ. ಖರ್ಚು ಮಾಡಿದೆ.

## ೧೨. ವಾರಾಹಿ ಯೋಜನೆ

ದಕ್ಷಿಣಕನ್ನಡದಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳಲ್ಲಿ ವಾರಾಹಿ ನದಿ ಪ್ರಮುಖವಾಗಿದೆ. ವಾರಾಹಿನದಿಯ ಜಲಪಾತಕ್ಕೆ ಅಡ್ಡಲಾಗಿ ವಿದ್ಯುಚ್ಛಕ್ತಿ ಉತ್ಪನ್ನಗೊಳಿಸುವ ಯೋಜನೆಯನ್ನು ಈಗಾಗಲೇ ಕರ್ನಾಟಕ ವಿದ್ಯುಚ್ಛಕ್ತಿ ನಿಗಮವು ಕೈಗೊಂಡಿದೆ. ವಿದ್ಯುಚ್ಛಕ್ತಿಯ ಕಾರಣ ಸತತವಾಗಿ ಪೂರೈಕೆಯಾಗುವ ನೀರನ್ನು ಕುಂದಾಪುರ ತಾಲೂಕು ಸಿದ್ಧಾಪುರಹಳ್ಳಿಯ ಹರಿಯಬ್ಬೆಯಲ್ಲಿ ಗಚ್ಚಿನ ಒಡ್ಡಿಗೆ ಉಪಯೋಗಿಸಿಕೊಳ್ಳಲಾಗಿದೆ. ಕುಂದಾಪುರ ಮತ್ತು ಉಡುಪಿ ತಾಲೂಕುಗಳ ೧೫,೭೦೯ ಹೆಕ್ಟೇರ್ ಜಮೀನಿಗೆ ನೀರನ್ನು ಒದಗಿಸಲಾಗುವುದು. ಈ ಯೋಜನೆಗೆ ೧೯೭೯-೮೦ರ ದರಗಳ ಪ್ರಕಾರ ೯.೪೩ ಕೋಟಿ ರೂಪಾಯಿ ವೆಚ್ಚವಾಗಿದೆ. ಈ ಅಂದಾಜಿನಂತೆ ಯೋಜನೆಯು ಪುನಃರ್ವಿಮರ್ಶೆಗೆ ಒಳಗಾಗಿದ್ದು, ನೀರಾವರಿ ಸೌಕರ್ಯವನ್ನು ಹೆಚ್ಚು ಮಾಡಬೇಕೆಂದು ನಿಯೋಜಿಸಲಾಗಿದೆ. ಒಡ್ಡುಕಟ್ಟುವ ಸ್ಥಳದಲ್ಲಿಯೂ ಕೂಡ ವಿದ್ಯುಚ್ಛಕ್ತಿಯುನ್ನು ತಯಾರಿಸಬೇಕೆಂಬ ಅಭಿಮತವಿದೆ. ೧೯೯೧-೯೨ಕ್ಕೆ ೧೨,೨೫೦ ಲಕ್ಷ ರೂ. ಖರ್ಚಾಗಿದೆ. ವಾರಾಹಿ ಏತನೀರಾವರಿಯಿಂದ ೨,೭೨೩ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸಲು ಸರ್ಕಾರ ೧೪೫೫ ಲಕ್ಷ ರೂ. ನೀಡಲಾಗುತ್ತಿದೆ. ೧೯೯೬-೯೭ನೇ ಸಾಲಿಗೆ ರೂ. ೩೦೦ ಲಕ್ಷ ಅನುದಾನದಲ್ಲಿ ೧೮೬ಲಕ್ಷ ವೆಚ್ಚವಾಗಿದ್ದು, ೯೭ರ ಕೊನೆಗೆ ರೂ. ೧೫೩೪ ಲಕ್ಷ ಖರ್ಚು ಮಾಡಲಾಗಿದೆ.

## ೧೩. ಬೆಣ್ಣೆತೊರೆ ಯೋಜನೆ

ಬೆಣ್ಣೆತೊರೆ ನದಿಯು ಭೀಮಾ ನದಿಯನ್ನು ಸೇರುವ ಕಾಗ್ನನದಿಯ ಉಪನದಿ ಯಾಗಿದೆ. ಕಲ್ಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕು ಹೇರೂರುಖುರ್ದಾಹಳ್ಳಿಯ ಹತ್ತಿರ

ಬೆಣ್ಣೆತೊರೆ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಲಾಗಿದೆ. ಕಲ್ಬುರ್ಗಿ ಜಿಲ್ಲೆಯ ಚಿತ್ತಾಪುರ ಮತ್ತು ಸೇಡಂ ತಾಲೂಕುಗಳಲ್ಲಿ ೨೦.೨೪೩ ಹೆಕ್ಟೇರ್ ಜಮೀನಿಗೆ ಇದು ನೀರು ಒದಗಿಸುತ್ತದೆ. ೧೯೭೫-೭೬ರ ದರದ ಅಂಕಿ ಸಂಖ್ಯೆಗಳ ಪ್ರಕಾರ ಈ ಯೋಜನೆಗೆ ೧೬ ಕೋಟಿ ರೂ. ವೆಚ್ಚ ತಗಲುವ ಅಂದಾಜಿತ್ತು. ೧೯೯೭ಕ್ಕೆ ೭೪೦೩ ಲಕ್ಷ ರೂ. ಖರ್ಚು ಮಾಡಲಾಗಿದೆ.[೩೨]

## ೧೪. ಹಿಪ್ಪರಗಿ ಅಣೆಕಟ್ಟು

ಬಿಜಾಪುರ ಜಿಲ್ಲೆಯ ಜಮಖಂಡಿ ತಾಲೂಕು ಹಿಪ್ಪರಗಿ ಹತ್ತಿರ ಕೃಷ್ಣಾನದಿಗೆ ಕದಪಿರುವ ಗಟ್ಟಿನ ಒಡ್ಡನ್ನು (ಆರ್.ಸಿ.ಸಿ. ಅಣೆಕಟ್ಟು) ಕಟ್ಟುವುದೇ ಈ ಯೋಜನೆಯ ಗುರಿ. ಇದು ಏತ ನೀರಾವರಿ ಯೋಜನೆ. ಬೆಳಗಾವಿ ಜಿಲ್ಲೆಯ ಅಥಣಿ ಹಾಗೂ ಚಿಕ್ಕೋಡಿ ತಾಲೂಕುಗಳು ಹಾಗೂ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲೂಕುಗಳಿಗೆ ಕೃಷ್ಣಾನದಿಯಲ್ಲಿ ೩೭ ಮೀ. ವರೆಗೆ ನೀರನ್ನು ಏತದಿಂದ ಎತ್ತಿ ೫೦,೬೦೭ ಹೆಕ್ಟೇರ್ ಜಮೀನಿಗೆ ನೀರಾವರಿ ಸವಲತ್ತನ್ನು ಒದಗಿಸುವುದಾಗಿದೆ. ಜೂನ್ ೨ನೇ ವಾರ ೧೯೯೯ರಲ್ಲಿ ಮುಖ್ಯಮಂತ್ರಿ ಹಿಪ್ಪರಗಿ ಅಣೆಕಟ್ಟನ್ನು ವೀಕ್ಷಿಸಿ, ಮಹಾರಾಷ್ಟ್ರ ರಾಜ್ಯದೊಡನೆ ಮಾತುಕತೆ ನಡೆಸಿದ್ದಾರೆ. ಜೂನ್ ೩೦,೧೯೯೯ ರಂದು ಪುನಃ ಕರ್ನಾಟಕದ ಮುಖ್ಯಮಂತ್ರಿ ಮಹಾರಾಷ್ಟ್ರದ ಮುಖ್ಯಮಂತ್ರಿಯೊಂದಿಗೆ ಸಮಸ್ಯೆ ಕುರಿತು ಚರ್ಚಿಸಿದ್ದಾರೆ.

## ೧೫. ನುಗು ಯೋಜನೆ

ಕಬಿನಿ ನದಿಯ ಉಪನದಿಯಾಗಿರುವ ನುಗು ನದಿಗೆ ಅಣೆಕಟ್ಟು ಕಟ್ಟಲಾಗಿದೆ. ಅಣೆಕಟ್ಟಿನ ಎರಡು ಕಾಲುವೆಗಳ ಮೂಲಕ ನೀರನ್ನು ಒದಗಿಸಿ ಹೆಗ್ಗಡೆದೇವನಕೋಟೆ ತಾಲೂಕು ಬೀರವಾಳ್ ಹಳ್ಳಿಯ ಹತ್ತಿರ ಜಲಾಶಯದಿಂದ ನೀರನ್ನು ಒಯ್ಯಲಾಗುವುದು. ಗಚ್ಚಿನಕಟ್ಟೆಯು, ಮಣ್ಣಿನ ಒಡ್ಡಿನಿಂದ ಕೂಡಿದ್ದು ೪೪ ಮೀ. ಎತ್ತರ ೬೩೭ ಮೀಟರ್ ಉದ್ದವಿದ್ದು ನುಗು ಯೋಜನೆಯು ೧೯೫೯ರಲ್ಲಿ ಮುಕ್ತಾಯಗೊಂಡಿದ್ದು, ಬಹುಮಟ್ಟಿಗೆ ನಂಜನಗೂಡು ತಾಲೂಕು ಪ್ರದೇಶಕ್ಕೆ ಉಪಯುಕ್ತವಾಗಿದೆ. ಇದು ಸಮಾರು ೧೦,೫೦೦ ಹೆಕ್ಟೇರ್ (೨೭೦೦೦ ಎಕರೆ) ಜಮೀನಿಗೆ ನೀರನ್ನು ಒದಗಿಸುತ್ತದೆ.

## ೧೬. ಚುಳಕಿನಾಲಾ ಯೋಜನೆ

ಬೀದರ್ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಮುಸ್ತಾಪುರಹಳ್ಳಿಯ ಬಳಿ ಚುಳಕಿನಾಲಾ ನದಿಗೆ ಅಡ್ಡವಾಗಿ ೨.೪೦ ಕಿ. ಮೀ. ಉದ್ದದ ಹಾಗೂ ೧೬ ಮೀಟರ್ ಎತ್ತರದ ಅಣೆಕಟ್ಟು ಕಟ್ಟಲು ಯೋಜಿಸಲಾಗಿದೆ. ಇದರ ಮಧ್ಯದಲ್ಲಿ ಕಾಂಕ್ರೀಟ್ ಸ್ಪಿಲವೇಯನ್ನು ನಿರ್ಮಿಸಲಾಗುವುದು. ಇದರಿಂದ ಒಂದು ಗ್ರಾಮವಲ್ಲದೆ, ೧೩೯೫ ಎಕರೆ ಈ ಯೋಜನೆಯಲ್ಲಿ ಮುಳುಗಡೆಯಾಗುವ ಭೂಮಿಯುಂಟು. ೧೦,೦೦೦ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾರ್ಯಕ್ರಮಗಳಿವೆ.[೩೩] ಇದು ಮಧ್ಯಮ ನೀರಾವರಿ ಯೋಜನೆಯಾಗಿದ್ದು, ೧೯೭೬ರಲ್ಲಿ ೩.೭೯.೭೬ಲಕ್ಷ ರೂ.ಗಳಿಗೆ ಮಂಜೂರಾತಿ ನೀಡಲಾಯಿತು. ಇದರಿಂದ ಭಾಲ್ಕಿ ಹಾಗೂ ಬಸವಕಲ್ಯಾಣ ತಾಲೂಕುಗಳಿಗೆ ೪೦೪೭ ಎಕರೆ ಭೂಮಿಗ ನೀರಾವರಿ ಕಲ್ಪಿಸಲಾಗಿದೆ. ಎಡದಂಡೆ ಕಾಲುವೆ ೨೫.೪೧ ಉದ್ದ, ಬಲದಂಡೆ ಕಾಲುವೆ ೨೬.೬೪ ಕಿ. ಮೀ. ಉದ್ದವಿದೆ. ಇಂದಿಗೆ ೧೫೫೨.೮೬ ಲಕ್ಷ

ರೂ. ವೆಚ್ಚ ತಗುಲಿದೆ. ಮಾರ್ಚ್ ೧೯೯೮ರ ವರೆಗೆ ೪೪೮೦೯೮ಲಕ್ಷ ರೂ. ಖರ್ಚು ಮಾಡಲಾಗಿದೆ. ೧೯೯೮-೯೯ರಲ್ಲಿ ೮೦೦ ಲಕ್ಷ ರೂಪಾಯಿಗಳ ಅನುದಾನ ಇದ್ದು ಜುಲೈ ೯೮ರ ವರೆಗೆ ೨೯೦ ಲಕ್ಷ ರೂ. ಖರ್ಚು ಮಾಡಲಾಗಿದೆ.

## ೧೭. ದೇವರಬೆಳಕೆರೆ ಪಿಕಪ್ ಯೋಜನೆ

ಭದ್ರಾ ಕಾಲುವೆಯ ಪ್ರದೇಶಕ್ಕೆ ದೇವರಬೆಳೆಕೆರೆ ಗ್ರಾಮದ ಹತ್ತಿರ ಶ್ಯಾಗಲೀಹಳ್ಳ ಮತ್ತು ಶಾಂತಿಸಾಗರ ಕಣಿವೆ ಕೂಡುವ ಹತ್ತಿರ ಬನಿ ನೀರನ್ನು ಉಪಯೋಗಿಸಿಕೊಂಡು ಸುಮಾರು ೪೯೧೮ ಹೆಕ್ಟೇರ್ ಜಮೀನಿಗೆ ಸಾಗುವಳಿ ಮಾಡಲು ಅನುಕೂಲವಾಗುವಂತೆ ಹರಿಹರ ತಾಲೂಕಿನ ಡಿ. ಬಿ. ಕೆರೆ ಹತ್ತಿರ ಪಿಕಪ್‌ನ್ನು ನಿರ್ಮಿಸಲಾಗಿದೆ. ೯-೬-೯೯ ರಂದು ದೇವರಬೆಳಕೆರೆ ಪಿಕಪ್ ಕಾಲುವೆಗೆ ಗಣೇಶ್ ಮೋಟರ್ ಸರ್ವಿಸ್ ಎನ್ನುವ ಬಸ್ಸು ಬಿದ್ದು ಸುಮಾರು ೯೪ ಜನರು ದುರಂತದಲ್ಲಿ ಮಡಿದರು. ಜನಪ್ರತಿನಿಧಿಗಳು ಸತ್ತವರಿಗೆ ಪರಿಹಾರ ನೀಡಲಾಗುತ್ತದೆ ಎಂಬ ಭರವಸೆ ಕೊಟ್ಟಿದ್ದಾರೆ.

## ೧೮. ಮುಲ್ಲಾಮಾರಿ ಮೇಲ್ದಂಡೆ ಯೋಜನೆ

ಬಸವಕಲ್ಯಾಣ ತಾಲೂಕಿನ ಮಠಾಳಾ ಗ್ರಾಮದಲ್ಲಿ ಉಗಮಗೊಂಡ ಮುಲ್ಲಾಮಾರಿ ನದಿಗೆ ಖೇರಡಾ ಗ್ರಾಮದ ಬಳಿ ೨೩.೨೦ ಮೀಟರ್ ಎತ್ತರದ ಮತ್ತು ಸುಮಾರು ೧. ಕಿ. ಮೀ. ಉದ್ದದ ಅಣೆಕಟ್ಟನ್ನು ಕಟ್ಟಲು ಯೋಜಿಸಲಾಗಿದೆ. ಈ ಜಲಾಶಯವು ೮೧೦೦ ಎಕರೆ ಭೂಮಿಗೆ ನೀರು ಒದಗಿಸುತ್ತದೆ. ಕಲ್ಬುರ್ಗಿಯ ೧೧ ಹಳ್ಳಿಗಳು, ಬೀದರ ಜಿಲ್ಲೆಯ ೯ ಹಳ್ಳಿಗಳು ಪ್ರಯೋಜನ ಪಡೆಯಲಿವೆ. ಇದರಿಂದ ೯೭೪ ಎಕರೆ ಪ್ರದೇಶ ಮುಳುಗಡೆಯಾಗಲಿದೆ. ಈಗಾಗಲೇ ಒಂದು ಹಳ್ಳಿಯು ಮುಳಿಗಿದೆ. ಸರ್ಕಾರ ೧೯೭೬ರಲ್ಲಿ ೩೨೮ ಲಕ್ಷ ರೂಪಾಯಿಗಳಿಗೆ ಮಂಜೂರಾತಿ ನೀಡಿತ್ತು.

೧೯೭೨-೭೩ರಲ್ಲಿ ಈ ಯೋಜನೆಯ ಪ್ರಮುಖ ಮಣ್ಣೊಡ್ಡಿನ ಕೆಲಸವನ್ನು ಆರಂಭಿಸಲಾಯಿತು. ಇಲ್ಲಿಯವರೆಗೆ ಸು. ೧೨೪.೬೦ ಲಕ್ಷ ರೂ. ವೆಚ್ಚ ಮಾಡಲಾಗಿದೆ. ೧೯೮೮೧ರಲ್ಲಿ ಇದನ್ನು ಪೂರ್ಣಗೊಳಿಸಬೇಕೆಂಬ ನಿರೀಕ್ಷೆಯಿತ್ತು. ಸಣ್ಣ-ಪುಟ್ಟ ಕೆಲಸಗಳು ಇನ್ನು ನಡೆಯುತ್ತಿವೆ.

## ೧೯. ಮುಲ್ಲಾಮಾರಿ ಕೆಳದಂಡೆ ಯೋಜನೆ

ಇದು ಮಧ್ಯಮ ನೀರಾವರಿ ಯೋಜನೆಯಾಗಿದ್ದು, ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲೂಕಿನಲ್ಲಿ ನಿರ್ಮಾಣವಾಗುತ್ತಲಿದೆ. ಈ ಯೋಜನೆಗೆ ಅಂದಾಜು ಮೊತ್ತ ೭೧೮೮ ಲಕ್ಷ ರೂ. ನಿಗದಿಯಾಗಿತ್ತು. ೧೯೯೬-೯೭ರಲ್ಲಿ ೧೦,೦೦೦ ಲಕ್ಷ ವೆಚ್ಚವಾಗಿದೆ. ಇದರಿಂದ ಚಿಂಚೋಳಿ ತಾಲೂಕಿನ ೮೧೦೦ ಹೆಕ್ಟೇರ್‌ಗೆ ನೀರಿನ ಸೌಕರ್ಯವಾಗಲಿದೆ. ಇದಕ್ಕೆ ೩೨೨೦ ಲಕ್ಷ ರೂ. ನಬಾರ್ಡ್‌ನಿಂದ ಸಹಾಯಧನ ಲಭಿಸಿದೆ. ಅನೇಕ ಕೆಲಸಕಾರ್ಯಗಳು ಇನ್ನೂ ಪ್ರಗತಿಯಲ್ಲಿವೆ. ಕೋಡಿ ಕೆಲಸ ಮುಗಿದಿದ್ದು, ೮೦ ಕಿ. ಮೀ. ಉದ್ದ ಕಾಲುವೆಯಿದೆ. ಇದಕ್ಕೆ ಮಾರ್ಚ್ ೧೯೯೮ರ ವರೆಗೆ ೭೫೯೨ ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ. ೧೯೯೮-೯೯ನೇ ಸಾಲಿಗಾಗಿ ೧೦೦೦ ಲಕ್ಷ ರೂಪಾಯಿ ನೀಡಿದೆ. ಜುಲೈ ೯೮ರ ವರೆಗೆ ೪೭೧ ಲಕ್ಷ ಖರ್ಚಾಗಿದೆ. ಮಾರ್ಚ್ ೧೯೯೯ಕ್ಕೆ ಪೂರ್ಣಗೊಳಿಸುವ ಗುರಿ ಇತ್ತು ಇನ್ನು ಆಗಿಲ್ಲ.

## ೨೦. ಅಮರ್ಜಾ ಯೋಜನೆ

ಇದು ಮಧ್ಯಮ ನೀರಾವರಿ ಯೋಜನೆಯಾಗಿದ್ದು, ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕಿನಲ್ಲಿ ನಿರ್ಮಾಣವಾಗುತ್ತಿದೆ. ಇದಕ್ಕೆ ಸು. ೫೭೮೦ ಲಕ್ಷ ರೂ. ನಿಗದಿಯಾಗಿದೆ. ೧೯೯೬-೯೭ರಲ್ಲಿ ೭೯೨೫ ಲಕ್ಷ ರೂ. ಅಂದಾಜು ಮಾಡಲಾಗಿದೆ. ಈ ಯೋಜನೆಯಿಂದ ಅಫಜಲ್‌ಪುರ ಹಾಗೂ ಆಳಂದ ತಾಲೂಕಿನ ೮೯೦೩ ಹೆಕ್ಟೇರ್ ಜಮೀನಿಗೆ ನೀರನ್ನು ಒದಗಿಸಲು ಪ್ರಯತ್ನಿಸಲಾಗಿದೆ. ಇದಕ್ಕೆ ೨೨೮೪.೨೭ ಲಕ್ಷ ರೂಪಾಯಿಗಳ ನಬಾರ್ಡ್‌ನಿಂದ ಸಹಾಯ ಧನ ಸಿಕ್ಕಿದೆ. ಮಣ್ಣಿನ ಒಡ್ಡಿನಿಂದ ನಿರ್ಮಾಣ ಕಾರ್ಯ ನಡೆದಿದ್ದು, ಕಾಂಕ್ರೀಟ್ ಕೋಡಿಯನ್ನು ನಿರ್ಮಾಣ ಮಾಡಲಾಗಿದೆ. ಎಡದಂಡೆ ಕಾಲುವೆಯ ಉದ್ದ ೫೫ ಕಿ. ಮೀ. ಹಾಗೂ ಬಲದಂಡೆ ಕಾಲುವೆಯ ಉದ್ದ ೪೫ ಕಿ. ಮೀ. ಇದ್ದು, ಈ ಎರಡೂ ಕಾಲುವೆಗಳ ನಿರ್ಮಾಣ ಕೆಲಸ ನಡೆಯುತ್ತಿದೆ. ಇದಕ್ಕೆ ೧೯೯೮ ಮಾರ್ಚ್‌ವರೆಗೆ ೬೬೯೬ ಲಕ್ಷ ರೂಪಾಯಿ ವೆಚ್ಚಮಾಡಲಾಗಿದೆ. ೧೯೯೮-೯೯ನೇ ಸಾಲಿಗಾಗಿ ೧೦೦೦ ಲಕ್ಷ ರೂಪಾಯಿ ಅನುದಾನ ನೀಡಲಾಗಿದ್ದು, ಜುಲೈ ೯೮ರ ವರೆಗೆ ರೂ. ೫೭೫ ಲಕ್ಷ ವೆಚ್ಚ ಮಾಡಲಾಗಿದೆ.[೩೪] ಇದನ್ನು ಮಾರ್ಚ್ ೧೯೯೯ಕ್ಕೆ ಪೂರ್ಣಗೊಳಿಸಲು ನಿರ್ಧರಿಸಲಾಗಿತ್ತಾದರೂ, ಕೆಲಸಗಳು ಇನ್ನು ನಡೆಯುತ್ತಿವೆ.

## ೨೧. ಗಂಡೋರಿನಾಲಾ ಯೋಜನೆ

ಇದು ಮಧ್ಯಮ ನೀರಾವರಿ ಯೋಜನೆಯಾಗಿದೆ. ಗುಲಬರ್ಗಾ ತಾಲೂಕಿನಲ್ಲಿ ನಿರ್ಮಾಣಗೊಂಡಿದ್ದು, ಇದಕ್ಕೆ ೬೬೦೦ ಲಕ್ಷ ರೂಪಾಯಿಗಳ ಅಂದಾಜು ಮೊತ್ತ ತಗಲುತ್ತದೆ. ಪ್ರಸ್ತುತ ಸಾಲಿನಲ್ಲಿ ೧೦,೩೦೦ ಲಕ್ಷ ರೂ.ಗಳಿಗೆ ದರದ ಮೊತ್ತವನ್ನು ಹೆಚ್ಚಿಸಲಾಗಿದೆ. ಈ ಯೋಜನೆಯಿಂದ ಚಿತ್ತಾಪೂರ ಹಾಗೂ ಗುಲಬರ್ಗಾ ತಾಲೂಕುಗಳ ೮೦೯೪ ಹೆಕ್ಟೇರ್ ಜಮೀನಿಗೆ ನೀರಾವರಿ ಸೌಲಭ್ಯ ಒದಗಿಸಲು ನಿರ್ಧರಿಸಿದೆ. ಇದರ ಕೆಲಸಗಳನ್ನು ಕರ್ನಾಟಕ ರಾಜ್ಯ ನಿರ್ಮಾಣ ನಿಗಮಕ್ಕೆ ವಹಿಸಿಕೊಡಲಾಗಿದೆ.

ಕೀಟ್ರೆಂಚ್ ಹಾಗೂ ಮಣ್ಣಿನ ಒಡ್ಡನ್ನು ಏರಿಸುವ ಕಾರ್ಯ ಪ್ರಗತಿಯಲ್ಲಿದ್ದು, ಕೋಡಿ ಹಾಗೂ ಟೇಲ್ ಚಾನಲ್ ಕೆಲಸದ ಅಗೆತ ಕಾರ್ಯ ಚಾಲ್ತಿಯಲ್ಲಿದೆ. ಕಾಲುವೆಯ ಸರ್ವೆ ಕೆಲಸ ಪೂರ್ಣಗೊಂಡು, ಇದಕ್ಕೆ ಮಾರ್ಚ್ ೧೯೯೮ರ ವರೆಗೆ ೧೬೩೬ ಲಕ್ಷ ರೂ. ವೆಚ್ಚವಾಗಿದೆ. ೧೯೯೮-೯೯ನೇ ಸಾಲಿಗಾಗಿ ೧೦೦ ಲಕ್ಷ ರೂಪಾಯಿ ಅನುದಾನ ಒದಗಿಸಲಾಗಿದ್ದು, ಜುಲೈ ೯೮ರ ವರೆಗೆ ೫೨.೧೧ ಲಕ್ಷ ರೂಪಾಯಿ ತಗುಲಿದೆ. ಇದು ಕೃಷ್ಣಾ ಕೊಳ್ಳದಡಿಯಲ್ಲಿ ಬರುವುದರಿಂದ ೨೦೦೦ ಇಸ್ವಿಯೊಳಗೆ ಪೂರ್ಣಗೊಳ್ಳಬೇಕಿದೆ.

## ೨೨. ಭೀಮಾ ಏತ ನೀರಾವರಿ ಯೋಜನೆ

ಇದು ಬೃಹತ್ ನೀರಾವರಿ ಯೋಜನೆಯಾಗಿದ್ದು, ಗುಲಬರ್ಗಾ ಜಿಲ್ಲೆಯ ಅಫಜಲಪೂರ್ ತಾಲೂಕಿನಲ್ಲಿ ನಿರ್ಮಾಣವಾಗಲಿದೆ. ಈ ಯೋಜನೆಯ ಅಂದಾಜು ಮೊತ್ತ ೧೦,೭೭೦ ಲಕ್ಷ ರೂಪಾಯಿಗಳಿದ್ದು, ಇತ್ತೀಚಿನ ದರಗಳಂತೆ ೧೫,೦೮೦ ಲಕ್ಷ ರೂ.ಗಳು ತಗಲುತ್ತವೆ. ಇದರಿಂದ ಅಫಜಲಪೂರ್ ತಾಲೂಕಿನ ೨೪,೨೯೨ ಹೆಕ್ಟೇರ್ ಜಮೀನಿಗೆ ನೀರಾವರಿಯಾಗುವ ಸಾಧ್ಯತೆಯಿದೆ.

ಈ ಯೋಜನೆಯ ಕೆಲಸಕ್ಕೆ ೧೯೯೮ ಮಾರ್ಚ್‌ವರೆಗೆ ೩೪೯ ಲಕ್ಷ ರೂ. ವಿನಿಯೋಗಿಸಲಾಗಿದೆ. ಜುಲೈ ೧೯೯೮ರ ವರೆಗೆ ೭.೦೧ ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆ. ಭೀಮಾ ಏತನೀರಾವರಿ ಯೋಜನೆ ಕೃಷ್ಣಾ ಕೊಳ್ಳದ ವ್ಯಾಪ್ತಿಯಲ್ಲಿ ಬರುವುದರಿಂದ ೨೦೦೦ ಇಸ್ವಿಯೊಳಗೆ ಮುಗಿಸಬೇಕಾಗಿದೆ.

## ನೀರಾವರಿ ಯೋಜನೆಗಳ ಪಟ್ಟಿ

### ೧. ಭಾರೀ ನೀರಾವರಿ ಯೋಜನೆಗಳು

ಘಟಪ್ರಭಾ ೧ ಮತ್ತು ೨ ಹಂತ
ತುಂಗಭದ್ರಾ
ವಿಜಯನಗರ ಕಾಲುವೆ
ಭದ್ರಾಜಲಾಶಯ
ವಾಣಿ ವಿಲಾಸ ಸಾಗರ
ಕೃಷ್ಣರಾಜಸಾಗರ
ಕಾರಂಜಾ
ಕೃಷ್ಣಾ ಮೇಲ್ದಂಡೆ ಹಂತ-೧
ದೂಧ್‌ಗಂಗಾ
ಹಿಪ್ಪರಗಿ ಬ್ಯಾರೇಜ್
ಹೇಮಾವತಿ
ಹಾರಂಗಿ
ಬೆಣ್ಣೆತೊರೆ
ಘಟಪ್ರಭಾ ಹಂತ-೩
ಮಲಪ್ರಭಾ
ಯಗಚಿ
ಕಬಿನಿ
ವರಾಹಿ

### ೨. ಮಧ್ಯಮ ನೀರಾವರಿ ಯೋಜನೆ

ಚಂದ್ರವಳ್ಳಿ
ನಾಗಠಾಣ
ರಾಮನಹಳ್ಳಿ
ಅಂಬಿಗೋಲ
ಅಂಜನಾಪುರ
ತುಂಗಾ ಅಣೆಕಟ್ಟು
ಮಾರ್ಕೋನಹಳ್ಳಿ
ಮಂಗಳಾ
ಶಿಂಷಾ ಅಣೆಕಟ್ಟು
ಸೌದಾಗರ
ಹತಕಣಿ
ಅರೇಶಂಕರ
ಗೋಕಾಕ ಕಾಲುವೆ
ಕಳಸಕೊಪ್ಪ
ಚಿತ್ತವಾಡಗಿ
ಕೊಲ್ಚಿ ಕಾಲುವೆ
ಕನಕನಾಲ
ರಾಜೋಲಿಬಂಡ್
ನಾರಿಹಳ್ಳ
ಹಗರಿಬೊಮ್ಮನಹಳ್ಳಿ
ಧರ್ಮ ಜಲಾಶಯ
ಭದ್ರಾ ಅಣೆಕಟ್ಟು
ಜಂಬದಹಳ್ಳ
ನಾರಾಯಣಪುರ
ಗಾಯತ್ರಿ ಜಲಾಶಯ
ವೋಟೆಹೊಳೆ
ಯಗಚಿ ಕಾಲುವೆ
ಹೇಮಾವತಿ ಅಣೆಕಟ್ಟು
ಕಾಮಸಮುದ್ರ
ರಂಗಯ್ಯನದುರ್ಗ
ಹುಚ್ಚಿನ ಕೊಪ್ಪಲು
ಕಣ್ವ
ಭೈರಮಂಗಲ
ಗುಂಡಲ್
ಗುಂಡಾಲ್ ಕಾಲುವೆ
ಕೆ.ಆರ್.ಎಸ್. ಮೇಲ್ಭಾಗದ ಕಾಲುವೆ
ಕೆ.ಆರ್.ಎಸ್. ಕೆಳಭಾಗದ ಕಾಲುವೆ
ಸುವರ್ಣಾವತಿ
ಚಿಕ್ಕಹೊಳೆ
ನಲ್ಲೂರು ಅಮಾನಿಕೆರೆ

ಹುಲ್ಲಹಳ್ಳಿ ಅಣೆಕಟ್ಟು
ಹೆಬ್ಬಹಳ್ಳ
ಲಕ್ಷ್ಮಣತೀರ್ಥ
ಬಾಚಣಕಿ
ಚುಳಕಿನಾಲ
ಮುಲ್ಲಾಮಾರಿ-I
ಮುಲ್ಲಾಮಾರಿ - II
ಅಮರ್ಜಾ
ಮಸ್ಕಿನಾಲಾ
ಹಿರೇಹಳ್ಳ
ರಾಣಿಕೆರೆ ಫೀಡರ್ ಕ್ಯಾನಲ್
ಚಿಕ್ಲಿ ಹೊಳೆ
ತಾರಕ
ಸಾಗರೆಡೊಡ್ಡಕೆರೆ
ಮಂಚನಬೆಲೆ
ಅರ್ಕಾವತಿ
ಇಗ್ಗಲೂರು
ಉಡುತೊರೆಹಳ್ಳ
ಸುವರ್ಣಾವತಿ
ಚಿಕ್ಕಹೊಳೆಡೈವರ್ಶನ್

## ೩. ಅಣೆಕಟ್ಟುಗಳ ನಿರ್ಮಾಣದ ವಿವರ

| ಅಣೆಕಟ್ಟು | ನದಿ | ಕಾಲ | ನೀರಿನ ಮಟ್ಟ ಅಡಿ | ಸಂಗ್ರಹ ಟಿ.ಎಂ.ಸಿ. |
|---|---|---|---|---|
| ಕೃಷ್ಣರಾಜಸಾಗರ | ಕಾವೇರಿ | ೧೯೧೧-೧೯೩೭ | ೧೨೪.೮ | ೮.೨ |
| ವಾಣೀವಿಲಾಸಸಾಗರ | ವೇದಾವತಿ | ೧೮೯೭-೧೯೦೭ | | ೪೯.೫ |
| ಭದ್ರಾ ಜಲಾಶಯ | ಭದ್ರಾ | ೧೯೪೭ | ೧೮೬ | ೫೭.೭ |
| ಅಂಜನಾಪುರ | ಕುಮುದ್ವತಿ | ೧೯೩೮ | | ೨.೫ |
| ಮಾರ್ಕೋನಹಳ್ಳಿ | ಶಿಂಷಾ | ೧೯೪೧ | | ೨.೪ |
| ಕಣ್ವಜಲಾಶಯ | ಕಣ್ವ | ೧೯೪೬ | | ೦.೮ |
| ನುಗುಜಲಾಶಯ | ನುಗು | ೧೯೪೬-೧೯೫೯ | | ೫.೪ |
| ತುಂಗಭದ್ರಾ | ತುಂಗಭದ್ರಾ | ೧೯೪೫-೧೯೫೩ | ೧೬೩೩ | ೧೩೨ |
| ರಾಜೋಲಿಬಂಡಾಯೋಜನೆ | - " - | ೧೯೪೬ | | |
| ಕಪಿಲಾ | ಕಪಿಲಾ | | ೨೨೮೪ | ೧೯.೫ |
| ಹಾರಂಗಿ | ಹಾರಂಗಿ | ೧೯೬೪-೧೯೯೭ | ೨೮೫೯ | ೮.೫ |
| ಹೇಮಾವತಿ | ಹೇಮಾವತಿ | ೧೯೬೩ | ೨೯೨೨ | ೩೭.೧ |
| ಹಿಡಕಲ್ | ಘಟಪ್ರಭಾ | ೧೯೮೪ | ೨೧೭೫ | ೫೧ |
| ಆಲಮಟ್ಟಿ | ಕೃಷ್ಣಾ | ೧೯೬೩ | ೧೭೨೦ | ೨೨೭ |
| ನಾರಾಯಣಪುರ | ಕೃಷ್ಣಾ | ೧೯೮೨ | ೧೬೧೫ | ೩೮ |
| ಕಾರಂಜಾ | ಕಾರಂಜಾ | ೧೯೭೯-೮೦ | ೬೮ | ೭.೬೯ |
| ಲಿಂಗನಮಕ್ಕಿ | ಶರಾವತಿ | | ೧೮೧೯ | ೧೧೬ |
| ಸೂಪಾ | ಕಾಳಿ | | ೧೮೫೩ | ೧೪೮ |
| ಚಾಮರಾಜಸಾಗರ (ತಿಪ್ಪಗೊಂಡನಹಳ್ಳಿ) | ಅರ್ಕಾವತಿ | | ೭೪ | ೩.೩ |
| ನವಿಲುತೀರ್ಥ | ಮಲಪ್ರಭಾ | ೧೯೭೫-೮೦ | ೨೦೭೯.೫ | ೩೭.೩೩ |

# ೫. ಅಂತರರಾಜ್ಯ ನದಿನೀರು ವಿವಾದ ಮತ್ತು ಚಳವಳಿಗಳು

ಕರ್ನಾಟಕದ ಬಹುತೇಕ ನದಿಗಳು ವಿವಾದಗಳಿಂದ ಕೂಡಿವೆ. ಈ ವಿವಾದಗಳಿಗೆ ಅನೇಕ ಕಾರಣಗಳುಂಟು. ನದಿ ಹರಿಯುವಾಗ ರಾಜ್ಯದ ಗಡಿ ದಾಟುವುದು ಸ್ವಾಭಾವಿಕವಾದದು. ಅಣೆಕಟ್ಟು ನಿರ್ಮಾಣದಲ್ಲಿ ಜಂಟಿಯೋಜನೆ ರೂಪಿಸಿ ನೀರು ಮತ್ತು ವಿದ್ಯುತ್ತನ್ನು ವಿತರಿಸಿಕೊಳ್ಳುವಾಗ ಪರಸ್ಪರ ಅನುಮಾನ ಪಡುವುದು ಸಹಜ. ಉದಾ: ಕಾವೇರಿ ನದಿ ರಾಜ್ಯದ ಗಡಿಮೀರಿ ಹರಿದರೆ, ತುಂಗಭದ್ರಾ ಯೋಜನೆ ಆಂಧ್ರ-ಕರ್ನಾಟಕದ ಜಂಟಿ ಯೋಜನೆಯಿಂದ ನಿರ್ಮಿಸಿದ್ದಾಗಿದೆ.

ಜಲಸಂಬಂಧಿ ಚಳವಳಿಗಳ ಸ್ವರೂಪ ಮೇಲಿನ ಲಕ್ಷಣಗಳನ್ನಲ್ಲದೆ, ಚರ್ಚೆ, ಕಲಹ, ಸ್ಪರ್ಧೆ ಮತ್ತು ದಾವೆ ಹೂಡುವುದನ್ನು ವಿವಾದವೆಂದು ಕರೆದು; ಇವುಗಳ ಒತ್ತಾಯಕ್ಕಾಗಿ ನಡೆಯುವ ಸಾಮೂಹಿಕ ಆಂದೋಲನಗಳನ್ನು 'ಚಳವಳಿ' ಎಂದು ಕರೆಯಬಹುದು. ನದಿನೀರು ಮೊದಲು ವಿವಾದವಾಗಿ ಏರ್ಪಟ್ಟು, ಆನಂತರ ರೈತರ, ಫಲಾನುಭವಿಗಳ ನೇತೃತ್ವದಲ್ಲಿ ಸಾಮೂಹಿಕ ಆಂದೋಲನವನ್ನು ನೀರಿಗಾಗಿ ನಡೆಸುವುದಕ್ಕೆ ಚಳವಳಿಯ ಸ್ವರೂಪವೆಂದು ಗುರುತಿಸಬಹುದು.

ಕರ್ನಾಟಕದಲ್ಲಿ ಜಲಕ್ಕೆ ಸಂಬಂಧಿಸಿದಂತೆ ಹೋರಾಟ, ಸಂಘರ್ಷ, ಮುಷ್ಕರ (ಬಂದ್), ರಸ್ತಾರೋಖೊ, ರ್‍ಯಾಲಿ, ಗಲಭೆ, ಸತ್ಯಾಗ್ರಹ, ಸಂದಿಗ್ಧ ಪರಿಸ್ಥಿತಿ ಮೊದಲಾದ ಸಾಮೂಹಿಕ ಸಂಘಟನೆಗಳು ನ್ಯಾಯಪರವಾದ ಹಕ್ಕುಗಳಿಗಾಗಿ ನಡೆಸುವ ಚಟುವಟಿಕೆಗಳು ಚಳವಳಿಯ ರೂಪದ ವಿವಿಧ ಲಕ್ಷಣಗಳಾಗಿವೆ. ಕೃಷಿ ಮತ್ತು ಕುಡಿಯುವ ನೀರಿನ ಅಗತ್ಯತೆಗಾಗಿ ಜನರು ಆಗಾಗ ಸರ್ಕಾರವನ್ನು ಎಚ್ಚರಿಸಿ ತಮ್ಮ ಅಹವಾಲುಗಳನ್ನು ಸಲ್ಲಿಸುತ್ತಾರೆ. ವಿವಿಧ ರಾಜ್ಯಗಳಿಗೆ ಹೋಲಿಸಿದಾಗ ರಾಜ್ಯದಲ್ಲಿ ಮಾತ್ರ ಚಳವಳಿ ಸ್ವರೂಪ ಬೇರೆ. ಅಂತರರಾಜ್ಯ ನದಿನೀರಿಗಾಗಿ ಸರ್ಕಾರ ಮತ್ತು ಆ ರಾಜ್ಯದ ಜನಸಾಮಾನ್ಯರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು, ಮೊದಲಾದವರು ಸೇರಿದಂತೆ ಸಾಮೂಹಿಕ ಸಂಘಟನೆಗಳ ಮೂಲಕ ಚಳವಳಿ ನಡೆಸಿ ಹಕ್ಕನ್ನೂ ಪಡೆಯುವುದಾಗಿದೆ. ಉದಾ : ಕೃಷ್ಣಾ ಮೇಲ್ದಂಡೆ ಮತ್ತು ಕಾವೇರಿ ಕರ್ನಾಟಕದ ಪ್ರಮುಖ ನೀರಾವರಿ ಯೋಜನೆಗಳಲ್ಲಿ ವಿವಾದವುಳ್ಳ ಜಲಸಂಬಂಧಿ ಸಂಗತಿಗಳನ್ನು ಅವಲೋಕಿಸಬಹುದು.

ನದಿ ನೀರನ್ನು ಬಳಸಿಕೊಳ್ಳುವಲ್ಲಿ ಮೇಲಿನಂತೆ ಅನೇಕ ವಾದ-ವಿವಾದಗಳು ಸಂಭವಿಸುತ್ತವೆ. ಅವು ಚರಿತ್ರೆಯ ದಾಖಲೆಗಳಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲವಾದರೂ, ಪ್ರಾಚೀನ ಕಾಲದಿಂದಲೂ ಅಲ್ಲಲ್ಲಿ ಕೆಲವು ಉಲ್ಲೇಖಗಳು ಮಾತ್ರ ಕಂಡುಬರುತ್ತವೆ. ನಿಖರವಾಗಿ ದಾಖಲಿಸುವುದು ಬ್ರಿಟಿಷರ ಅವಧಿಯಿಂದ.

ಭಾರತವಲ್ಲಿ ಮಳೆಯ ಪ್ರಮಾಣ ಸರಾಸರಿ ೪೫ ಇಂಚುಗಳಷ್ಟಿವೆ. ಅಸ್ಸಾಂನ ಬೆಟ್ಟ-ಗುಡ್ಡಗಳಿಂದ ರಾಜಸ್ಥಾನದ ಮರುಭೂಮಿಯವರೆಗೆ ೫ ರಿಂದ ೫೦೦ ಇಂಚುಗಳ ವರೆಗೆ ಪರಿವರ್ತನೆಗೊಳ್ಳುತ್ತದೆ. ಮಳೆಗಾಲದಲ್ಲಿ ಮಳೆಯಿಂದ, ಬೇಸಿಗೆಯಲ್ಲಿ ಮಂಜು ಕರಗಿ ಉತ್ತರಭಾರತದ ನದಿಗಳು ವರ್ಷದುದ್ದಕ್ಕೂ ಹರಿಯುತ್ತವೆ. ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮುಂಗಾರು: ಈ ಕಾಲದಲ್ಲಿ ಕೃಷಿಯಿಂದ ಫಸಲು ಪಡೆಯುತ್ತಾರೆ. ಮಳೆಯ ಆಶ್ರಯವಿಲ್ಲದೆ ನದಿ, ಕಾಲುವೆ, ಕೆರೆಗಳ ಮೂಲಕ ಅಭಿವೃದ್ಧಿ ಪಡೆಯಲಾಗುವುದಿಲ್ಲ. ಹೀಗಾಗಿ ಜಲಸಂಪನ್ಮೂಲಗಳ ಕೊರತೆ ಇಂದಿಗೂ ಇದೆ. ಈ ಜಲವನ್ನು ಬಳಸಿಕೊಳ್ಳುವಲ್ಲಿ ಸ್ಪರ್ಧೆ ಬೆಳೆದು ವಿವಾದ, ಚಳವಳಿ, ಹೋರಾಟಗಳು ನಡೆದಿವೆ. ಭಾರತದ ನದಿನೀರು ವಿವಾದವನ್ನು ಸ್ವಾತಂತ್ರ್ಯ ನಂತರದಿಂದ ಗುರುತಿಸಲಾಗುವುದು.

ಭಾರತದಲ್ಲಿ ಪಂಚವಾರ್ಷಿಕ ಯೋಜನೆಗಳ ಮೂಲಕ ನೀರಾವರಿಗೆ ಹಣ ನೀಡಲಾಗುತ್ತಿದೆ. ರಾಜಸ್ಥಾನವನ್ನು ಬಿಟ್ಟರೆ ಉಳಿದೆಲ್ಲಾ ಭಾಗಗಳಲ್ಲಿ ಮಳೆ, ನೀರು ಸಮೃದ್ಧವಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ದೇಶದ ನದಿಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು :

೧. ಹಿಮದಿಂದ ಕರಗಿ ಎಲ್ಲಾ ಋತುಗಳಲ್ಲಿ ತುಂಬಿಹರಿಯುವ ಉತ್ತರ ಭಾರತದ ನದಿಗಳು ಮತ್ತು

೨. ಮಧ್ಯ ಹಾಗೂ ದಕ್ಷಿಣ ಭಾರತದ ನದಿಗಳು (ಮಳೆಯಾಶ್ರಿತ).

ಬಹುತೇಕ ನದಿಗಳು ಅಂತರರಾಜ್ಯ ವಿವಾದವುಳ್ಳವುಗಳಾಗಿವೆ. ಸಿಂಧೂ ನದಿಯ ಜಲಾನಯನ ಪ್ರದೇಶವು ಕಾಶ್ಮೀರ, ಪಂಜಾಬ್, ಹಿಮಾಚಲಪ್ರದೇಶದ ಕೆಲವು ಭಾಗ, ಹರಿಯಾಣ, ರಾಜಸ್ಥಾನಗಳನ್ನೊಳಗೊಂಡರೆ, ಗಂಗಾ ಮತ್ತು ಅದರ ಉಪನದಿಗಳು ಹಿಮಾಚಲಪ್ರದೇಶ, ಹರಿಯಾಣ, ದೆಹಲಿ, ಉತ್ತರಪ್ರದೇಶ, ರಾಜಸ್ಥಾನ, ಮಧ್ಯಪ್ರದೇಶ, ಬಿಹಾರ ಮತ್ತು ಪಶ್ಚಿಮಬಂಗಾಳ ಈ ರಾಜ್ಯಗಳ ಮೂಲಕ ಹರಿಯುತ್ತವೆ. ಮಹಾನದಿ ಮಧ್ಯಪ್ರದೇಶ, ಒರಿಸ್ಸಾ, ಮಹಾರಾಷ್ಟ್ರ ಮತ್ತು ಬಿಹಾರದ ಕೆಲವು ಭಾಗಗಳಲ್ಲಿ ಹರಿಯುತ್ತದೆ. ಚಿಕ್ಕ ನದಿಗಳಾದ ದಾಮೋದರ ಹಾಗೂ ಪೆನ್ನಾರ್ ಕೂಡ ಅಂತರ್‌ರಾಜ್ಯ ನದಿಗಳಾಗಿವೆ. ಇಂದು ಸರ್ಕಾರ ಗಡಿಗಳನ್ನು ಮತ್ತು ಯೋಜನೆಗಳನ್ನು ರಾಜಕೀಯವಾಗಿ ರೂಪಿಸಿದರೂ ಇವು ಅಂತರ್ ರಾಜ್ಯಗಳ ಸಮಸ್ಯೆಗಳಾಗಿ ಉಳಿದಿವೆ. ಜಲವಿದ್ಯುತ್ ಉತ್ಪಾದನೆ ಮತ್ತು ನೀರಾವರಿಯ ಕಾರಣಗಳಿಗಾಗಿ ನದಿನೀರು ಸಂಪನ್ಮೂಲದ ಅಭಿವೃದ್ಧಿಯಾಗುತ್ತಲಿದೆ. ಭಾಕ್ರಾನಂಗಲ್, ಹಿರಾಕುಡ್, ತುಂಗ-ಭದ್ರಾಗಳನ್ನು ಹೆಸರಿಸಬಹುದು. ಇವು ನೀರಾವರಿ, ವಿದ್ಯುತ್ ಉತ್ಪಾದನೆ ಮತ್ತು ಪ್ರವಾಹ ನಿಯಂತ್ರಣದ ರೂಪದಲ್ಲಿ ನೆರವು ನೀಡುತ್ತಿವೆ. ಎಲ್ಲ ರಾಜ್ಯಗಳ ಪರಸ್ಪರ ಸಹಕಾರದಿಂದ ಈ ಯೋಜನೆಗಳನ್ನು ಮಾಡಲಾಗಿದೆ. ಕೃಷ್ಣಾ, ಗೋದಾವರಿ, ನರ್ಮದಾ ನದಿಗಳಿಗೆ ಸಂಬಂಧಿಸಿದಂತೆ ಅನೇಕ ಭಿನ್ನಾಭಿಪ್ರಾಯಗಳಿವೆ. ಇಂದು ಕಾವೇರಿ ಅತಿದೊಡ್ಡ ನದಿ ನೀರು ವಿವಾದವೆನಿಸಿದೆ. ನೀರಿನ ಪ್ರಮಾಣ ಸಮವಾಗಿದ್ದು, ಮುಂಗಾರಿನ ಬೆಳೆ ನಿರೀಕ್ಷಿಸಿದಷ್ಟು ಬಾರದೆ, ನದಿನೀರಿನ ಪ್ರಮಾಣ ಕಡಿಮೆಯಾಗಿ, ನೀರಿನ ಬೇಡಿಕೆ ಹೆಚ್ಚಾಗಿದ್ದು ಕಾರಣವಾಗಿದೆ. ಇದರಿಂದ ವಿವಾದಗಳು ಮುಗಿಲುಮುಟ್ಟಿದ್ದು, ನದಿ ನೀರನ್ನು ಸಕ್ರಮಗೊಳಿಸಲು ಕಾನೂನಿನಲ್ಲಿ ೩ ರೀತಿಯ

ಪರಿಹಾರಗಳಿವೆ : ನದಿ ತೀರದ ಹಕ್ಕು, ನೀರಿನ ಅನುಭೋಗ, ಪೂರ್ವವಿನಿಯೋಜನೆ ಮತ್ತು ನದಿನೀರು ವಿವಾದಗಳ ಇತ್ಯರ್ಥವನ್ನು ಅವಲೋಕಿಸಬಹುದು.

## ೧. ನದಿತೀರದ ಹಕ್ಕು

ನದಿಯು ಹರಿವಿನ ಪ್ರದೇಶಕ್ಕೆಲ್ಲ ಇದರ ಮೇಲಿನ ಹಕ್ಕು ಇರುತ್ತದೆ. ನದಿ ತೀರದ ಪ್ರದೇಶವೂ ತನ್ನ ನೆಲವನ್ನು ಬಳಸಿ ಹೋಗುವ ನೀರಿನ ಗುಣಮಟ್ಟವಾಗಲಿ, ಪ್ರಮಾಣದಲ್ಲಾಗಲಿ ಕಡಿಮೆಯಾದಂತೆ ತನ್ನ ಸಾಮಾನ್ಯ ಬಳಕೆಗೆ ಉಪಯೋಗಿಸುವ ಹಕ್ಕನ್ನು ಪಡೆದುಕೊಂಡಿರುತ್ತದೆ. ಸಾಕುಪ್ರಾಣಿಗಳಿಗಷ್ಟೇ ಅಲ್ಲದೆ ಇತರ ಪ್ರಾಣಿಗಳಿಗೆ ಎಲ್ಲ ರೀತಿಯಲ್ಲಿ ಬಳಸುವ ಅಧಿಕಾರವಿದೆ. ನದಿತೀರದ ಹಕ್ಕಿಗೆ ಕಾನೂನು ನಿಯಮಗಳು ಮತ್ತು ಅಂತರ್‌ದೇಶಿಯ ನೀರನ್ನು ಪಡೆದುಕೊಳ್ಳುವ, ಅಗೋಚರ ಜಲಸಂಪತ್ತಿನ ಬಳಕೆ ಕುರಿತಾದ ನದಿತೀರ ಪ್ರದೇಶದ ಸ್ವಾಮ್ಯ ಪಡೆದಿರುವವರ ಸಾಮಾನ್ಯ ಹಕ್ಕುಗಳು ಭಾರತೀಯ ಅನುಭೋಗ ಕಾಯ್ದೆ ೧೮೮೨ರಲ್ಲಿ ಸ್ಥಾನ ಪಡೆದುಕೊಂಡಿದೆ.

## ೨. ನೀರಿನ ಅನುಭೋಗ

ನೀರನ್ನು ಒಂದು ಆಸ್ತಿ ಎನ್ನುವುದಕ್ಕಿಂತ 'ಪ್ರಕೃತಿ ಸಂಪತ್ತು' ಎನ್ನಬೇಕಾಗುತ್ತದೆ. ನೀರಿನ ಸಾಮೀಪ್ಯದಿಂದ ತೀರದ ಹಕ್ಕು ಸಿಗುತ್ತದೆಯೇ ವಿನಾ, ಹರವು ಮೇಲಿನ ಮಾಲಿಕತ್ವ ಸಿಗುವುದಿಲ್ಲ. ನದಿತೀರದ ಹಕ್ಕು ಸಹ ನೀರು ಕುಂದದೆ, ಬದಲಾಗದೆ, ಯಥಾ ಸ್ಥಿತಿಯಲ್ಲಿ ನಿಯಮಿತ ಪಾತ್ರದಲ್ಲಿ ಹರಿಯುತ್ತಿದ್ದರೆ ಸಿಗುತ್ತದೆ. ಹರಿಯುವ ನೀರು ಎಲ್ಲರ ಸ್ವತ್ತು. ಆರಂಭದ ತೀರಪ್ರದೇಶದಲ್ಲಿರುವವರು ಹೆಚ್ಚಿನ ಅಧಿಕಾರ ಪಡೆದಿರುತ್ತಾರೆ. ನೀರು ಹರಿಯುವಲ್ಲಿ ಅಕ್ಕ-ಪಕ್ಕದವರು ಅಧಿಕಾರವನ್ನು ನೀರಿಗಷ್ಟೇ ಅನ್ವಯಿಸುತ್ತಾರೆ. ಒಂದು ಪ್ರದೇಶ ನದಿಯಿಂದ ಸ್ವಲ್ಪ ದೂರವಿರಬಹುದು. ನದಿ ತೀರಕ್ಕೆ ತುಂಡು ಭೂಮಿಯ ಮೂಲಕ ಸಂಪರ್ಕ ಕಲ್ಪಿಸಿಕೊಂಡು ನದಿತೀರದ ಸ್ವತ್ತಿನ ಅಧಿಕಾರವನ್ನು ಉಳಿಸಿಕೊಂಡಿರ ಬಹುದು. ನದಿತೀರದ ಸ್ವತ್ತಿನ ಪರಿಕಲ್ಪನೆಯೆಂದರೆ ನದಿಯೊಂದಿಗೆ ಸಂಪರ್ಕ, ಸರ್ವಸಮ್ಮತ ಸಮೀಪವಿರಬೇಕು ಎನ್ನುವುದಾಗಿದೆ. ಭೂಪ್ರದೇಶ ನದಿತೀರದ ಸ್ವತ್ತಿನ ಗುಣಲಕ್ಷಣಗಳನ್ನು ಹೊಂದಿರುತ್ತದೆ. ಒಬ್ಬರಿಗೆ ಹರಿಯುವ ನೀರಿನ ಒಡೆತನ ಮತ್ತೊಬ್ಬರಿಗೂ ಅದೇ ಪ್ರಮಾಣದಲ್ಲಿ ಇರುತ್ತದೆ. ನದಿ, ಉಪನದಿಗಳು, ಮುಖ್ಯನದಿಗಳು, ಝರಿಗಳು ನದಿತೀರದ ಸ್ವಾಮ್ಯಕ್ಕೆ ಒಳಗಾಗುತ್ತವೆ. ಇಂಗ್ಲಿಷ್ ಕಾಮನ್ ಲಾ ನಿಯಮಗಳನ್ನು ಭಾರತೀಯ ಅನುಭೋಗ ಕಾಯ್ದೆ ೧೮೮೨ರಲ್ಲಿ ಅಳವಡಿಸಿಕೊಳ್ಳಲಾಗಿದೆ. ಈ ಕಾಯ್ದೆಯ ೭ನೇ ಸೆಕ್ಷನ್(ಎಚ್) ಮತ್ತು (ಜೆ)ಗಳಲ್ಲಿ ಈ ಸಂಗತಿಗಳಿವೆ : (ಎಚ್) ತನ್ನ ನೈಸರ್ಗಿಕ ಹಾದಿಯಲ್ಲಿ ನಿರ್ದಿಷ್ಟ ಭೂಮಿಯನ್ನು ಬಳಸಿ ಅಥವಾ ಅದರ ಮೇಲೆ ಹಾದು ಹೋಗುವ ನದಿನೀರಿನ ಮೇಲಿನ ಹಕ್ಕನ್ನು ಭೂಮಿಯ ಮಾಲೀಕರಿಗೆ ಇತರ ವ್ಯಕ್ತಿಗಳು ಮಾಲೀಕರ ಮಿತಿಯೊಳಗೆ ಅಡೆತಡೆಯೊಡ್ಡದೆ, ನೀರು ಹರಿಯುವ ದಿಕ್ಕು ಮತ್ತು ಗುಣಮಟ್ಟಕ್ಕೆ ಧಕ್ಕೆಯಾಗದಂತೆ ಹರಿಯಲು ಅವಕಾಶ ಮಾಡಿಕೊಡಬೇಕು. (ಜೆ) ತನ್ನಂಥ ಇತರ ಭೂಮಾಲೀಕರ ಆಸಕ್ತಿಗೆ ತೊಂದರೆಯಾಗದಂತೆ ಕುಡಿಯುವ, ಗೃಹಬಳಕೆಯ, ಜಾನುವಾರುಗಳ ಉದ್ದೇಶದ, ಕೃಷಿಯ, ಕೈಗಾರಿಕೆಯ ಉದ್ದೇಶಗಳಿಗೆ ನೈಸರ್ಗಿಕವಾದ ನದಿ, ಕೆರೆ, ಕುಂಟೆಗಳ ನೀರನ್ನು

ಬಳಸುವುದರಿಂದ ನೀರಿನ ಪಾತ್ರಕ್ಕೆ ಅಂಟಿಕೊಂಡ ಪ್ರದೇಶದ ಮಾಲೀಕ ನೀರಿನ ಬಳಕೆಯ ಹಕ್ಕು ಬಳಸಿಕೊಳ್ಳುತ್ತಾನೆ. ಈ ನಿಯಮಗಳು ನದಿ ತೀರದಲ್ಲಿಲ್ಲದ ಭೂಮಾಲೀಕರಿಗೆ ನೀರಿನ ಸಂಪನ್ಮೂಲವನ್ನು ನಿರಾಕರಿಸುತ್ತವೆ.

## ೩. ಪೂರ್ವವಿನಿಯೋಜನಾ ಸಿದ್ಧಾಂತ

ನದಿನೀರಿನ ವಿವಾದಕ್ಕೆ ಸಂಬಂಧಿಸಿದ ಸಿದ್ಧಾಂತವಿದು. 'ನೀರು ತನ್ನ ಸಹಜ ಪ್ರವಾಹದ ಗತಿಯಲ್ಲಿರುವಾಗ ಸಾರ್ವಜನಿಕರಿಗಮ ಸೇರಿದ್ದು. ಇವರ ಮೇಲೆ ಯಾರ ಅಧಿಕಾರವೂ ಇಲ್ಲ ಎನ್ನುವುದನ್ನು ಈ ಸಿದ್ಧಾಂತ ಪ್ರತಿಪಾದಿಸುತ್ತದೆ. ಲಾಭದಾಯಕ ಕೆಲಸಗಳಿಗೆ ನದಿ ನೀರನ್ನು ಉಪಯೋಗಿಸಿಕೊಳ್ಳಬಹುದು. ರೋಮನ್‌ರ ಕಾಲದಿಂದಲೂ ಈ ಸಿದ್ಧಾಂತ ಪ್ರಚಲಿತದಲ್ಲಿದೆ. ತರುವಾಯ ಅಮೆರಿಕಾದ ಶುಷ್ಕ ಮತ್ತು ಅರೆಶುಷ್ಕ ಪಶ್ಚಿಮದ ರಾಜ್ಯಗಳು ಇದನ್ನು ಅನುಸರಿಸಿದವು. ಭಾರತದಲ್ಲಿ ಈ ಸಿದ್ಧಾಂತವನ್ನು ಕಾನೂನಿನ ರೂಪದಲ್ಲಿ ಒಪ್ಪಿಕೊಂಡಿಲ್ಲ. ಕಲ್ಕತ್ತಾದ ಉಚ್ಚನ್ಯಾಯಾಲಯ 'ಬೇಲ್‌ಭಾದರ್ ಪರ್ಟ್‌ಂಬ್-ಶೇಕ್ ಬರ್ಕತ್ ಅಲಿ' ಅವರಿಗೆ ಸಂಬಂಧಪಟ್ಟ ಮೊಕದ್ದಮೆಯಲ್ಲಿ ಈ ಸಿದ್ಧಾಂತ ಅನ್ವಯಿಸಿ ತೀರ್ಪುನೀಡಲು ನಿರಾಕರಿಸಿತು. ಮೇಲ್ದಂಡೆಯ ಮಾಲೀಕರಿಗೆ ತಮ್ಮ ನೀರಿನ ಸಂಪೂರ್ಣ ಉಪಯೋಗ ಪಡೆದುಕೊಳ್ಳಲು ಹಕ್ಕಿದೆ ಎಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು. ಕ್ರಮೇಣ ರಾಜ್ಯಗಳು ನದಿನೀರಿನ ಪೂರ್ಣ ಮತ್ತು ಆಂಶಿಕ ಒಡೆತನ ಪಡೆಯುತ್ತಿದ್ದಂತೆ ಈ ಸಿದ್ಧಾಂತ ಮೌಲ್ಯ ಕಳೆದುಕೊಂಡಿತು. ಬ್ರಿಟಿಷ್ ಜಲಸಂಪನ್ಮೂಲ ಕಾಯ್ದೆ ೧೯೬೩ರ ಪ್ರಕಾರ ಇಂಗ್ಲೆಂಡಿನಲ್ಲಿದ್ದ ನದಿನೀರಿನ ಹಕ್ಕಿನ ಅಭಿವೃದ್ಧಿ ಹಿನ್ನೆಲೆಯ ಪದ್ಧತಿ ಜಾರಿಯಲ್ಲಿದೆ.[೩೫]

ಭಾರತಕ್ಕೆ ಸ್ವಾತಂತ್ರ್ಯ ಬಂದನಂತರ ಜಲವನ್ನು ಹೆಚ್ಚಾಗಿ ಕೃಷಿ ಮತ್ತು ಕೈಗಾರಿಕೆಗೆ ಬಳಸಲಾಗುತ್ತಿದೆ. ಪಂಚವಾರ್ಷಿಕ ಯೋಜನೆಗಳಿಂದ ಜಲಸಂಪನ್ಮೂಲವನ್ನು ಅಭಿವೃದ್ಧಿ ಪಡಿಸಿದ ನಂತರ, ನಮ್ಮ ದೇಶದ ನದಿ ವ್ಯವಸ್ಥೆ ಅಂತರ್‌ರಾಜ್ಯ ಸ್ವರೂಪದ್ದಾಯಿತು. ಹೀಗಾಗಿ ರಾಜ್ಯಗಳ ಪುನರ್ವಿಂಗಡನೆಯಾದದ್ದು ಭೌಗೋಳಿಕದಿಂದಲ್ಲ. ಭಾಷೆಯ ಆಧಾರದಿಂದ. ಹಾಗಾಗಿ ಅನೇಕ ರಾಜ್ಯಗಳು ಸಾಂಕೇತಿಕವಾದ ಗಡಿಯನ್ನು ಹೊಂದಿವೆ. ನದಿಗಳು ನೈಸರ್ಗಿಕ ಭೌಗೋಳಿಕ ಪಥವನ್ನು ಅನುಸರಿಸುವುದರಿಂದ ಅವು ೨-೩ ರಾಜ್ಯಗಳಲ್ಲಿ ಹಾದು ಹೋಗುತ್ತವೆ. ಮುಂದೆ ಅಂತರ್‌ರಾಜ್ಯ ನದಿಗಳಾಗಿ ಗಡಿ ಮೀರಿ ಹರಿಯುವುದ ರೊಂದಿಗೆ ಸಮಸ್ಯೆ ಜಟಿಲವಾಗಿ ಚಳವಳಿಯ ಸ್ವರೂಪಕ್ಕೆ ನಾಂದಿಹಾಡುತ್ತವೆ. ಅವುಗಳ ವಿವರ ಇಂತಿದೆ :

೧. ವಿವಿಧ ರಾಜ್ಯಗಳಿಗೆ ಸೇರಿದ ಅಂತರ್‌ರಾಜ್ಯ ನದಿನೀರಿನ ಹಂಚಿಕೆ ಸಮಸ್ಯೆಗಳು.
೨. ಒಂದಕ್ಕಿಂತ ಹೆಚ್ಚು ರಾಜ್ಯಗಳು ಒಟ್ಟಾಗಿ ರೂಪಿಸಿದ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕೆ ಸಂಬಂಧಿಸಿದ ವೆಚ್ಚ ಮತ್ತು ಲಾಭವನ್ನು ಕುರಿತ ಸಮಸ್ಯೆ.
೩. ಒಂದು ರಾಜ್ಯದ ಯೋಜನೆಯಿಂದ ಇನ್ನೊಂದು ರಾಜ್ಯದ ಮೇಲಾಗುವ ಪರಿಣಾಮಕ್ಕೆ ಪರಿಹಾರ ನೀಡುವಾಗ ಹುಟ್ಟುವ ಸಮಸ್ಯೆಗಳು.
೪. ಒಪ್ಪಂದಗಳ ಅರ್ಥೈಸುವಿಕೆಯಲ್ಲಿ ಹುಟ್ಟುವ ವಿವಾದಗಳು.
೫. ಏಕೈಕ ರಾಜ್ಯ ಹೆಚ್ಚು ಲಾಭ ಪಡೆಯುವುದರಿಂದ ಹುಟ್ಟುವ ಅಸಮಾಧಾನ.[೩೬]

ಹೀಗೆ ನದಿ ತೀರದ ರಾಜ್ಯಗಳು ನದಿನೀರನ್ನು ಹಂಚಿಕೊಳ್ಳುವಲ್ಲಿ ಬಹಳಷ್ಟು ಸಮಸ್ಯೆಗಳು ಹುಟ್ಟುತ್ತವೆ. ಉದಾ : ಕೃಷ್ಣಾನದಿಗೆ ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳು ಕೆಳದಂಡೆ ತೀರಗಳಾದರೆ, ಮಹಾರಾಷ್ಟ್ರ ಮೇಲ್ದಂಡೆ ರಾಜ್ಯವಾಗುತ್ತದೆ. ಇದರಿಂದ ಯೋಜನಾ ಆಯೋಗ ಮಂಜೂರು ಮಾಡಿರುವ ಹೆಚ್ಚುವರಿ ನೀರನ್ನು ಕೊಯ್ನಾದತ್ತ ತಿರುಗಿಸಿಕೊಳ್ಳುತ್ತಿರುವುದರ ವಿರುದ್ಧ ಕರ್ನಾಟಕ ಮತ್ತು ಆಂಧ್ರಪ್ರದೇಶಗಳು ಆಕ್ಷೇಪವೆತ್ತಿವೆ. ಇದೇ ರೀತಿ ಕೃಷ್ಣಾನದಿಗೆ ಅತ್ಯಂತ ಕೆಳದಂಡೆ ರಾಜ್ಯವಾದ ಆಂಧ್ರವು ನೀರಾವರಿ ಉದ್ದೇಶಕ್ಕಾಗಿ ಮೇಲ್ದಂಡೆ ರಾಜ್ಯಗಳಾದ ಕರ್ನಾಟಕ ಮತ್ತು ಮಹಾರಾಷ್ಟ್ರ ಅಣೆಕಟ್ಟು ನಿರ್ಮಿಸುವುದರ ವಿರುದ್ಧ ಆಕ್ಷೇಪವೆತ್ತಿದೆ. ಇದೇ ರೀತಿ ತೆಲುಗು-ಗಂಗಾ ಯೋಜನೆಯಲ್ಲಿ ಮೇಲ್ದಂಡೆ ರಾಜ್ಯವಾದ ಕರ್ನಾಟಕ ಕೆಳದಂಡೆ ರಾಜ್ಯವಾದ ಆಂಧ್ರಪ್ರದೇಶದ ಬಗ್ಗೆ ತನ್ನ ಅಸಮಧಾನ ವ್ಯಕ್ತಪಡಿಸಿದೆ. ಸಮುದ್ರಕ್ಕೆ ಹರಿದು ಹೋಗುತ್ತಿರುವ ಹೆಚ್ಚುವರಿ ನೀರಿನ ಬಳಕೆಗೆ ಆಂಧ್ರಪ್ರದೇಶ ಯೋಜನೆಗಳನ್ನು ಹಮ್ಮಿಕ್ಕೊಂಡಿದೆ. ತನ್ನ ನೀರಾವರಿ ಯೋಜನೆಗಳು ಇನ್ನೂ ಪೂರ್ಣವಾಗದಿರುವ ಕಾರಣ ತನ್ನ ಪಾಲಿಗೆ ಬರುವ ಕೃಷ್ಣಾನದಿ ನೀರನ್ನು ಸಂಪೂರ್ಣವಾಗಿ ಬಳಸಿಕೊಳ್ಳದಿರುವುದರಿಂದಲೇ ಈ ಹೆಚ್ಚುವರಿ ನೀರು ಸಮುದ್ರ ಸೇರುತ್ತದೆಂಬುದು ಕರ್ನಾಟಕದ ವಾದ. ಹೀಗಿದ್ದರೂ ಎರಡು ಮೂರು ರಾಜ್ಯಗಳು ಸೇರಿ ನದಿನೀರನ್ನು ಬಳಸಿಕೊಳ್ಳಲು ಜಂಟಿ ಅಭಿವೃದ್ಧಿಯೋಜನೆ ರೂಪಿಸಿವೆ. ಕರ್ನಾಟಕ-ಆಂಧ್ರಪ್ರದೇಶದ ನಡುವಿನ ತುಂಗಭದ್ರಾ ಅಣೆಕಟ್ಟು ಉತ್ತಮ ಉದಾಹರಣೆ.

ಕೆಲವು ಸಾರಿ ನದಿಯ ಕೆಳದಂಡೆ ರಾಜ್ಯಗಳು ಯೋಜಿಸುವ ಅಂತರ್ ರಾಜ್ಯ ನದಿನೀರಿನ ಅಭಿವೃದ್ಧಿಯಿಂದ ಮೇಲ್ದಂಡೆ ನೀರಿನ ಬಳಕೆಗೆ ಧಕ್ಕೆಯಾಗುವ ಶಕ್ಯತೆ ಹೆಚ್ಚು. ಅಣೆಕಟ್ಟು, ಕಾಲುವೆಗಳಿಲ್ಲದ ಪ್ರದೇಶದಲ್ಲಿ ನದಿಯ ಪಾತ್ರಕ್ಕಂಟಿಕೊಂಡ ಪರಿಸರ ನದಿನೀರನ್ನು ಪ್ರತ್ಯಕ್ಷವಾಗಿ ಕೃಷಿಭೋಗಕ್ಕೆ ಬಳಸುತ್ತದೆ. ಒಂದು ಅಣೆಕಟ್ಟು ನಿರ್ಮಿಸಿದಾಗ ಹಿನ್ನೀರಿನಿಂದಾಗಿ ಸಾಕಷ್ಟು ಪ್ರದೇಶ ಮುಳುಗಡೆಯಾಗುತ್ತದೆ. ರಾಜ್ಯವೊಂದು ಅಣೆಕಟ್ಟು ನಿರ್ಮಿಸುವಾಗ ತನ್ನ ಪ್ರದೇಶಕ್ಕೆ ಎಷ್ಟು ಸಾಧ್ಯವೋ ಅಷ್ಟು ಉಪಯೋಗವಾಗುವಂತೆ ರಾಜಕೀಯ ಗಡಿಯೊಳಗೆ ಅಣೆಕಟ್ಟು ನಿರ್ಮಿಸಲು ಪ್ರಯತ್ನಿಸುತ್ತದೆ. ಕೆಳದಂಡೆ ರಾಜ್ಯಗಳು ಅಣೆಕಟ್ಟು ನಿರ್ಮಿಸಿದಾಗ ಮೇಲ್ದಂಡೆ ರಾಜ್ಯದ ಪ್ರದೇಶಗಳು ಮುಳುಗಡೆಯಾಗುತ್ತವೆ. ಆಗ ಮುಳುಗಡೆಗೊಂಡ ಪ್ರದೇಶ ಹೆಚ್ಚಾಗಿ ರೈತರ ಹೊಲಗಳೇ ಆಗಿದ್ದು, ಸರ್ಕಾರ ನಿರಾಶ್ರಿತಗೊಂಡ ರೈತರಿಗೆ ಪರಿಹಾರ ಕೊಡುವಲ್ಲಿ ನಿರ್ಲಕ್ಷಿಸುತ್ತದೆ ಎಂಬ ಅಪವಾದವಿದೆ. ಕೆಲವು ರೈತರು ಮನೆ, ಮಠ ಕಳೆದುಕೊಂಡು ವಲಸೆ ಹೋಗುವ ನಿದರ್ಶನಗಳಿವೆ: ಉದಾ : ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಬಾಗಲಕೋಟೆ ಜಿಲ್ಲೆಯ ಹಳ್ಳಿಗಳು, ತುಂಗಾ ಮೇಲ್ದಂಡೆಯೋಜನೆ, ರಂಗಯ್ಯನದುರ್ಗ ಯೋಜನೆ ಇತ್ಯಾದಿ. ಜಲಾಶಯಗಳಿಂದ ನೀರುಬೇಕೆಂದು ಕೆಲವರ ಬೇಡಿಕೆಯಾದರೆ, ನೀರಿನಿಂದ ಮುಳುಗಡೆಯಾದ ಹಳ್ಳಿಗಳ ಜನರು ಪರಿಹಾರಕ್ಕಾಗಿ ಒತ್ತಾಯಿಸಿ ಚಳವಳಿ ನಡೆಸುವುದು ಇನ್ನೊಂದು ಮುಖ.

## ೪. ನೀರಾವರಿ ವಿವಾದಗಳ ಇತ್ಯರ್ಥ

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ನದಿನೀರು ವಿವಾದಕ್ಕೆ ಪರಿಹಾರವಿದ್ದೆ ಇದೆ. ಬ್ರಿಟಿಷರ ಆಳ್ವಿಕೆಯಲ್ಲಿ ಸ್ಪಷ್ಟ ಚಿತ್ರಣ ಸಿಗುತ್ತದಲ್ಲದೆ, ಸ್ವಾತಂತ್ರ್ಯನಂತರ ಅದು

ಬೃಹದಾಕಾರವಾಗಿ ಬೆಳೆಯಿತು. ಝೀಲಂ ನದಿಯ ಸಹಭಾಗಿತ್ವವನ್ನು ೧೮೭೩ರಲ್ಲಿ ಕ್ರಮಬದ್ಧಗೊಳಿಸಿದ್ದರೆ, ಕಾವೇರಿ ನದಿಯ ಸಹಭಾಗಿತ್ವವನ್ನು ೧೮೯೨ರಲ್ಲಿ ಕ್ರಮಬದ್ಧಗೊಳಿಸಲಾಗಿತ್ತು.[೬೬] ನದಿನೀರಿನ ಹಂಚಿಕೆ ಮೊದಲು ಸಿರ್‌ಹಿಂದ್ ಕಾಲುವೆ ಒಪ್ಪಂದವೆಂದು ಗುರುತಿಸಿದರೆ, ಬ್ರಿಟಿಷ್ ಸರ್ಕಾರ ಒಂದು ಕಡೆ ಪಾಟಿಯಾಲ-ಜೀಂದ್‌ನ ಭಾಗಗಳು, ಮತ್ತೊಂದು ಕಡೆ ಪಕ್ಷಗಳಾಗಿದ್ದವು. ಕಾವೇರಿ ನದಿನೀರಿನ ಹಂಚಿಕೆಯ ಬಗ್ಗೆ ಮೈಸೂರು ಅರಸರು ಮತ್ತು ಮದ್ರಾಸ್ ಸರ್ಕಾರ ನಡುವೆ ಒಪ್ಪಂದವಾಗಿತ್ತು. ಎರಡು ಒಪ್ಪಂದಗಳಿಗೂ ಬ್ರಿಟಿಷ್ ಸರ್ಕಾರದ ಅನುಮತಿಯಿತ್ತು.

ಮೊದಲ ಅಂತರ್‌ರಾಜ್ಯ ನದಿನೀರಿನ ಹಂಚಿಕೆಯ ಒಪ್ಪಂದ ಸಿರ್‌ಹಿಂದ್ ಕಾಲುವೆಗೆ ಸಂಬಂಧಿಸಿದುದು. ಪಾಟಿಯಾಲದ ಮಹಾರಾಜನು ತಮ್ಮ ಭಾಗದ ನೀರಾವರಿಗಾಗಿ ಪ್ರಸ್ತಾಪ ಮುಂದಿಟ್ಟನು. ೧೯೪೧ರಲ್ಲಿ ಸಿಂಧೂ ನದಿನೀರಿನ ಹಂಚಿಕೆ ವಿಮರ್ಶಿಸಲು ಗೌರ್ನರ್ ಜನರಲ್, ನ್ಯಾಯಾಧೀಶ ಬಿ. ಎನ್. ರಾವ್‌ರ ನೇತೃತ್ವದಲ್ಲಿ ಆಯೋಗ ನೇಮಕವಾಯಿತು. ೧೯೪೨ರಲ್ಲಿ ಮಂಡಿಸಿದ ತನ್ನ ವರದಿಯಲ್ಲಿ ಆಯೋಗ ಅಂತರ್‌ರಾಜ್ಯ ನದಿನೀರಿನ ಹಂಚಿಕೆಯಲ್ಲಿ ಅಗತ್ಯವಾಗಿ ತಿಳಿಯಬೇಕಾದ ಸಂಗತಿಯೆಂದರೆ, ಪ್ರತಿ ಸಮಸ್ಯೆಗೂ ತಾಂತ್ರಿಕ ಪರಿಹಾರ ಕಂಡುಕೊಳ್ಳುವುದು. ಆಡಳಿತಾತ್ಮಕ ಅಥವಾ ರಾಜಕೀಯ ಗಡಿಗಳಿಲ್ಲದೆ ಇಡೀ ರಾಜ್ಯವನ್ನು ಒಂದು ಏಕೈಕ ಘಟಕವೆಂದು ಹೇಳಿತು.

ಸ್ವಾತಂತ್ರ್ಯನಂತರ ದೇಶ ವಿಭಜನೆಗೊಂಡು ವಿವಾದ ಎರಡು ದೇಶಗಳ ನಡುವೆ ಅಂತರಾಷ್ಟ್ರೀಯ ಮಟ್ಟದ್ದಾಯಿತು. ಅನೇಕ ಸುತ್ತಿನ ಮಾತುಕತೆಗಳು ವಿಫಲವಾಗಿ, ಕೊನೆಗೆ ೧೯೬೦ರ ಸಪ್ಟೆಂಬರ್‌ನಲ್ಲಿ ವಿಶ್ವಬ್ಯಾಂಕಿನ ಪಾತ್ರದಿಂದ ಒಪ್ಪಂದಕ್ಕೆ ಬರಬೇಕಾಯಿತು. ಈ ಒಪ್ಪಂದದಂತೆ ಭಾರತ ಮತ್ತು ಪಾಕಿಸ್ತಾನಗಳೆರಡೂ ಪರಿಣಾಮಾತ್ಮಕ ನೀರಿನ ಹಂಚಿಕೆಗೆ ಬದ್ಧವಾದವು. ಎರಡು ದೇಶಗಳು ತಮ್ಮ ತಮ್ಮ ಅಭಿವೃದ್ಧಿ ಯೋಜನೆಗಳನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳಬಹುದೆಂಬುದನ್ನು ಒಪ್ಪಿಕೊಂಡವು. ಇದಕ್ಕೆ 'ಸಿಂಧೂ ನದಿಯ ಒಪ್ಪಂದ' ಎಂದರು. ಇದರ ಪ್ರಕಾರ ಭಾರತಕ್ಕೆ ಪೂರ್ವನದಿಗಳಾದ ಸಟ್ಲೇಜ್, ರಾವಿ ಮತ್ತು ಬಿಯಾಸ್‌ಗಳ ಮೇಲೆ ಒಪ್ಪಂದದ ನಿಯಮಗಳಿಗನುಸಾರವಾಗಿ ಅನಿರ್ಬಂದಿತ ಅಧಿಕಾರ ಹಾಗೂ ಪಾಕಿಸ್ತಾನಕ್ಕೆ ಪೂರ್ವದ ನದಿಗಳಾದ ಸಿಂಧೂ, ಚೀನಾಬ್, ಝೀಲಂ ನದಿಗಳ ಮೇಲೆ ಅಧಿಕಾರ ನೀಡಲಾಯಿತು. ಇಲ್ಲಿಯವರೆಗೆ ಪೂರ್ವನದಿಗಳನ್ನು ಅವಲಂಬಿಸಿದ್ದ ಪಾಕಿಸ್ತಾನ ತನ್ನ ನಾಡಿನಲ್ಲಿ ಕೃಷಿ ಉದ್ದೇಶಕ್ಕಾಗಿ ಅಣೆಕಟ್ಟು ನಿರ್ಮಿಸಲು ಒಪ್ಪಿಕೊಂಡಿತು. ಯೋಜನೆಗೆ ತಗಲುವ ವೆಚ್ಚದಲ್ಲಿ ೬೨ ದಶಲಕ್ಷ ಪೌಂಡ್ ಹಣನೀಡಲು ಭಾರತ ಒಪ್ಪಿತು.

ಹೀಗೆ ಕರ್ನಾಟಕದ ಕೃಷ್ಣಾನದಿ ನೀರು ವಿವಾದ ನ್ಯಾಯಾಧಿಕರಣದ ಸಂದರ್ಭದಲ್ಲಿ ಈ ಪಂಚಾಯ್ತಿಯ ನೇತೃತ್ವ ವಹಿಸಿದ ನ್ಯಾಯಾಧೀಶ ಆರ್. ಎಸ್. ಬಚಾವತ್ 'ವೈಜ್ಞಾನಿಕವಾದ ಸೂತ್ರದ ಆಧಾರವಿಲ್ಲದೆ ಸಮಪ್ರಮಾಣದ ನೀರಿನ ಹಂಚಿಕೆಯ ಕಲ್ಪನೆ ಖಚಿತವಾದ ಪರಿಹಾರ ಸೂಚಿಸುವುದಿಲ್ಲ' ಎಂದಿದ್ದಾರೆ. ಆದರೆ ಪಂಚಾಯ್ತಿಯ ಸದಸ್ಯರ ಅಭಿಪ್ರಾಯದಂತೆ ನೀರಿನ ಸಮಪ್ರಮಾಣದ ಹಂಚಿಕೆ : ನೀರಿನ ಹರಿಯುವಿಕೆ, ನದಿ ದಂಡೆಯ ಹವಮಾನ ಮತ್ತು ಭೌಗೋಳಿಕ ಲಕ್ಷಣ, ಹರಿದು ಹೋಗುವ ನೀರಿನ ಪ್ರಮಾಣ, ಅದು ಕವಲೊಡೆಯುವ ರೀತಿ, ನೀರಿನ ಅಗತ್ಯವನ್ನು ಪೂರೈಸುವ ಬದಲಿ ಮೂಲಗಳು

ಕಾನೂನುಬದ್ಧ ಬಳಕೆಯ ಮಿತಿ, ರಾಜ್ಯಗಳ ಬಳಕೆದಾರರ ಅಗತ್ಯ ಮುಂತಾದ ಸಂಗತಿಗಳನ್ನು ಅವಲಂಬಿಸಿರುತ್ತದೆ. ಕೂಡಲೆ ವಿವಾದ ತಿಳಿಗೊಳಿಸಲು ರೂಪುರೇಷೆಗೆ ಸಿದ್ಧತೆ ನಡೆದದ್ದು ಕಂಡುಬರುತ್ತದೆ.

ಕ್ರಿ. ಶ. ೧೮೬೭ರಲ್ಲಿ ಮೊದಲ ಬಾರಿಗೆ ಭಾರತದಲ್ಲಿ ಸಮಪ್ರಮಾಣದ ನೀರಿನ ಹಂಚಿಕೆ ಜಾರಿಗೆ ಬಂತು. ಸಮಪ್ರಮಾಣದ ಹಂಚಿಕೆಯೆಂದರೆ ರಾಜ್ಯದ ಭೌಗೋಳಿಕ ಗಡಿಯನ್ನು ಪರಿಗಣಿಸದೆ ಅತೀ ಕಡಿಮೆ ವೆಚ್ಚದಲ್ಲಿ ಹೆಚ್ಚು ಪ್ರದೇಶವನ್ನು ನೀರಾವರಿಗೆ ಒಳಪಡಿಸುವುದು. ಸರ್ಕಾರಗಳು ಬದಲಾದರೂ ಕಾಲುವೆಗಳು ಬದಲಾಗದೆಂಬುದು ಆಗಿನ ಸಾಮಾನ್ಯ ನಂಬಿಕೆ. ಇನ್ನೊಂದು ಸಂಗತಿಯೆಂದರೆ ನದಿನೀರನ್ನು ತೀರದ ರಾಜ್ಯಗಳಷ್ಟೆ ಅಲ್ಲದೆ, ನದಿ ತೀರದಲ್ಲಿಲ್ಲದ ರಾಜ್ಯಗಳೂ ನೀರಾವರಿ ಯೋಜನೆಯ ವೆಚ್ಚವನ್ನು ಭರಿಸಲು ಅಂಥಾ ರಾಜ್ಯಗಳು ಒಪ್ಪಿಕೊಳ್ಳಬೇಕಾಗಿತ್ತು. ಉದಾ : ಸಟ್ಲೇಜ್ ನದಿನೀರು ವಿವಾದ.

೧೯೫೩ರಲ್ಲಿ ತಂತ್ರಜ್ಞರನ್ನೊಳಗೊಂಡ ಆಂಡರ್ಸನ್ ಸಮಿತಿ ನದಿನೀರಿನ ಹಂಚಿಕೆಯ ಬಗ್ಗೆ ವರದಿ ಮಂಡಿಸಿತು. ಸಮಿತಿ ಸದಸ್ಯರು ನೀರಿನ ಹಂಚಿಕೆಗೆ ಸಂಬಂಧಿಸಿದಂತೆ ಬೆಂಥಾಮೈಟ್ ನೀತಿಯಾದ ಹೆಚ್ಚಿನ ಸಂಖ್ಯೆಯವರೆಗೆ ಹೆಚ್ಚಿನ ಸವಲತ್ತು ನೀತಿಯನ್ನು ಅನುಸರಿಸಿದರು. ನದಿ ನೀರಿನ ಬಗ್ಗೆ ಶಾಶ್ವತ ಹಕ್ಕು ನೀಡದಿರುವುದು ಆಗಾಗ ಪುನರ್ ವಿಮರ್ಶೆಗೊಳಪಡಿಸಬೇಕಾಗಿತ್ತು.

ಅಂತರ್‌ರಾಜ್ಯ ನದಿನೀರು ವಿವಾದದಿಂದ ಕರ್ನಾಟಕ ಇನ್ನೂ ಸಮರ್ಪಕವಾಗಿ ನದಿನೀರನ್ನು ಬಳಸಿಕೊಂಡಿಲ್ಲ. ಅವುಗಳೆಂದರೆ : ಕಾವೇರಿ, ಕೃಷ್ಣಾ ಮೇಲ್ದಂಡೆ, ತುಂಗಭದ್ರಾ ಮತ್ತು ಕೃಷ್ಣಾ-ಗೋದಾವರಿ ನದಿನೀರು ವಿವಾದಗಳು. ಕೃಷ್ಣಾಮೇಲ್ದಂಡೆ ಯೋಜನೆ ಮತ್ತು ತುಂಗಭದ್ರಾ ನೀರಿನ ಹಂಚಿಕೆ ಬಗೆಗೆ ಆಂಧ್ರಪ್ರದೇಶ ಮತ್ತು ಕರ್ನಾಟಕದ ನಡುವೆ ಉದ್ಭವಿಸಿರುವ ವಿವಾದಗಳು ಪರಿಹಾರವಾಗಿಲ್ಲ. ಸರ್ವೋಚ್ಚನ್ಯಾಯಾಲಯ, ಜಲಮಂಡಳಿ, ಇತರ ಸರ್ಕಾರಿ, ಸಂಘ ಸಂಸ್ಥೆಗಳ ಮಟ್ಟಕ್ಕೆ ವಿವಾದ ತಲುಪಿದೆ. ತುಂಗಭದ್ರಾ ಯೋಜನೆ ಸಹ ಏಕೀಕರಣದ ಸಂದರ್ಭದಲ್ಲಿ ಸಮಸ್ಯೆಯಾಗಿದ್ದರಿಂದ ಕನ್ನಡಿಗರು ಚಳವಳಿ ಮಾಡಿದಾಗ ಒಪ್ಪಂದಕ್ಕೆ ಬರಬೇಕಾಯಿತು. ಕೃಷ್ಣಾ ಮೇಲ್ದಂಡೆಯ ಅಣೆಕಟ್ಟೆಯ ಎತ್ತರದ ಬಗ್ಗೆ ಆಂಧ್ರದ ಆಕ್ಷೇಪವಿದೆ. ಅದೇ ರೀತಿ ಕಾವೇರಿ ನದಿ ನೀರಿನ ವಿವಾದ. ತಮಿಳುನಾಡು ನಿರ್ದಿಷ್ಟ ಪ್ರಮಾಣದಲ್ಲಿ ನೀರು ಬಿಡಲು ಒತ್ತಾಯಿಸುತ್ತದೆ. ಇವೆರಡರ ವಿವಾದ ಸರ್ವೋಚ್ಚ ನ್ಯಾಯಾಲಯಕ್ಕೆ ಸೇರಿದ್ದು ಅಂತಿಮ ತೀರ್ಮಾನ ಇನ್ನು ಇತ್ಯರ್ಥ ಆಗಿಲ್ಲ.

ಬಹುಶಃ ನದಿನೀರು ವಿವಾದಗಳು ಹುಟ್ಟುವುದು ರಾಜಕೀಯದಿಂದ ಇರಬೇಕು. ಆಯಾ ರಾಜ್ಯದ ಪ್ರತಿನಿಧಿಗಳು ಅವರವರ ಹಿತಾಸಕ್ತಿಗಳಿಗೆ ಅನುಗುಣವಾಗಿ ರಾಜಕೀಯ ಅಸ್ತ್ರವಾಗಿ ಬಳಸುತ್ತಾರೆ. ನದಿ ನೀರು ವಿವಾದ ಎರಡು ರೀತಿಯಲ್ಲಿದೆ : ಒಂದು ಅಂತರರಾಜ್ಯ ಮತ್ತು ಆಂತರಿಕ ಜಲಸಮಸ್ಯೆ ವಿವಾದಗಳು.

### ೫:೧. ಕಾವೇರಿ ಜಲವಿವಾದದ ಚಳವಳಿ

ಕಾವೇರಿ ನದಿ ನೀರಿನ ಹಂಚಿಕೆ ಶತಮಾನಗಳಷ್ಟು ಹಳೆಯ ವಿವಾದ. ಇದರಿಂದಾಗಿ ಕರ್ನಾಟಕ-ತಮಿಳುನಾಡಿನ ಜನಸಮುದಾಯಕ್ಕೆ ಅತ್ಯಂತ ದ್ವೇಷ, ಅಸೂಯೆವಿರುವಂತೆ

ಅಷ್ಟೇ ನಿಕಟ ಸಂಬಂಧವಿದೆ. ಇದು ಎರಡು ರಾಜ್ಯಗಳ ಜೀವನದಿಯಾಗಿ, ರಾಜಕೀಯ ಪಲ್ಲಟಗಳನ್ನು ಸೃಷ್ಟಿಸಿದೆ. ಹಿಂದಿನ ಮೈಸೂರು ರಾಜ್ಯ ಮತ್ತು ಮದ್ರಾಸ್ ಅಧಿಪತ್ಯಗಳ ನಡುವಿನ ವಿವಾದವು ಶತಮಾನವನ್ನು ಕಂಡಿದೆ. ೧೮೯೧ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಮೈಸೂರಿನ ದಿವಾನರು 'ಕಾವೇರಿ' ವಿವಾದದ ಬಗ್ಗೆ ಮಾತನಾಡುತ್ತಾ ನದಿನೀರಿನ ಕಾಲುವೆಗಳ ಪೂರ್ಣ ಉಪಯೋಗದ ಬಗ್ಗೆ ಉಭಯ ರಾಜ್ಯಗಳ ನಡುವೆ ಭಿನ್ನಾಭಿಪ್ರಾಯಕ್ಕೆ ಅಂತಿಮ ತೆರೆ ಎಳೆದು ಸರ್ಕಾರಕ್ಕೆ ಕಳುಹಿಸಲಾಯಿತು ಎಂದರು. ಆಗ ಮದ್ರಾಸ್ ಪ್ರಾಂತ್ಯದ ಗಡಿಪ್ರದೇಶದ ನೀರಾವರಿ ಯೋಜನೆಯೊಡ್ಡಿದ ತಡೆಯನ್ನು ತೆಗೆದುಹಾಕಿದರು.

ಕ್ರಿ. ಶ. ೧೮೯೧ರಲ್ಲಿ ಕಾವೇರಿ ವಿವಾದದ ಬಗ್ಗೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಶ್ನೆಯನ್ನೆತ್ತಿದವರು ಒಬ್ಬ ಆಂಗ್ಲ ಸದಸ್ಯನಾದ ಹಾಗೂ ತೋಟಗಾರರ ಸಂಘಕ್ಕೆ ಸೇರಿದ ಎಲಿಯಟ್ ಎಂಬುವನು. ಇವನು ಕಾವೇರಿ ನೀರನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಹಕ್ಕು ಮೈಸೂರಿಗಿದೆ. ತನ್ನ ಮೂಲ ಕಾಲುವೆಯಲ್ಲಿ ನೀರು ಸಂಗ್ರಹಿಸಿರುವವರೆಗೂ ಮದ್ರಾಸ್ ಪ್ರಾಂತ್ಯ ಈ ವಿಷಯದ ಬಗ್ಗೆ ವಿವಾದವೆಬ್ಬಿಸಬಾರದು. ಮೈಸೂರು ಒಮ್ಮೆ ಬ್ರಿಟಿಷರಿಂದ ಮದ್ರಾಸ್‌ನ ಭಾಗವಾಗಬೇಕೆಂಬ ಪ್ರಯತ್ನ ನಡೆಯಿತು. ಮೈಸೂರು ಮದ್ರಾಸ್‌ನ ಒಂದು ಭಾಗವಾಗಿದ್ದರೆ ಸಮಸ್ಯೆ ಈ ಮಟ್ಟಕ್ಕೆ ತಲುಪುತ್ತಿರಲಿಲ್ಲವೇನೊ? ಎಲಿಯಟ್‌ನು ಇದಕ್ಕೆ 'ಅವಿನಯ ಮತ್ತು ಅಷ್ಟೇ ಅಪರಾಧ' ಎನ್ನುತ್ತಾನೆ. ನೀರು ದೂರದ ಹಾದಿಸವೆಸುವಾಗ ಆವಿಯಾಗಿ ಇಂಗುತ್ತದೆ. ಬರಗಾಲದ ವಿರುದ್ಧ ಸೆಣೆಸಾಡುವ ಸರ್ಕಾರದ ಶಕ್ತಿ ಕುಂದುತ್ತದೆ ಎಂದನು. ನಂತರ ಮೈಸೂರು ತನ್ನ ಗಡಿಯೊಳಗೆ ಬರುವ ನೀರಿನ ಉಪಯೋಗವನ್ನು ಪಡೆದುಕೊಳ್ಳುವ ಹಕ್ಕನ್ನು ಎತ್ತಿಹಿಡಿಯಬೇಕು. ಯುರೋಪಿನ ರಾಷ್ಟ್ರಗಳು ರೈನ್ ನದಿಗೆ ಸಂಬಂಧಿಸಿದ ನದಿ ತೀರದ ಹಕ್ಕನ್ನು ಕುರಿತು ಅಂತಾರಾಷ್ಟ್ರೀಯ ಕಾನೂನಿನಲ್ಲಿ ತಿಳಿಸಿರುವ ಮಾತುಗಳಿಗೆ ಮರುಳಾಗಕೂಡದೆಂದು ಆತ ಎಚ್ಚರಿಸಿದ. ಬ್ರಿಟಿಷ್ ಸರ್ಕಾರವು ಒಂದು ಮರ ನೆಡಲು ಮೈಸೂರು ಹಟ ಹಿಡಿದರೆ ಅವಕಾಶ ಕೊಡಲಿಲ್ಲ ಎಂದು ಸರ್. ಒಲಿವರ್ ಸೆಂಟ್‌ಜಾನ್ ಉದಾಹರಿಸಿದ್ದನ್ನು ನೆನಪಿಸಿದ ಎಲಿಯಟ್ 'ಹಕ್ಕು ಮತ್ತು ಕರ್ತವ್ಯಗಳ' ಪ್ರಶ್ನೆಯನ್ನು ಬದಿಗಿರಿಸಿದಾಗ ಕಂಡುಬರುವ ಸಂಗತಿಯೆಂದರೆ ನದಿ ಎಲ್ಲಿ ಹುಟ್ಟಿ ಹರಿದು ಹೋಗುವುದೋ ಅಂಥಾ ರಾಜ್ಯಕ್ಕೆ ಅದನ್ನು ಉಪಯೋಗಿಸುವ ಅವಕಾಶ ದಕ್ಕದಿದ್ದಲ್ಲಿ ಆ ನೀರು ಯಾರಿಗೂ ಉಪಯೋಗವಾಗದೇ ವ್ಯರ್ಥವಾಗಿ ಹರಿದು ಹೋಗುತ್ತದೆ ಎಂದೂ ವಾದಿಸಿದ.[೩೮]

ಎಲಿಯಟ್‌ನ ಪ್ರಶ್ನೆಗೆ ಉತ್ತರ ಸಿಗಲಿಲ್ಲ. ದಿವಾನರಿಗೂ ಬ್ರಿಟಿಷ್ ಸರ್ಕಾರದೊಂದಿಗೆ ವೈಮನಸ್ಯ ಕಟ್ಟಿಕೊಳ್ಳುವುದು ಬೇಕಿರಲಿಲ್ಲ. ಕರ್ನಾಟಕದ (ಕೊಡಗಿನ) ಪಶ್ಚಿಮ ಘಟ್ಟಗಳಲ್ಲಿ ಜನಿಸುವ ಕಾವೇರಿನದಿ ರಾಜ್ಯದ ೨೮ ತಾಲೂಕುಗಳ ಮೂಲಕ ಹರಿದು ತಮಿಳುನಾಡನ್ನು ಹಾದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ಇದಕ್ಕೆ ಸಾಕಷ್ಟು ಉಪನದಿಗಳಿವೆ. ಇದರಲ್ಲಿನ ಶೇ. ೭೫ರಷ್ಟು ನೀರು ಕರ್ನಾಟಕದ ಕೊಡುಗೆ.

೧೮೯೨ರಲ್ಲಿ ಮೈಸೂರು ಮತ್ತು ಮದ್ರಾಸ್ ಪ್ರಾಂತ್ಯಗಳ ನಡುವೆ ಒಪ್ಪಂದವೊಂದು ನಡೆಯಿತು. ಅದರ ಪ್ರಕಾರ ಮದ್ರಾಸ್ ಸರ್ಕಾರಕ್ಕೆ ಸೂಚನೆ ನೀಡದೆ ಯಾವುದೇ ಹೊಸ ನೀರಾವರಿ ಯೋಜನೆಯನ್ನು ಹಮ್ಮಿಕೊಳ್ಳದಂತೆ ಮೈಸೂರು ಸರ್ಕಾರವನ್ನು ನಿರ್ಬಂಧಿಸ

ಲಾಗಿತ್ತು. ಇದು ಮೈಸೂರು ಮತ್ತು ಮದ್ರಾಸ್ ಪ್ರಾಂತ್ಯಗಳೆರಡರ ಮೇಲೂ ಹೇರಲಾಗಿತ್ತು. ಮೈಸೂರಿನ ಕೆಲವು ಹಕ್ಕುಗಳು ಮೊಟಕಾದವು. ನದಿ ತೀರದ ರಾಜ್ಯಕ್ಕೆ ಅದು ವಿರುದ್ಧವಾಗಿತ್ತು.

೧೮೯೨ ಮತ್ತು ೧೯೨೪ರಲ್ಲಿ ಆದ ಮುದ್ರಾಸ್ - ಮೈಸೂರುಗಳ ಎರಡು ಒಪ್ಪಂದಗಳು ತಮಿಳುನಾಡಿಗೆ ಅನುಕೂಲವಾಗಿ, ಕರ್ನಾಟಕಕ್ಕೆ ನೆರವಾಗಲಿಲ್ಲ. ಈ ಎರಡು ಒಪ್ಪಂದಗಳ ಫಲಿತಾಂಶಗಳೆಂದರೆ : ಕರ್ನಾಟಕ ಕಾವೇರಿಯ ಪಾತ್ರದಲ್ಲಿ ಯಾವುದೇ ಜಲವಿದ್ಯುತ್ ಯೋಜನೆ ಕೈಗೆತ್ತಿಕೊಳ್ಳಬಾರದು, ತನ್ನ ನೀರಾವರಿ ಪ್ರದೇಶದ ವ್ಯಾಪ್ತಿಯನ್ನು ವೃದ್ಧಿಸಿಕೊಳ್ಳಬಾರದು ಎನ್ನುವ ಕಟ್ಟುನಿಟ್ಟಿನ ನಿರ್ಬಂಧದ ಹೇರಿಕೆ.

ಮೇಲಿನ ಒಪ್ಪಂದದ ಕಲಮು ೨ರ ವಿವರಣೆ : 'ಮೈಸೂರು ಸರ್ಕಾರ ಮದ್ರಾಸ್ ಸರ್ಕಾರದ ಪೂರ್ವ ಅನುಮತಿ ಇಲ್ಲದೆ ಅಥವಾ ನಿಯಮ ೪ರಲ್ಲಿ ಹೇಳಿರುವಂತೆ ನಿರ್ಧಾರವೊಂದನ್ನು ತೆಗೆದುಕೊಳ್ಳುವ ಮುನ್ನ ಯಾವುದೇ ಹದಿನೈದು ಮುಖ್ಯ ನದಿಗಳಿಗೆ ಅಡ್ಡಲಾಗಿ ಯಾವುದೇ ಜಲಾಶಯ ನಿರ್ಮಿಸುವಂತಿಲ್ಲ.'[೯]

ಕಲಮು ೩ರ ಪ್ರಕಾರ : 'ಈಗಾಗಲೇ ಪಡೆದುಕೊಂಡಿರುವ ನಿರ್ದಿಷ್ಟ ಹಾಗೂ ವಾಸ್ತವವಾಗಿರುವಂಥ ಹಕ್ಕುಗಳ ಮಿತಿಯನ್ನು ಹೊರತುಪಡಿಸಿ ಮದ್ರಾಸ್ ಸರ್ಕಾರ ಅನುಮತಿಯನ್ನು ನಿರಾಕರಿಸುವಂತಿಲ್ಲ ಪ್ರತಿಯೊಂದು ಪ್ರಕರಣವನ್ನು ಅದರ ಯುಕ್ತ ಮತ್ತು ನಿಯಮಗಳಿಗನುಸಾರವಾಗಿ ವಿಶ್ಲೇಷಿಸಿ ನಿರ್ಧಾರಕ್ಕೆ ಬರಬಹುದು ಎಂದು ಸೂಚಿಸಿದೆ.[೧೦]

ಹೀಗೆ ಕಾವೇರಿ ವಿವಾದವನ್ನು ನಿಖರವಾಗಿ ೧೮೯೨ ರಿಂದ ಗುರುತಿಸಬಹುದು. ಮೈಸೂರು ಸಂಸ್ಥಾನ ಯೋಜಿಸಿದ ಯೋಜನೆಗಳ ಬಗ್ಗೆ ಮದ್ರಾಸ್ ಸರ್ಕಾರ ವಿರೋಧಿಸಿತು. ಈ ಆಕ್ಷೇಪದ ಆಧಾರದಿಂದ ಮದ್ರಾಸ್ ಭಾಗದ ರೈತರು ಚೋಳರ ಕಾಲದಿಂದಲೇ ಕಾವೇರಿ ನದಿಯ ನೀರಿನ ಉಪಭೋಗದ ಹಕ್ಕು ಪಡೆದುಕೊಂಡಿದ್ದಾರೆ. ಚೋಳರು ತಂಜಾವೂರು ಮುಖಜ ಭೂಮಿಯಲ್ಲಿ ಅಂದು ಅದ್ಭುತವಾದ ನೀರಾವರಿ ಯೋಜನೆಗಳನ್ನು ರೂಪಿಸಿದ್ದರು. ಮದ್ರಾಸ್ ಸರ್ಕಾರವು ಮೈಸೂರು ಸರ್ಕಾರದ ಹೊಸ ನೀರಾವರಿ ಯೋಜನೆಗಳನ್ನು ರೂಪಿಸಿದರೆ ಮದ್ರಾಸ್ ಪ್ರಾಂತ್ಯದ ರೈತರ ಹಕ್ಕಿಗೆ ಚ್ಯುತಿ ಬರುವುದೆಂದು ವಾದಿಸಿತು.

## ಅನುಭೋಗದ ಹಕ್ಕು

ಮದ್ರಾಸ್ ಸರ್ಕಾರ ಮಂಡಿಸಿದ ಅನುಭೋಗದ ಹಕ್ಕಿಗೆ ಮೈಸೂರು ಸರ್ಕಾರದ ನಿಲುವು ಏನೆಂಬುದನ್ನು ಮೈಸೂರಿನ ದಿವಾನರು ರೆಸಿಡೆಂಟರಿಗೆ ಪತ್ರ ಬರೆದರು. ಅನುಭೋಗದ ಹಕ್ಕು ಕೇವಲ ಪುರಾತನ ಕಾಲದಿಂದ ಅನುಭವಿಸಿಕೊಂಡಿದ್ದರಷ್ಟೇ ಬರುವುದಿಲ್ಲ. ಮೈಸೂರು ಹಿಂದೆಂದೂ ಮಳೆಯ ನೀರನ್ನು ನೀರಾವರಿ ಉದ್ದೇಶಕ್ಕೆ ತನಗೆ ಬೇಕಾಗಿದ್ದಕ್ಕಿಂತ ಹೆಚ್ಚು ಶೇಖರಿಸಿರಲಿಲ್ಲ. ಎಲ್ಲಿಯವರೆಗೆ ರಾಜ್ಯಕ್ಕೆ ನೀರನ್ನು ಶೇಖರಿಸಲು ಅಸಾಧ್ಯವೋ ಅಥವಾ ಶೇಖರಿಸಲು ಅದು ಬಯಸಿರಲಿಲ್ಲವೋ, ಅಲ್ಲಿಯವರೆಗೆ ಅದು ಅಂಥಾ ಪ್ರಯತ್ನ ಮಾಡಿರಲಿಲ್ಲ. ನೀರನ್ನು ಶೇಖರಿಸುವ ಪ್ರಯತ್ನ ಎಲ್ಲಿಯವರೆಗೆ ರಾಜ್ಯಕ್ಕೆ ಅಸಾಧ್ಯವೊ, ಬಯಸುವುದಿಲ್ಲವೋ ಉಪಯೋಗಿಸುವ ರಾಜ್ಯಕ್ಕೆ ಅಲ್ಲಿಯವರೆಗೆ ನೀರನ್ನು ಉಪಯೋಗಿಸುವ ಹಕ್ಕು ಬರುತ್ತದೆ ಎಂದು ತಿಳಿಸಿತು.

## ಚಿರಭೋಗದ ಹಕ್ಕು

ಮದ್ರಾಸಿನ ನೀರಾವರಿ ಯೋಜನೆಗಳಿಗೆ ಪೂರೈಕೆಯಾಗಿ ಮಿಕ್ಕ ಅಥವಾ ಪೋಲಾಗಿ ಹರಿದು ಹೋಗುವ ನೀರಿನ ಮೇಲೆ ಚಿರಭೋಗದ ಹಕ್ಕನ್ನು ಮದ್ರಾಸ್ ಸ್ಥಾಪಿಸುವಂತಿಲ್ಲ. ಊಹಿಸಲಾಗದ ಅಥವಾ ಅಂದಾಜು ಮಾಡಲಾಗದ ವ್ಯರ್ಥವಾಗಿ ಹರಿಯುವ ನೀರನ್ನು ಅನುಭವಿಸುವುದು ಅಥವಾ ಉಪಯೋಗಿಸುವುದು ಚಿರಭೋಗದ ಹಕ್ಕಿನ ಸಾರ. ಚಿರಭೋಗದ ಹಕ್ಕಿನ ಬಗ್ಗೆ ಸಿ. ಜಿ. ಫೆನ್‌ವಿಕ್ ತಿಳಿಸುತ್ತಾ 'ಪುರಾತನ ಕಾಲದಿಂದ ಬಂದಿರುವ ಈ ಸಾರ್ವಭೌಮ ಹಕ್ಕಿನಿಂದಾಗಿ ಮೇಲ್ದಂಡೆ ನೀರಿನ ಮೇಲೆ ಪ್ರಭುತ್ವ ಸಾಧಿಸಿರುವ ಪ್ರದೇಶದ ರಾಜ್ಯಗಳು ನೀರನ್ನು ಕೆಳದಂಡೆ ಪ್ರದೇಶಗಳಿಗೆ ತಿರಿಗಿಸುವ ಹೊಣೆಯ ಬಗ್ಗೆಯೂ ಚಿಂತಿಸುವುದಿಲ್ಲ. ಇದರಿಂದ ನದಿಯ ಸಂಪೂರ್ಣ ನೀರಿನ ಹರಿಯುವಿಕೆಯಲ್ಲಿ ಕೆಳದಂಡೆ ರಾಜ್ಯಗಳಿಗೆ ಸಾಧ್ಯವಾಗುವುದೇ ಇಲ್ಲ'.

ವಿಚಿತ್ರ ಸಂಗತಿಯೆಂದರೆ, ೧೮೯೨ರ ಒಪ್ಪಂದದಲ್ಲಿ ಮೇಲ್ದಂಡೆ ನದಿತೀರದ ರಾಜ್ಯಗಳ ಮೇಲೆ ಕೆಳದಂಡೆ ನದಿತೀರದ ರಾಜ್ಯ ಅದು ತೊಂದರೆಯನ್ನು ಅನುಭವಿಸಿರಲಿ ಇಲ್ಲದಿರಲಿ ನಿಷೇಧಾಧಿಕಾರ ಚಲಾಯಿಸುವ ಹಕ್ಕು ನೀಡಿದೆ. ಮೈಸೂರು ಅಂದು ಇಂಥಾ ಒಪ್ಪಂದವನ್ನು ಒಪ್ಪಿಕೊಳ್ಳಲು ಕಾರಣ ಅದು ಬ್ರಿಟಿಷರ ಆಡಳಿತದ ಅಧೀನದಲ್ಲಿತ್ತು.

## ೧೯೨೪ರ ಒಪ್ಪಂದ

೧೯೦೯ರಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಕೃಷ್ಣರಾಜಸಾಗರ ಅಣೆಕಟ್ಟು ನಿರ್ಮಿಸುವ ಯೋಜನೆ ಮೈಸೂರು ರಾಜ್ಯದ ಮುಂದಿಟ್ಟಾಗ ೧೯೨೪ರ ಒಪ್ಪಂದಕ್ಕೆ ಕಾರಣವಾಯಿತು. ಇದರಿಂದ ತಂಜಾವೂರು ಮುಖಜಭೂಮಿಯ ನೀರಾವರಿ ಯೋಜನೆಗೆ ಧಕ್ಕೆ ಆಗುತ್ತದೆಂಬ ಕಾರಣದಿಂದ ಮದ್ರಾಸ್ ಸರ್ಕಾರ ಇದನ್ನು ವಿರೋಧಿಸಿತು. ೧೮೯೨ರ ಒಪ್ಪಂದದ ೪ನೇ ಕಲಮಿನಲ್ಲಿ ಸೂಚಿಸಿದಂತೆ ಅಂದು ನ್ಯಾಯಮಂಡಳಿಗೆ ಒಪ್ಪಿತವಾಗಿತ್ತು. ನಂತರ ನ್ಯಾಯಮಂಡಳಿ ಮೈಸೂರಿನ ಪರವಾಗಿ ತೀರ್ಪುನೀಡಿತು. ೧೮೯೨ರ ಒಪ್ಪಂದದಲ್ಲಿ ನ್ಯಾಯಮಂಡಳಿಯ ತೀರ್ಪಿನ ವಿರುದ್ಧ ಮನವಿ ಸಲ್ಲಿಸಲು ಅವಕಾಶವಿಲ್ಲದಿದ್ದರೂ, ಮದ್ರಾಸ್ ಸರ್ಕಾರ ಭಾರತದ ರಾಜ್ಯಕಾರ್ಯದರ್ಶಿಗೆ ಮನವಿ ಸಲ್ಲಿಸಿತು. ಹೀಗಾಗಿ ಮದ್ರಾಸ್ ಸರ್ಕಾರದೊಂದಿಗೆ ಹೊಸದಾಗಿ ಮಾತುಕತೆ ಆರಂಭಿಸಿ ಒಪ್ಪಂದಕ್ಕೆ ಬರಬೇಕೆಂದು ಬ್ರಿಟಿಷ್ ಸರ್ಕಾರ ಸೂಚಿಸಿತು. ತರುವಾಯ ಫೆಬ್ರವರಿ ೧೮, ೧೯೨೪ರಲ್ಲಿ ಹೊಸ ಒಪ್ಪಂದ ರೂಪುಗೊಂಡಿತು.

## ಒಪ್ಪಂದದ ಅಂಶಗಳು

ಮೈಸೂರು ಸರ್ಕಾರ ನಿರ್ದಿಷ್ಟಪಡಿಸಿದ ೧,೧೦,೦೦೦ ಎಕರೆ ಪ್ರದೇಶವನ್ನು ನೀರಾವರಿಗೊಳಪಡಿಸಬಹುದೆಂದು ತೀರ್ಮಾನಿಸಲಾಯಿತು. ಕಾವೇರಿ ಮತ್ತು ಅದರ ಉಪನದಿಗಳಿಗೆ ಜಲಾಶಯವನ್ನು ನಿರ್ಮಿಸುವುದರ ಮೂಲಕವೂ ನೀರಾವರಿಗೊಳಪಡಿಸಬಹುದಾಗಿತ್ತು. ಮದ್ರಾಸ್ ಸರ್ಕಾರ ಮೈಸೂರಿಗೆ ಕೃಷ್ಣರಾಜಸಾಗರ ಅಣೆಕಟ್ಟು ನಿರ್ಮಿಸಲು ಅನುಮತಿ ನೀಡಿತು. ೧೯೨೪ರ ಒಪ್ಪಂದವನ್ನು ಪುನರ್ವಿಮರ್ಶಿಸಲು

೧೯೭೪ರಲ್ಲಿ ಯೋಜಿಸಲಾಯಿತು. ಉಭಯ ಸರ್ಕಾರಗಳ ಮಧ್ಯೆ ಸರ್ಕಾರದ ಮಧ್ಯಸ್ತಿಕೆಯಿಂದ ವಿವಾದಕ್ಕೆ ಒಪ್ಪಂದ ಕಲ್ಪಿಸುವುದಾಗಿತ್ತು. ಮುಂದಿನ ೨೫ ವರ್ಷಗಳವರೆಗೆ ಈ ಒಪ್ಪಂದ ಅಬಾಧಿತವಾಗಿ ನಡೆದುಕೊಂಡು ಬಂತು.

೧೯೪೭ರ ವರೆಗೆ ಕಾವೇರಿ ಸಮಸ್ಯೆ ಬ್ರಿಟಿಷ್ ರೆಸಿಡೆಂಟ್‌ರ ಕೈಯಲ್ಲಿದ್ದು, ಅವರ ತೀರ್ಮಾನಕ್ಕೆ ಎರಡು ರಾಜ್ಯಗಳೂ ಬದ್ಧವಾಗಿದ್ದವು. ಸ್ವಾತಂತ್ರ್ಯಾನಂತರ ಈ ಸಮಸ್ಯೆ ದ್ವಿಗುಣಗೊಂಡಿತು. ಒಂದನೇ ಪಂಚವಾರ್ಷಿಕ ಯೋಜನೆಯಲ್ಲಿ ಮೆಟ್ಟೂರು ಅಣೆಕಟ್ಟೆಯಿಂದ ನೇರವಾಗಿ ನೀರನ್ನು ಪಡೆದುಕೊಳ್ಳುವ ಹೆಚ್ಚುವರಿ ಮಟ್ಟದ ಕಾಲುವೆಯನ್ನು ಸೇರಿಸಲಾಯಿತು.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಮತ್ತೆರಡು ಯೋಜನೆಗಳನ್ನು ಸೇರಿಸಲು ರೂಪಿಸಲಾಯಿತು. ಮದ್ರಾಸ್ ಸರ್ಕಾರವು ಹೊಸ ಯೋಜನೆಗಳನ್ನು ರೂಪಿಸುವುದಕ್ಕೆ ಮೈಸೂರು ಸರ್ಕಾರ ಆಕ್ಷೇಪಿಸಿತು. ಆದರೂ ಇದಕ್ಕೆ ವಿರುದ್ಧವಾಗಿ ತಮಿಳುನಾಡು ತನ್ನ ನೀರಾವರಿ ಪ್ರದೇಶದ ವ್ಯಾಪ್ತಿಯನ್ನು ಅನಿರ್ಬಂಧಿತವಾಗಿ ವಿಸ್ತರಿಸುತ್ತಲೇ ಹೋಯಿತು. ನೀರಿನ ಬಳಕೆ ಹಾಗೂ ವಿತರಣೆ ಅಸಮತೋಲನ ಸ್ವಾತಂತ್ರ್ಯಾನಂತರವೂ ಮುಂದುವರೆಯಿತು. ಐವತ್ತರ ದಶಕದಲ್ಲಿ ತಮಿಳುನಾಡು ಕೇಂದ್ರದಿಂದ ಅನೇಕ ನೀರಾವರಿ ಯೋಜನೆಗಳಿಗೆ ಮಂಜೂರು ಮಾಡಿಸಿಕೊಳ್ಳುವಲ್ಲಿ ಯಶಸ್ವಿಯಾಯಿತು. ಸಂವಿಧಾನ ಪೂರ್ವ ಒಪ್ಪಂದಗಳ ಆಧಾರದನ್ವಯ ಕರ್ನಾಟಕದ ಮೇಲೆ ನಿರ್ಬಂಧ ಹೇರಲು ತನ್ನ ಒತ್ತಾಯವನ್ನು ಸಾಧಿಸಿಕೊಂಡು ಬಂತು.

೧೯೨೪ರ ಒಪ್ಪಂದದ ಪ್ರಕಾರ ಮುಖ್ಯನದಿಗೆ ಅಡ್ಡಲಾಗಿ ಮದ್ರಾಸ್ ಸರ್ಕಾರ ಹೊಸ ಅಣೆಕಟ್ಟುಗಳನ್ನು ನಿರ್ಮಿಸುವಂತಿಲ್ಲ. ಮುಖ್ಯನದಿಯ ಜಲಾನಯನ ಪ್ರದೇಶದಲ್ಲಿ ೩,೦೧,೦೦೦ ಎಕರೆಗಿಂತ ಹೆಚ್ಚಿನ ಪ್ರದೇಶವನ್ನು ನೀರಾವರಿಗೊಳಪಡಿಸುವಂತಿಲ್ಲ ಎಂದು ಮೈಸೂರು ರಾಜ್ಯ ಅಭಿಪ್ರಾಯಿಸಿತು.

೧೯೨೪ರ ಒಪ್ಪಂದವನ್ನು ೧೯೭೪ರಲ್ಲಿ ಪುನರ್‌ವಿಮರ್ಶಿಸಬೇಕಿರುವುದರಿಂದ ನೀರಿನ ಹೊಸ ರೂಪದ ಬಳಕೆ, ಈಗಾಗಲೇ ಬಳಸುತ್ತಿರುವ ನೀರಿನ ವಿರುದ್ಧ ಪರಿಣಾಮದಿಂದ ಮದ್ರಾಸ್‌ಗಿರುವ ಚಿರಭೋಗದ ಹಕ್ಕಿಗೆ ಆದ್ಯತೆ ನೀಡಬಹುದೆಂಬ ಆತಂಕವನ್ನು ಮೈಸೂರು ಸರ್ಕಾರ ತಿಳಿಸಿತು. ರಾಜ್ಯಗಳ ಪುನರ್‌ವಿಂಗಡನೆಯ ಕಾಯ್ದೆ ೧೯೫೬ರ ಸೆಕ್ಷನ್ ೧೦೮ ರಲ್ಲಿ ಅವಕಾಶ ಕಲ್ಪಿಸಿತು. ನವೆಂಬರ್ ೧, ೧೯೫೭ರೊಳಗೆ ಕಾರ್ಯಗತವಾಗಬೇಕೆಂದೂ ಇದು ಅಭಿಪ್ರಾಯಪಟ್ಟಿತು. ೧೯೨೪ರ ಒಪ್ಪಂದಕ್ಕೆ ಪಕ್ಷವಾಗಿದ್ದರೂ ರಾಜ್ಯಗಳ ಪುನರ್ವಿಂಗಡನೆಯ ನಂತರ ಕೇರಳ ಕೂಡ ಕಾವೇರಿ ನದಿನೀರಿನ ಮೇಲೆ ಹಕ್ಕು ಸ್ಥಾಪಿಸಲು ಯತ್ನಿಸಿತು.

೧೯೨೪ರ ಒಪ್ಪಂದ ೧೯೭೪ಕ್ಕೆ ತನ್ನ ವಾಯಿದೆ ಕಳೆದುಕೊಂಡಿತು. ಅಂದಿನಿಂದ ವಿವಾದಕ್ಕೊಳಗಾದ ರಾಜ್ಯಗಳ ಮನವೊಲಿಸಿ, ಸಂಧಾನಕ್ಕೆ ತರಲು ಕೇಂದ್ರ ಸರ್ಕಾರ ಪ್ರಯತ್ನಿಸಿತು. ಕಾವೇರಿ ಜಲಾನಯನ ಪ್ರದೇಶದ ಅಭಿವೃದ್ಧಿ ಮತ್ತು ವಿವಾದಗಳ ಪರಿಹಾರಕ್ಕಾಗಿ ಕಾವೇರಿ ಕಣಿವೆ ಪ್ರಾಧಿಕಾರವೊಂದನ್ನು ರೂಪಿಸಲು ಎಲ್ಲ ರಾಜ್ಯಗಳೂ ಹೆಚ್ಚು ಕಡಿಮೆ ಒಪ್ಪಿಕೊಂಡಿದ್ದವು. ಪ್ರಾಧಿಕಾರ ಸ್ಥಾಪನೆ ಆಗಲೇ ಇಲ್ಲ.

೧೯೭೬ರ ಬರಗಾಲದ ಸಂದರ್ಭದಲ್ಲಿ ಕಾವೇರಿ ನದಿನೀರನ್ನು ಹಾಗೂ ಉಳಿದ ಕಾಲದಲ್ಲಿ ದೊರೆಯುವ ಹೆಚ್ಚುವರಿ ನೀರನ್ನು ತಮ್ಮ ನಡುವೆ ಹಂಚಿಕೊಳ್ಳಲು ಸಮಿತಿಯೊಂದನ್ನು ರೂಪಿಸಲು ಸಂಬಂಧಿಸಿದ ರಾಜ್ಯಗಳು ಒಪ್ಪಿಕೊಂಡವು. ಇದರ ಪ್ರಕಾರ ನೀರಾವರಿಗೊಳಪಡುವ ಪ್ರದೇಶಗಳ ಬೇಡಿಕೆ, ನೀರಿನ ಪ್ರಮಾಣ, ಹೊಸದಾಗಿ ನೀರಾವರಿ ಮಾಡಲು ಯೋಜಿಸಿದ ಪ್ರದೇಶ, ಜಲಾಶಯದ ಸಂಯುಕ್ತ ಕಾರ್ಯಾಚರಣೆ ಹಾಗೂ ನೀರು ಬಿಡುಗಡೆಯ ಮಾದರಿ ತಮಿಳುನಾಡಿನ ಪಾಂಡಿಚೇರಿ ಹಾಗೂ ಕರ್ನಾಟಕಕ್ಕಾಗಿ ನೀರು ಸಂಗ್ರಹದ ಪ್ರಗತಿಯನ್ನು ಗಮನದಲ್ಲಿಟ್ಟುಕೊಂಡು ಸದ್ಯ ಇರುವ ಅಚ್ಚುಕಟ್ಟು ಪ್ರದೇಶ, ಹೊಸ ಪ್ರದೇಶಗಳ ರಕ್ಷಣೆಯ ಹಿನ್ನೆಲೆಯಲ್ಲಿ ಉತ್ತಮ ನೀರಿನ ಪೂರೈಕೆ, ಕಷ್ಟ ಕಾಲದಲ್ಲಿ ಅಚ್ಚುಕಟ್ಟು ಮತ್ತು ಹೊಸ ಪ್ರದೇಶಗಳಿಗೆ ಅನ್ಯಾಯವಾಗದಂತೆ ಸಮಾನ ನೀರು ಹಂಚಲು ಸಾಧ್ಯವಾಗುವ ಸೂತ್ರವೊಂದನ್ನು ಶಿಫಾರಸ್ಸು ಮಾಡಲು ಹಾಗೂ ಮುಂದಿನ ಉಪಯೋಗಕ್ಕಾಗಿ ಲಭ್ಯವಿರುವ ನೀರಿನ ಅವಲಂಬಿಸಬಹುದಾದ ಹೆಚ್ಚಳವನ್ನು ನಿರ್ಧರಿಸುವ ಯೋಜನೆಯಿತ್ತು.

೧೯೭೧ರ ವರೆಗೆ ಕಾವೇರಿ ನೀರು ತಮಿಳುನಾಡಿನಲ್ಲಿ ೨೮.೨ ಲಕ್ಷ ಎಕರೆಗೆ ನೀರಾವರಿಗೊಳಪಟ್ಟಿದೆ. ಅದೇ ರೀತಿ ಕರ್ನಾಟಕದಲ್ಲಿ ೬.೮ ಲಕ್ಷ ಎಕರೆ ಪ್ರದೇಶಕ್ಕೆ ನೀರು ಹರಿಯುತ್ತದೆ. ಕರ್ನಾಟಕದ ಕೃಷ್ಣರಾಜಸಾಗರ ಅಣೆಕಟ್ಟಿನ ನೀರು ಸಂಗ್ರಹದ ಪ್ರಮಾಣ ೪೫ ಟಿ.ಎಂ.ಸಿ. ಮಾತ್ರವಿದೆ. ತಮಿಳುನಾಡಿನ ಮೆಟ್ಟೂರು ಜಲಾಶಯದ ನೀರು ಸಂಗ್ರಹಣ ಪ್ರಮಾಣ ೯೫ ಟಿ.ಎಂ.ಸಿ.ಯಷ್ಟಿದೆ. ಇದಕ್ಕೆಲ್ಲ ಮೂಲಕಾರಣ ೧೯೨೪ರಲ್ಲಿ ಮೈಸೂರು ಮಹಾರಾಜರು ಮದ್ರಾಸ್ ಪ್ರಾಂತ್ಯದ ನಡುವೆ ನಡೆದ ಒಪ್ಪಂದದ ಅನುಕೂಲವನ್ನು ತಮಿಳುನಾಡು ಇಂದಿಗೂ ಮುಂದುವರೆಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು.

ಜಲವಿದ್ಯುತ್ ಉತ್ಪಾದನೆಗೂ ಸಹ ಅನ್ಯಾಯವಾಗಿದೆ. ೧೯೦೫ರಲ್ಲಿ ೪೫ ಮೆಗಾವಾಟ್ ಸಾಮರ್ಥ್ಯದ ಶಿವನಸಮುದ್ರ ಜಲವಿದ್ಯುತ್ ಯೋಜನೆಯನ್ನು ಪ್ರಾರಂಭಿಸಲಾಯಿತು. ಇದಾದನಂತರ ೧೯೪೩ರಲ್ಲಿ ೧೭ ಮೆಗಾವಾಟ್ ಸಾಮರ್ಥ್ಯದ ಶಿಂಷಾ ಜಲವಿದ್ಯುತ್ ಯೋಜನೆಯನ್ನು ಸ್ಥಾಪಿಸಲಾಯಿತು. ತಮಿಳುನಾಡಿನ ತೀವ್ರ ಪ್ರತಿರೋಧದ ಪರಿಣಾಮವಾಗಿ ಈ ಎರಡೂ ಜಲವಿದ್ಯುತ್ ಯೋಜನೆಗಳ ನಂತರ ಕಾವೇರಿ ನದಿಯ ಪಾತ್ರದಲ್ಲಿ ಕರ್ನಾಟಕ ಯಾವುದೇ ಜಲವಿದ್ಯುತ್ ಯೋಜನೆ ಸ್ಥಾಪಿಸಲು ಸಾಧ್ಯವಾಗಲೇ ಇಲ್ಲ. ಆದರೆ ೧೯೦೮ ರಿಂದ ಇಲ್ಲಿಯವರೆಗೆ ಕಾವೇರಿ ನದಿಯ ಪಾತ್ರದಲ್ಲಿ ಒಟ್ಟು ೧೨೦೦ ಮೆಗಾವಾಟ್ ಸಾಮರ್ಥ್ಯದ ಜಲವಿದ್ಯುತ್ ಯೋಜನೆಗಳ ಪ್ರಯೋಜನೆ ಪಡೆಯಲಾಯಿತು. ಹೀಗೆ ಜನಸಂಖ್ಯೆ ಬೆಳೆದಂತೆ ನೀರಿನ ಮತ್ತು ವಿದ್ಯುತ್ತಿನ ಬೇಡಿಕೆಯೂ ಹೆಚ್ಚುತ್ತಲೇ ಹೋಗುತ್ತದೆ.

೧೯೭೧ರಲ್ಲಿ ಅಂತರ್‌ರಾಜ್ಯ ನದಿನೀರು ಕಾಯ್ದೆ ೧೯೫೬ ರಂತೆ ಈ ವಿವಾದವನ್ನು ನ್ಯಾಯಮಂಡಳಿಗೊಪ್ಪಿಸುವಂತೆ ಕೇಂದ್ರ ಸರ್ಕಾರ ಆದೇಶ ನೀಡಲು, ಆದೇಶ ಮನವಿಯನ್ನು (೩೦೩ ಹಾಗೂ ೩೦೪ನ್ನು) ಭಾರತದ ಉಚ್ಚನ್ಯಾಯಾಲಯಕ್ಕೆ ಸಲ್ಲಿಸಲಾಯಿತು. ೧೯೭೫

ಜುಲೈ ೨೪ ರಂದು ದೇಶದಲ್ಲಿ ತುರ್ತು ಪರಿಸ್ಥಿತಿ ಘೋಷಣೆಯಾದ ಕಾರಣ ಅವುಗಳನ್ನು ಹಿಂದಕ್ಕೆ ಪಡೆಯಲಾಯಿತು. ಇದಕ್ಕೆ ತಮಿಳುನಾಡು ತನ್ನ ವ್ಯಾಜ್ಯವನ್ನು ಹಿಂದಕ್ಕೆ ಪಡೆಯಿತು. ಈ ಮಧ್ಯೆ 'ಇರಿಗೇಷನ್ ಕಮಿಷನ್ ೧೯೭೨' ಮತ್ತು ಅಗ್ರಿಕಲ್ಚರ್ ಕಮಿಷನ್ ೧೯೭೬ರಲ್ಲಿ ಅಸ್ತಿತ್ವಕ್ಕೆ ಬಂದಾಗ ಕಾವೇರಿ ನದಿನೀರು ವಿವಾದ ಬಗೆಹರಿಸಿಕೊಳ್ಳುವ ನಿಟ್ಟಿನಲ್ಲಿ ಜಾಗೃತಿ ಮೂಡಿಬಂತು.

೧೯೮೩ ನವೆಂಬರ್ ೧೮ ರಂದು ಕಾವೇರಿ ಜಲಾನಯನ ಪ್ರದೇಶದ ತಮಿಳುನಾಡು ಕೃಷಿಕರ ನೀರಾವರಿ ಹಾಗೂ ಕೃಷಿ ಹಕ್ಕು ಸಂರಕ್ಷಣಾ ಸಂಘ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿ ಕೇಂದ್ರ ಸರ್ಕಾರ, ತಮಿಳುನಾಡು ಹಾಗೂ ಕರ್ನಾಟಕ ಸರ್ಕಾರವನ್ನು ಪ್ರತಿವಾದಿಗಳನ್ನಾಗಿ ಮಾಡಿತು. ಈ ಮನವಿಯಲ್ಲಿ ಕಾವೇರಿ ನದಿಯ ಕೆಳದಂಡೆ ಪ್ರದೇಶದಲ್ಲಿ ಕೃಷಿ ಮಾಡಿಕೊಂಡು ಬಂದಿರುವ ಇವರು ಮೆಟ್ಟೂರು ಜಲಾಶಯಕ್ಕೆ ಹರಿದು ಹೋಗುತ್ತಿರುವ ನೀರಿನ ಪ್ರಮಾಣ, ಕರ್ನಾಟಕ ಮತ್ತು ಅದರ ಉಪನದಿಗಳಿಗೆ ಅಡ್ಡಲಾಗಿ ಅಣೆಕಟ್ಟುಗಳ ನಿರ್ಮಾಣದಿಂದಾಗಿ ಕಡಿಮೆಯಾಗುತ್ತಿದೆ ಎಂದು ದೂರಿದರು. ಇಲ್ಲಿಯವರೆಗೂ ಮೈಸೂರು ಮತ್ತು ಮದ್ರಾಸ್ ರಾಜ್ಯಗಳ ನಡುವಿನ ೧೮೯೨ ಮತ್ತು ೧೯೨೪ರ ಒಪ್ಪಂದದಂತೆ ನೀರು ಹಂಚಿಕೆಯಾಗುತ್ತಿತ್ತು. ಎರಡೂ ರಾಜ್ಯಗಳ ನಡುವೆ ದ್ವಿಪಕ್ಷೀಯ ಮತ್ತು ಪರಸ್ಪರ ಮಾತುಕತೆ ನಡೆದರೂ ಸಮಸ್ಯೆ ಪರಿಹಾರವಾಗದೆ ಮನವಿಯಲ್ಲಿಯೇ ಉಳಿಯಿತೆಂದು ಹೇಳಿದೆ.

ಈ ಮನವಿಯ ಸಾಧ್ಯತೆ ಮತ್ತು ಪೋಷಣಾ ಯೋಗ್ಯತೆಯನ್ನು ವಿರೋಧಿಸಿ ಕರ್ನಾಟಕ ಸರ್ಕಾರ ಅಫಿಡೆವಿಟ್ ಸಲ್ಲಿಸಿತು. ಭಾರತ ಸರ್ಕಾರ ಹಾಗೂ ಜಲಸಂಪನ್ಮೂಲ ಮಂತ್ರಾಲಯಗಳೂ ಕೂಡ ಅಂತರ್‌ರಾಜ್ಯ ನದಿನೀರುವಿವಾದ ಕಾಯ್ದೆ ೧೯೫೬ ಸೆಕ್ಷನ್ ೧೧ನ್ನು ಆಧರಿಸಿ ತಮಿಳುನಾಡು ರೈತರ ಮನವಿಯನ್ನು ವಿರೋಧಿಸಿತು. ಮೇಲಿನ ಅಂಶಗಳಿಗೆ ಯಾವುದೇ ನ್ಯಾಯಾಲಯ ವಿಚಾರಣೆ ನಡೆಸುವ ಅಧಿಕಾರ ಹೊಂದಿಲ್ಲವೆಂದು ತಿಳಿಸಿತು. ಅಂತರ್ ರಾಜ್ಯ ನದಿನೀರು ವಿವಾದ ಕಾಯ್ದೆ ೧೯೫೬ ಸೆಕ್ಷನ್ ೪ ರ ಪ್ರಕಾರ ಕಾನೂನುಬದ್ಧ ಕರ್ತವ್ಯವನ್ನು ಪೂರ್ತಿ ಮಾಡಲು ವಿವಾದದ ನ್ಯಾಯ ನಿರ್ಣಯಕ್ಕಾಗಿ ನ್ಯಾಯ ಮಂಡಳಿಯನ್ನು ಸ್ಥಾಪಿಸಲು ಕೇಂದ್ರ ಸರ್ಕಾರಕ್ಕೆ ಸೂಚಿಸಿತು. ೧೯೫೬ ಸೆಕ್ಷನ್ ೫ ರಲ್ಲಿ ನೀಡಿರುವ ಅಧಿಕಾರದ ಆಧಾರದಿಂದ ಜುಲೈ ೨, ೧೯೯೦ ರಂದು ಅಧಿಸೂಚನೆಯನ್ನು ಹೊರಡಿಸಿ 'ಕಾವೇರಿ ನೀರು ವಿವಾದ ನ್ಯಾಯಮಂಡಳಿ'ಯನ್ನು ರಚಿಸಿತು.

ತಮಿಳುನಾಡು ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿ ಮೇ ಮತ್ತು ಸೆಪ್ಟೆಂಬರ್ ೧೯೯೦ರಲ್ಲಿ ಮನವಿಗಳನ್ನು ಸಲ್ಲಿಸಿ, ಮೇ ೩೦, ೧೯೭೨ ರಲ್ಲಿ ಬಳಸುತ್ತಿದ್ದುದಕ್ಕಿಂತ ಹೆಚ್ಚಿನ ನೀರನ್ನು ಪರಿಬದ್ಧಗೊಳಿಸದಿರುವಂತೆ ಕರ್ನಾಟಕ ಸರ್ಕಾರಕ್ಕೆ ಸೂಚನೆ ನೀಡುವಂತೆ ಕೋರಿದರು.[೪೦] ನ್ಯಾಯಮಂಡಳಿ ಅಂತಿಮ ತೀರ್ಪು ನೀಡುವವರೆಗೆ[೪೧] ೭೦ ಟಿ.ಎಂ.ಸಿ. ನೀರನ್ನು ತಮಿಳುನಾಡಿಗೆ ಬಿಡುವಂತೆ ಆ ಸರ್ಕಾರ ಕರ್ನಾಟಕವನ್ನು ಕೋರಿತು. ಮೇಲಿನ ೩ ಮನವಿಗಳನ್ನು ಪ್ರಶ್ನಿಸಿದ ಕರ್ನಾಟಕ ಮತ್ತು ಕೇರಳ ಸರ್ಕಾರಗಳು ಈ ಮನವಿಗಳನ್ನು ಪುರಸ್ಕರಿಸಲು ನ್ಯಾಯ ಮಂಡಳಿಗೆ ಯಾವುದೇ ಹಕ್ಕಿಲ್ಲ ಅಥವಾ ಮಧ್ಯಂತರ ಪರಿಹಾರ ನೀಡುವುದು ಸಾಧ್ಯವಿಲ್ಲ ಎಂದವು.

ಕಾವೇರಿ ನ್ಯಾಯಮಂಡಳಿ ಸುಗಮವಾಗಿ ಕೆಲಸ ನಿರ್ವಹಿಸುವ ಆರಂಭದಲ್ಲಿಯೇ ಅನೇಕ ಅಡೆತಡೆಗಳುಂಟಾದವು. ಹೀಗೆ ಜನವರಿ ೫, ೧೯೯೧ರಲ್ಲಿ ತಮ್ಮ ಮನವಿಗಳು ತಿರಸ್ಕೃತವಾದ ನಂತರ ತಮಿಳುನಾಡು ಮತ್ತು ಪಾಂಡಿಚೇರಿ ಸರ್ಕಾರಗಳು ಕಾವೇರಿವಿವಾದ ನ್ಯಾಯ ಮಂಡಳಿಯ ಆಜ್ಞೆಯನ್ನು ಪ್ರಶ್ನಿಸಿ, ಉಚ್ಚನ್ಯಾಯಾಲಯಕ್ಕೆ ವಿಶೇಷ ಮನವಿ ಸಲ್ಲಿಸಿದವು. ಜನವರಿ ೧೮, ೧೯೯೧ ರಂದು ವಿವಾದ ವಿಚಾರಣೆ ನಡೆಸಿದ ನ್ಯಾಯಾಲಯ ತನ್ನ ಮಿತಿಯೊಳಗೆ ಬರುವುದಿಲ್ಲವೆಂದು ತಿಳಿಸಿತು.

ಏಪ್ರಿಲ್ ೨೬, ೧೯೯೧ರಲ್ಲಿ ನೀಡಿದ ತೀರ್ಪಿನಲ್ಲಿ ಮನವಿಗಳನ್ನು ಪುರಸ್ಕರಿಸಿದ್ದೇ ಅಲ್ಲದೆ, ನ್ಯಾಯ ಮಂಡಳಿ ಜನವರಿ ೫, ೧೯೯೧ರಲ್ಲಿ ನೀಡಿದ ಆಜ್ಞೆಯನ್ನು ಬದಿಗಿರಿಸಿ, ತಮಿಳುನಾಡು ಮತ್ತು ಕೇರಳ ಸರ್ಕಾರಗಳ ಮನವಿಯನ್ನು ಅದರ ಅಂತರ್ಗತ ಯೋಗ್ಯತೆಯ ಆಧಾರದ ಮೇಲೆ ತೀರ್ಮಾನ ಕೈಗೊಳ್ಳುವಂತೆ ಸೂಚಿಸಿತು.

ಜೂನ್ ೨೫, ೧೯೯೧ ರಂದು ತಮಿಳುನಾಡು ಮತ್ತು ಪಾಂಡಿಚೇರಿ ಸರ್ಕಾರಗಳ ಮಧ್ಯಂತರ ಪರಿಹಾರಕ್ಕಾಗಿ ಮಾಡಿದ ಮನವಿಯನ್ನು ಆಧರಿಸಿ, ಕಾವೇರಿ ನದಿನೀರು ವಿವಾದ ನ್ಯಾಯಮಂಡಳಿ ಎರಡನೇ ಆದೇಶ ನೀಡಿತು. ಆ ಪ್ರಕಾರ ಮೆಟ್ಟೂರು ಜಲಾಶಯಕ್ಕೆ ೨೦೫ ಟಿ.ಎಂ.ಸಿ, ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿಗೆ ೬ ಟಿ.ಎಂ.ಸಿ. ನೀರನ್ನು ಬಿಡುವಂತೆ ತೀರ್ಮಾನಿಸಿತು.

ಜುಲೈ ೨೫, ೧೯೯೧ ರಂದು ಕರ್ನಾಟಕದ ರಾಜ್ಯಪಾಲರು, 'ಕರ್ನಾಟಕ ಕಾವೇರಿ ಜಲಾನಯನ ಪ್ರದೇಶ ನೀರಾವರಿ ರಕ್ಷಣಾ ಸುಗ್ರೀವಾಜ್ಞೆ ೧೯೯೧'ನ್ನೂ ಹೊರಡಿಸಿದರು. ಕಾವೇರಿನದಿ ಮತ್ತದರ ಉಪನದಿಗಳ ನೀರಾವರಿಗೊಳಪಟ್ಟ ಹಾಗೂ ಒಳಪಡುವ ಪ್ರದೇಶಗಳಿಗೆ ರಕ್ಷಣೆ ನೀಡುವ ಸುಗ್ರೀವಾಜ್ಞೆ ಇದಾಗಿದೆ. ಈ ಸುಗ್ರೀವಾಜ್ಞೆಯ ಮೂಲಕ ಕರ್ನಾಟಕ ಕಾವೇರಿನದಿ ನೀರಿನ ನೀರಾವರಿಯನ್ನು ರಕ್ಷಿಸುವುದು ಹಾಗೂ ನಿರ್ವಹಿಸುವುದರ ಹಕ್ಕನ್ನು ಪಡೆದುಕೊಂಡಿತು.

ಜುಲೈ ೨೭, ೧೯೯೧ ರಂದು ರಾಷ್ಟ್ರಾಧ್ಯಕ್ಷರು ಸಂವಿಧಾನದ ಅನುಚ್ಛೇದ ೧೪೩ ರಡಿ ಕಾವೇರಿ ಜಲವಿವಾದದ ಮೂರು ಪ್ರಶ್ನೆಗಳಿಗೆ ಅಭಿಪ್ರಾಯ ಬಯಸಿ ಉಚ್ಚನ್ಯಾಯಾಲಯಕ್ಕೆ ಕಳುಹಿಸಿದರು ಅವುಗಳೆಂದರೆ :

೧. ಕರ್ನಾಟಕ ರಾಜ್ಯ ಹೊರಡಿಸಿದ ಸುಗ್ರೀವಾಜ್ಞೆ ಮತ್ತು ಅದರ ಉಪಬಂಧಗಳು ಸಂವಿಧಾನಕ್ಕೆ ಅನುಸಾರವಾಗಿದೆಯೇ?

೨. ಅ) ನ್ಯಾಯ ಮಂಡಳಿಯ ಆದೇಶ, ಅಂತರ ರಾಜ್ಯ ನದಿನೀರು ವಿವಾದ ಕಾಯ್ದೆಯ ಸೆಕ್ಷನ್ ೫(೧೧)ರಲ್ಲಿ ವಿವರಿಸಿದ ಅರ್ಥದಲ್ಲಿ ವರದಿಯಾಗಿದೆಯೆ ಹಾಗೂ ನಿರ್ಧಾರಗಳನ್ನು ಒಳಗೊಂಡಿದೆಯೆ?

ಆ) ನ್ಯಾಯ ಮಂಡಳಿಯ ಆದೇಶ ಜಾರಿಗೆ ಬರುವಂತೆ ಮಾಡಲೂ ಕೇಂದ್ರ ಸರ್ಕಾರ ಅದನ್ನು ಪ್ರಕಟಿಸುವ ಅಗತ್ಯವಿದೆಯೇ?

೩. ಕಾಯ್ದೆಯಡಿ ಅಸ್ತಿತ್ವಕ್ಕೆ ಬಂದ ನದಿನೀರು ವಿವಾದ ನ್ಯಾಯಮಂಡಳಿಗೆ ವಿವಾದಕ್ಕೊಳಗಾದ ಪಕ್ಷಗಳಿಗೆ ಮಧ್ಯಂತರ ಪರಿಹಾರ ನೀಡುವ ಅಧಿಕಾರವಿದೆಯೆ ಎಂದು ಸೂಚಿಸಿತ್ತು.

ಕರ್ನಾಟಕ ಸರ್ಕಾರ ಹೊರಡಿಸಿದ ಸುಗ್ರೀವಾಜ್ಞೆಯು ಸಂವಿಧಾನದ ಅಧಿಕಾರಾತೀತವಾದದ್ದು. ಇದರ ಅಧಿಕಾರದೊಳಗೆ ನ್ಯಾಯಮಂಡಳಿಯ ಕಾರ್ಯನಿರ್ವಹಣೆಯನ್ನು ಮಧ್ಯ ಪ್ರವೇಶಿಸಿದಂತಾಗಿದೆ. ತಮಿಳುನಾಡು ಮತ್ತು ಪಾಂಡಿಚೇರಿ ಪ್ರದೇಶಗಳಿಗೆ ಹರಿಯುವ ನೀರಿನ ಮೇಲೆ ಸುಗ್ರೀವಾಜ್ಞೆ ರಾಜ್ಯಕ್ಷೇತ್ರಾತೀತ ಪರಿಣಾಮವನ್ನುಂಟು ಮಾಡುತ್ತದೆ ಎಂದು ಸುಪ್ರೀಂಕೋರ್ಟ್ ಅಭಿಪ್ರಾಯಪಟ್ಟಿತು.

ಅಂತರ್ ರಾಜ್ಯ ನದಿನೀರು ವಿವಾದ ೧೯೫೬ರ ಸೆಕ್ಷನ್ ೫(೧೧)ರ ಪ್ರಕಾರ ಜೂನ್ ೨೫, ೧೯೯೧ರ ತನ್ನ ಆದೇಶ ಮತ್ತು ವರದಿಯನ್ನು ವಿವರಿಸಿದೆ. ಮಧ್ಯಂತರ ಪರಿಹಾರದ ಬಗ್ಗೆ ಕೇಂದ್ರ ಸರ್ಕಾರ ಸೂಚನೆ ನೀಡಿದಾಗ ನದಿನೀರು ವಿವಾದ ಬಗ್ಗೆ ನ್ಯಾಯ ಮಂಡಳಿಗೆ ಯಾವುದೇ ಮಧ್ಯಂತರ ಪರಿಹಾರ ನೀಡುವ ಅಧಿಕಾರವಿಲ್ಲ ಎಂದು ವಿರೋಧ ಪಕ್ಷಗಳು ಅಭಿಪ್ರಾಯಪಟ್ಟವು.

ಕೇಂದ್ರ ಜಲ ಸಂಪನ್ಮೂಲ ಖಾತೆ ಸಚಿವ ವಿ. ಸಿ. ಶುಕ್ಲಾ ಡಿಸೆಂಬರ್ ೧೨, ೧೯೯೧ ರಂದು ಸಂಸತ್‌ನಲ್ಲಿ ಸ್ವತಃ ಕಾವೇರಿ ನದಿನೀರು ವಿವಾದ ನ್ಯಾಯಮಂಡಳಿ ನೀಡಿದ ಮಧ್ಯಂತರ ಆಜ್ಞೆಯನ್ನು ಕೇಂದ್ರ ಸರ್ಕಾರದ ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸಿದರು. ೧೯೯೧-೯೨ರಲ್ಲಿ ಸಂಭವಿಸಿದ ಕಾವೇರಿ ದೊಂಬಿಗಳಿಂದ ಮುಖ್ಯಮಂತ್ರಿ ಪದವಿಗೆ ಎಸ್. ಬಂಗಾರಪ್ಪ ರಾಜೀನಾಮೆ ನೀಡಿದ್ದು ಸ್ಮರಣೀಯ.

೧೯೯೧ ಹಾಗೂ ೧೯೯೨ ರಲ್ಲಿ ತಮಿಳುನಾಡು ಮತ್ತು ಕರ್ನಾಟಕದ ನಡುವೆ ಕಾವೇರಿ ನೀರಿನ ಹಂಚಿಕೆಗೆ ಸಂಬಂಧಿಸಿದಂತೆ ವಿವಾದ ಉಂಟಾದಾಗ ಕೆಲವರ ಆಸ್ತಿಪಾಸ್ತಿಗೆ ಅಪಾರ ನಷ್ಟ ಉಂಟಾಯಿತು. 'ಕಾವೇರಿ ನದಿನೀರಿನ ಹಂಚಿಕೆಗೆ ಸಂಬಂಧಿಸಿದಂತೆ ತಲೆದೋರಿದ ಗಲಭೆಯಲ್ಲಿ ನೊಂದವರಿಗೆ ಪರಿಹಾರ ನೀಡಲು ಪ್ರಾಧಿಕಾರವನ್ನು ರಚಿಸಲಾಗಿದ್ದು, ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಎಸ್. ಅನಂತಮೂರ್ತಿ ಪರಿಹಾರ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾರೆ. ರಾಜ್ಯ ಸರ್ಕಾರ ರಚಿಸಿರುವ ಪ್ರಾಧಿಕಾರಕ್ಕೆ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಎನ್. ಎಸ್. ಸಂಗೊಳ್ಳಿ ಹಾಗೂ ಜೆ. ಚಂದ್ರಶೇಖರಯ್ಯ ಅವರುಗಳು ಸದಸ್ಯರಾಗಿದ್ದಾರೆ. ಸುಪ್ರೀಂ ಕೋರ್ಟ್‌ನ ಆದೇಶದಂತೆ ಪರಿಹಾರ ಪ್ರಾಧಿಕಾರ ರಚಿಸಿ, ಒಂದು ವರ್ಷದೊಳಗೆ ವರದಿಸಲ್ಲಿಸುವಂತೆ ತಿಳಿಸಿದೆ.'[೪೨] ೧೯೯೧ರ ಡಿಸೆಂಬರ್ ಮತ್ತು ೧೯೯೨ರ ಜನವರಿಯಲ್ಲಿ ಸಂಭವಿಸಿದ ದೊಂಬಿಯಲ್ಲಿ ಬಂಧಿತರಾದ ವ್ಯಕ್ತಿಗಳನ್ನು ವಿಚಾರಣೆ ನಡೆಸುವಂತೆ ೧೫-೪-೯೯ ರಂದು ಆದೇಶವಾಗಿದೆ. ಅದರಂತೆ ೧೪-೫-೯೯ ರಂದು ದೊಂಬಿಗಳ ಪರಿಹಾರ ಪ್ರಾಧಿಕಾರ ರಚಿಸಿದೆ. ೧೪-೭-೧೯೯೯ರ ಒಳಗೆ ಕರ್ನಾಟಕ ಸರ್ಕಾರ ನಷ್ಟ ಪರಿಹಾರ ಬಗ್ಗೆ ಅರ್ಜಿಗಳನ್ನು ಆಹ್ವಾನಿಸಿದೆ.[೪೩] ಹೀಗೆ ಕಾವೇರಿ ಜಲವಿವಾದ ತನ್ನ ಸ್ವರೂಪವನ್ನು ಪರಿವರ್ತಿಸಿಕೊಳ್ಳುತ್ತದೆಯೇ ಹೊರತು ಮುಕ್ತಾಯ ಹಂತ ತಲುಪಿಲ್ಲ.

ಈ ಮಧ್ಯೆ ೧೯೯೭ ಏಪ್ರಿಲ್ ೯ ರಂದು ಸುಪ್ರೀಂ ಕೋರ್ಟ್ ಹಾಲಿ ವಿವಾದವನ್ನು ನಿರ್ದಿಷ್ಟ ಅವಧಿಯಲ್ಲಿ ಮಾತುಕತೆಯ ಮೂಲಕ ಬಗೆಹರಿಸಲು ಸೂಚಿಸಿತು. ಹಿಂದೆಯೇ ಪಿ. ವಿ. ನರಸಿಂಹರಾವ್ ಪ್ರಧಾನಿಯಾಗಿದ್ದ ಸಂದರ್ಭದಲ್ಲಿ ಕರ್ನಾಟಕ, ಕೇರಳ ಮತ್ತು ತಮಿಳುನಾಡುಗಳ ನಡುವೆ ಒಪ್ಪಂದಕ್ಕೆ ಯೋಜಿಸಿತ್ತು.

೧೯೯೮ರಲ್ಲಿ ಪ್ರಧಾನಿ ಅಟಲ್‌ಬಿಹಾರಿವಾಜಪೇಯಿ ಅವರ ನೇತೃತ್ವದಲ್ಲಿ ನಡೆದ ಸಭೆಯಲ್ಲಿ ಕಾವೇರಿ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ, ತಮಿಳುನಾಡು, ಕೇರಳ ಮತ್ತು ಪಾಂಡಿಚೇರಿ ರಾಜ್ಯಗಳ ನಾಲ್ಕು ಜನ ಮುಖ್ಯಮಂತ್ರಿಗಳು ಪ್ರಧಾನಿಗಳ ಐತಿಹಾಸಿಕ ತೀರ್ಪಿಗೆ ಬದ್ಧರಾಗಿದ್ದರು!

ಮೇಲಿನಂತೆ ಕಾವೇರಿ ಜಲವಿವಾದ ಕುರಿತು ಆಗಿರುವ ಅನೇಕ ಒಪ್ಪಂದಗಳನ್ನು ಗಮನಿಸಿದಾಗ ಇತ್ತೀಚೆಗೆ ಯಾವೊಂದು ಒಪ್ಪಂದವು ಎರಡು ರಾಜ್ಯಗಳಿಗೆ ಸಮಾನ ತೃಪ್ತಿ ಕೊಟ್ಟಿಲ್ಲ. ಹೀಗಾಗಿ ಮಧ್ಯಂತರ ಆದೇಶದ ತೀರ್ಪನ್ನು ಕರ್ನಾಟಕ ವಿರೋಧಿಸಿದೆ. ಇದರ ಪ್ರಕಾರ ಪ್ರತಿವಾರ ಅಥವಾ ತಿಂಗಳು ಕರ್ನಾಟಕ ಮೆಟ್ಟೂರು ಜಲಾಶಯಕ್ಕೆ ನಿಗದಿತ ಪ್ರಮಾಣದ ನೀರನ್ನು ಬಿಡಬೇಕು. ಆ ನೀರು ಸದಾ ೨೦೫ ಟಿ.ಎಂ.ಸಿ. ಜಲಾಶಯದಲ್ಲಿರಬೇಕು. ಇದು ಕರ್ನಾಟಕಕ್ಕೆ ನುಂಗಲಾರದ ತುತ್ತಾಯಿತು. ಒಟ್ಟು ಕಾವೇರಿ ಕಣಿವೆಯ ನೀರಿನ ಸಾಮರ್ಥ್ಯ ೬೬೪ ಟಿ.ಎಂ.ಸಿ. ಇದರಲ್ಲಿ ತಮಿಳುನಾಡು, ಕೇರಳ, ಪುದುಚೇರಿಗೆ ೨೧೨ ಟಿ.ಎಂ.ಸಿ. ನೀರು ಹೋಗುತ್ತದೆ. ಉಳಿದ ೧೨೨ ಟಿ.ಎಂ.ಸಿ. ನೀರು ಕರ್ನಾಟಕ ಬಳಸಿಕೊಳ್ಳಬೇಕಾದ ಅಸಹಾಯಕತೆ (ಅನಿವಾರ್ಯತೆ) ಇದೆ. ಇಂತಹ ಅನೇಕ ಸಮಸ್ಯೆ, ಷರತ್ತುಗಳ ನಡುವೆ ಈ ವಿವಾದ ಕುರಿತ ಚಳವಳಿಗೆ ಕೊನೆಯೆ ಇಲ್ಲದಂತಾಗಿದ್ದು, ಕಾವೇರಿ ನ್ಯಾಯ ಮಂಡಳಿ ತನ್ನ ಕಾರ್ಯ ಚಟುವಟಿಕೆಗಳನ್ನು ಮುಂದುವರೆಸುತ್ತಿದೆ.

### ೫:೨. ತುಂಗಭದ್ರಾ ಜಲಾಶಯಕ್ಕಾಗಿ ಚಳವಳಿ

ತುಂಗಭದ್ರಾ ನದಿನೀರಿನ ವಿವಾದವು ಏಕೀಕರಣದ ಸಂದರ್ಭದಲ್ಲಿ ಬಹುದೊಡ್ಡ ಸಮಸ್ಯೆಯಾಗಿತ್ತು. ಅಂದು (೧೮೦೦-೧೯೫೩) ಬಳ್ಳಾರಿ ಪ್ರದೇಶ ಬ್ರಿಟಿಷರ ಆಳ್ವಿಕೆಗೊಳಗಾಗಿ, ಮದ್ರಾಸ್ ಅಧಿಪತ್ಯದಲ್ಲಿತ್ತು. ಈಗಿನ ಬಳ್ಳಾರಿ, ಅನಂತಪುರ, ಕರ್ನೂಲು ಮತ್ತು ಕಡಪಾ ಜಿಲ್ಲೆಗಳನ್ನು ಸೇರಿಸಿ ದತ್ತಿಮಂಡಲವೆಂದು ಕರೆಯುತ್ತಿದ್ದರು. ಈ ಪ್ರದೇಶಗಳಿಗೆ ನೀರಾವರಿ ಸೌಲಭ್ಯವನ್ನು ಒದಗಿಸಲು ಬ್ರಿಟಿಷರು ಅಣೆಕಟ್ಟು ಕಟ್ಟಲು ನಿರ್ಧರಿಸಿದರು. ಈ ಮೂಲಕ ಕರ್ನಾಟಕದ ರಾಯಚೂರು, ಬಳ್ಳಾರಿ ಮತ್ತು ಆಂಧ್ರದ ಕರ್ನೂಲು, ಕಡಪಾ, ಅನಂತಪುರ ಈ ಜಿಲ್ಲೆಗಳನ್ನು ಬಹು ಹಿಂದಿನ ಕಾಲದಿಂದ ಕಾಡುತ್ತಿದ್ದ ಬರಗಾಲದಿಂದ ಪರಿವರ್ತಿಸಬೇಕಾಗಿತ್ತು. ಅದಕ್ಕೆ ಮದ್ರಾಸ್ ಮತ್ತು ಹೈದರಾಬಾದ್ ನಿಜಾಮ ಸರ್ಕಾರಗಳ ಜಂಟಿ ಪ್ರಯತ್ನದಿಂದ ೧೯೪೫ರಲ್ಲಿ ತುಂಗಭದ್ರಾ ಯೋಜನೆಯನ್ನು ಆರಂಭಿಸಲಾಯಿತು. ೧೯೫೩ರಲ್ಲಿ ರಾಜ್ಯಗಳ ವಿಂಗಡಣೆಯಿಂದಾಗಿ ಆಂಧ್ರಪ್ರದೇಶ ಮತ್ತು ಮೈಸೂರು ರಾಜ್ಯಗಳ ನಡುವೆ ವಿವಾದ ಏರ್ಪಟ್ಟಿತು. ಈ ವಿವಾದವನ್ನು ಗಡಿಸಮಸ್ಯೆ ಮತ್ತು ಭಾಷಾ ಸಮಸ್ಯೆಯ ಹಿನ್ನಲೆಯಿಂದ ಅವಲೋಕಿಸಬಹುದು.

ಮೊದಲು ಬಳ್ಳಾರಿ ಜಿಲ್ಲೆಯಲ್ಲಿದ್ದ ಆಲೂರು, ಆದೋನಿ ಮತ್ತು ರಾಯದುರ್ಗ ತಾಲೂಕುಗಳು ಏಕೀಕರಣದ ನಂತರ ಆಂಧ್ರಕ್ಕೆ ಸೇರಿದವು. ಆಗ ಜನ ಪ್ರತಿನಿಧಿಗಳು ಹೋರಾಟ ಮಾಡುವಲ್ಲಿ ನಿರತರಾದರು. ಕೊನೆಗೆ ೧೯೫೨ರಲ್ಲಿ ಚುನಾವಣೆಗಳು ನಡೆದು ಬಳ್ಳಾರಿಯಲ್ಲಿ ತೆಲುಗರೆ ಜಯಗಳಿಸಿದಾಗ ಹೋರಾಟ ಉಗ್ರ ಸ್ವರೂಪಕ್ಕೆ ತಿರುಗಿತು. ಈ ಸಮಸ್ಯೆ ಪರಿಹರಿಸಲು ವಾಂಛೂ ಕಮಿಟಿ ರಚನೆಯಾಗುತ್ತದೆ. ವಾಂಛೂ ಅವರು ಬಳ್ಳಾರಿ

ಪರಿಸ್ಥಿತಿಯನ್ನು ಸಮಗ್ರವಾಗಿ ಅರಿತು ವರದಿ ಸಿದ್ಧಪಡಿಸಿದರು. ಬಳ್ಳಾರಿಯ ಮೂರು ತಾಲೂಕುಗಳು ಆಂಧ್ರಕ್ಕೆ ಸೇರಬೇಕೆಂದಾಗ ಕನ್ನಡಿಗರು ವಿರೋಧಿಸಿದರು. ಆ ಸಮಯಕ್ಕೆ 'ಹೈದರಾಬಾದ್ ಮತ್ತು ಮದ್ರಾಸ್ ಸರ್ಕಾರಗಳು ಸಂಯುಕ್ತವಾಗಿ ಕೈಗೊಂಡಿದ್ದ ತುಂಗಭದ್ರಾ ಅಣೆಕಟ್ಟಿನ ಮುಗಿಯಬೇಕಾದ ಕೆಲಸ, ಅದರ ಬಳಕೆಯ ಪಾಲು ಇತ್ಯಾದಿಗಳ ಬಗೆಗೂ ವಾಂಛೂ ಅವರು ಸ್ಪಷ್ಟವಾದ ತೀರ್ಪು ಕೊಡಲಾಗಲಿಲ್ಲ.[೪೪] ಆಗ ಕರ್ನಾಟಕ ಪ್ರಾಂತ ನಿರ್ಮಾಣವಾಗುವವರೆಗೆ ಬಳ್ಳಾರಿಯನ್ನು ಆಂಧ್ರದೊಡನೆ ಸೇರಿಸುವ ನಿರ್ಧಾರವನ್ನು ಕನ್ನಡಿಗರು ಪ್ರಬಲವಾಗಿ ವಿರೋಧಿಸಿದರು. ಈ ವಾಂಛೂ ವರದಿಯ ಪ್ರಕಾರ ಬಳ್ಳಾರಿಯನ್ನು ಆಂಧ್ರ ಅಥವಾ ಕರ್ನಾಟಕಕ್ಕೆ ಸೇರಿಸುವಾಗ ಒಂದೇ ಘಟಕವೆಂದು ಹೇಳುವಂತಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ತೆಲುಗರೇ ಅಧಿಕವಾಗಿದ್ದರು. ಆಲೂರು, ಆದೋನಿ ಮತ್ತು ರಾಯದುರ್ಗ ತಾಲೂಕುಗಳು ಆಂಧ್ರಕ್ಕೆ ಸೇರಿದವು. ಹರಪನಹಳ್ಳಿ, ಹಡಗಲಿ, ಹೊಸಪೇಟೆ, ಕೂಡ್ಲಿಗಿ, ಸೊಂಡೂರು ಮತ್ತು ಸಿರುಗುಪ್ಪ ತಾಲೂಕುಗಳು ಮೈಸೂರು ರಾಜ್ಯದಲ್ಲಿದ್ದವು.

### ಅಣೆಕಟ್ಟಿನ ವಿವಾದ : ಮಿಶ್ರ ಆಯೋಗ

ತುಂಗಭದ್ರಾ ಅಣೆಕಟ್ಟಿನ ಸಮಸ್ಯೆ ಪರಿಹರಿಸಲು ರಾಷ್ಟ್ರಪತಿಗಳು ಹೈದರಾಬಾದ್‌ನ ಮುಖ್ಯ ನ್ಯಾಯಾಧೀಶ ಎಲ್. ಎಸ್. ಮಿಶ್ರಾ ನೇತೃತ್ವದಲ್ಲಿ ಆಯೋಗ ರಚಿಸಲು ಸೂಚಿಸಿದರು. ೨೧-೪-೫೩ ರಂದು ಆಜ್ಞೆಯಾಯಿತು. ಅದರಂತೆ ೨೩-೪-೫೩ ರಲ್ಲಿ ಆರಂಭಿಸಿ ೧೫-೫-೫೩ ರೊಳಗೆ ವರದಿಸಲ್ಲಿಸಬೇಕೆಂದು ಸೂಚಿಸಲಾಯಿತು. ೧೯-೪-೫೩ ರಂದು ಹುಬ್ಬಳ್ಳಿಯಲ್ಲಿ ಕೆ.ಪಿ.ಸಿ.ಸಿ. ವಿಶೇಷ ಸಭೆ ನಡೆದಾಗ ಈ ಕುರಿತು ಗಂಭೀರವಾದ ಚರ್ಚೆಗಳು ನೆಡದವು. ಅದರಲ್ಲಿ ಎಸ್. ಗೋಪಾಲಗೌಡರು, ಬಿ. ವಿ. ಕಕ್ಕಿಲಾಯ ಮುಂತಾದವರು ಭಾಗವಹಿಸಿ ಅಖಂಡ ಕರ್ನಾಟಕ ಪ್ರಾಂತ ರಚನೆಗೆ ಮುಂದಾದರು.

೨೭-೪-೫೩ ರಂದು ಬಳ್ಳಾರಿಯಲ್ಲಿ ಎಲ್. ಎಸ್. ಮಿಶ್ರಾ ಕಚೇರಿ ತೆರೆದು ವಿಚಾರಣೆ ಆರಂಭಿಸಿದರು. ಬಳ್ಳಾರಿ ತಾಲೂಕಿನ ಸಮಸ್ಯೆ ಬಗ್ಗೆ ಮನವಿಗಳು ಬಂದವು. ಹೈದರಾಬಾದಿನಲ್ಲಿ ಬಳ್ಳಾರಿ ಬಗ್ಗೆ ಇದ್ದ ದಾಖಲೆಗಳು ಪರಿಶೀಲಿಸಿದರು. ಬಳ್ಳಾರಿ ತಾಲೂಕು ಕರ್ನಾಟಕದಲ್ಲಿರಬೇಕೆಂದು ಕೊನೆಗೆ ಮಿಶ್ರಾ ವರದಿ ಸ್ಪಷ್ಟಪಡಿಸಿತು.

### ವರದಿ ಸ್ವೀಕಾರ

೨೦-೫-೧೯೫೩ರಲ್ಲಿ ಎಲ್. ಎಸ್. ಮಿಶ್ರಾ ವರದಿಯನ್ನು ಲೋಕಸಭೆಯು ಸ್ವೀಕರಿಸಿದಾಗ ಬಳ್ಳಾರಿ ಜನ ಸಂತೋಷಪಟ್ಟರು. ಆಂಧ್ರದವರು ಇದನ್ನು ಪ್ರಬಲವಾಗಿ ವಿರೋಧಿಸಿ ಚಳವಳಿ ನಡೆಸಲು ಯತ್ನಿಸಿದರು. ೧೯೫೩ ಆಗಸ್ಟ್ ೧೩ ರಂದು ಆಂಧ್ರ ಪ್ರಾಂತ ಮಸೂದೆ ಲೋಕಸಭೆಯಲ್ಲಿ ಪ್ರಸ್ತಾಪಿತವಾಯಿತಲ್ಲದೆ, ಅಲ್ಲಿಗೆ ಬಳ್ಳಾರಿ ಗಡಿಸಮಸ್ಯೆ ಸ್ವಲ್ಪ ಮಟ್ಟಿಗೆ ಬಗೆಹರಿದಂತಾಯಿತು.

ಬಳ್ಳಾರಿ ಮೈಸೂರು ರಾಜ್ಯಕ್ಕೆ ಸೇರಿದಾಗ ತುಂಗಭದ್ರಾ ವಿವಾದ ಹಾಗೆಯೇ ಉಳಿಯಿತು. ಆಂಧ್ರ ರಾಜ್ಯ ರಚನೆಗೆ ಬಹು ಸಮಸ್ಯಾತ್ಮಕವಾಗಿದ್ದುದು ತುಂಗಭದ್ರಾ

ಯೋಜನೆ. ಮದ್ರಾಸ್ ಮತ್ತು ಹೈದರಾಬಾದ್ ಸರ್ಕಾರಗಳು ಜಂಟಿಯಾಗಿ ಆರಂಭಿಸಿದ ಯೋಜನೆ ಇದಾಗಿದ್ದು, ಆಂಧ್ರ ರಾಜ್ಯ ರಚನೆಯ ಸಂದರ್ಭದಲ್ಲಿ ಅದು ಅಪೂರ್ಣವಾಗಿತ್ತು. ತುಂಗಭದ್ರಾ ಅಣೆಕಟ್ಟು ಬಳ್ಳಾರಿ ಜಿಲ್ಲೆಯಲ್ಲಿದ್ದು ಮೈಸೂರಿಗೆ ಸೇರಿ ಹೋಯಿತು. ರಾಯಲ ಸೀಮೆಗೆ ಅನುಕೂಲವಾಗಲೆಂದು ಆರಂಭವಾದ ಯೋಜನೆಯ ಉಳಿದ ಕೆಲಸದ ನಿರ್ಮಾಣವನ್ನು ಯಾವ ರಾಜ್ಯದವರು ಪೂರ್ಣಗೊಳಿಸಬೇಕೆಂಬುದು ಸಮಸ್ಯೆಯಾಗಿತ್ತು.[೪೫]

ತುಂಗಭದ್ರಾ ಅಣೆಕಟ್ಟಿನಿಂದ ಆಂಧ್ರಕ್ಕೆ ಹೆಚ್ಚಿನ ಸೌಲಭ್ಯ ಇದ್ದು, ಆಂಧ್ರ - ಮೈಸೂರು ರಾಜ್ಯಗಳು ಸೌಹಾರ್ದ ಒಪ್ಪಂದಕ್ಕೆ ಬಾರದಿದ್ದರೆ, ರಾಷ್ಟ್ರಪತಿಗಳೇ ತೀರ್ಮಾನಿಸುತ್ತಾರೆಂದು ಗೃಹಮಂತ್ರಿ ಕಾಟ್ಜು ಹೇಳಿದ್ದರು. ತೆಲುಗರ ಪರವಾಗಿ ಡಾ|| ಲಂಕಾ ಸುಂದರಂ, ರಾಘವಚಾರಿ, ರಘುರಾಮಯ್ಯ ಇದ್ದರು. ಕನ್ನಡಿಗರ ಪರವಾಗಿ ಅಳವಂಡಿ ಶಿವಮೂರ್ತಿ ಸ್ವಾಮಿ, ಎಸ್. ನಿಜಲಿಂಗಪ್ಪ, ಟಿ. ಸುಬ್ರಹ್ಮಣ್ಯಂ, ಸ್ವಾಮಿ ರಮಾನಂದ ತೀರ್ಥ, ಎಂ. ಎಸ್. ಗುರುಪಾದಸ್ವಾಮಿ ಚರ್ಚಿಸಿದರು. ನಂತರ ೧-೧೦-೧೯೫೩ರಲ್ಲಿ ಮೈಸೂರಿನೊಡನೆ ಬಳ್ಳಾರಿ ವಿಲೀನವಾದಾಗ, ಬಳ್ಳಾರಿ ಸುತ್ತ ಮುತ್ತ ತೆಲುಗರು ಭಯಾನಕ ಗಲಭೆಗಳನ್ನು ನಡೆಸಿದರು.

ಈ ಹಿಂದೆ ಸೆಪ್ಟೆಂಬರ್ ೬ರಂದೇ ಬಳ್ಳಾರಿಯ ಸ್ಟೇಡಿಯಂನಲ್ಲಿ ಮುಖ್ಯಮಂತ್ರಿ ಕೆ. ಹನುಮಂತಯ್ಯ ಗಲಭೆಗೆ ಕಾರಣರಾದ ಆಂಧ್ರ ಪರವಾದಿಗಳನ್ನು ಸ್ನೇಹ ಸೌಹಾರ್ದದಿಂದಿರಲು ಹೇಳಿದ್ದರು. ಅವರು ಮಿಶ್ರಾ ತೀರ್ಪು ಇತ್ಯರ್ಥವಾಗಿದೆ ಎಂದಾಗ ಇನ್ನಷ್ಟು ಘಟನೆಗಳು ಸಂಭವಿಸಿದ್ದನ್ನು ಸ್ಮರಿಸಬಹುದು.

ರಾಷ್ಟ್ರೀಯ ಪುನರ್ವಿಂಗಡಣೆ ಆಯೋಗ ಶಿಫಾರ್ಸುಗಳಲ್ಲಿ 'ಹಾಲಿ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ ತಾಲೂಕುಗಳು ಮತ್ತು ತುಂಗಭದ್ರಾ ಅಣೆಕಟ್ಟಿರುವ ಮಲ್ಲಾಪುರ ಉಪತಾಲ್ಲೂಕಿನ ಸ್ವಲ್ಪ ಭಾಗಗಳನ್ನು ಬಿಟ್ಟು ಈಗ ಇರುವ ಮೈಸೂರು ರಾಜ್ಯ ಕರ್ನಾಟಕರಾಜ್ಯ ರಚನೆಯಲ್ಲಿ ಸೇರಲು ೧೦-೧೦-೫೫ ರಂದು ಫಜಲ್ ಅಲಿ ಆಯೋಗ ತೀರ್ಮಾನಿಸಿತು.'[೪೬]

೧೧-೧೦-೫೫ ರಿಂದಲೇ ಬಳ್ಳಾರಿಯಲ್ಲಿ ರಾಜ್ಯ ಪುನರ್ವಿಂಗಡನಾ ಆಯೋಗದ ವರದಿಯ ವಿರುದ್ಧ ಚಟುವಟಿಕೆ ಚುರುಕಾಗಿ ಆರಂಭವಾಯಿತು. ಆಯೋಗದ ತೀರ್ಮಾನವನ್ನು ಜಿಲ್ಲೆ ಸಂಪೂರ್ಣವಾಗಿ ವಿರೋಧಿಸಿ ತಿರಸ್ಕರಿಸಿತು. ಹಳ್ಳಿಗಾಡಿನಲ್ಲಿ ಹರತಾಳ, ಸತ್ಯಾಗ್ರಹ ಮುಂತಾದ ಕಾರ್ಯಕ್ರಮಗಳು ನಡೆದವು. ೧೬-೧೦-೫೫ ರಂದು ಹುಬ್ಬಳ್ಳಿಯಲ್ಲಿ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸಭೆ ನಡೆದಾಗ ಭಾರತ ಸರ್ಕಾರವು ೧೫ರೊಳಗೆ ಮಿಶ್ರಾ ವರದಿಯನ್ನು ಅಂತಿಮವೆಂದು ಒಪ್ಪಿಕೊಳ್ಳಲು ಒತ್ತಾಯಿಸಿತ್ತು. ಈ ಸಭೆಗೆ ೧೬೦ಕ್ಕು ಹೆಚ್ಚು ಪ್ರತಿನಿಧಿಗಳು ಬಂದಿದ್ದರು. ಬಳ್ಳಾರಿ ಜಿಲ್ಲಾ ಕ್ರಿಯಾ ಸಮಿತಿಯ ಅಧ್ಯಕ್ಷ ಜೆ. ಗಾದಿಲಿಂಗಪ್ಪ ಅವರು ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕದಲ್ಲಿ ಉಳಿಸಲು ಕನ್ನಡಿಗರೆಲ್ಲ ಹೋರಾಡಬೇಕೆಂದು ಕರೆ ನೀಡಿದರು.

ಮಿಶ್ರಾ ತೀರ್ಪನ್ನು ಒಪ್ಪಿ, ೧೬-೧೦-೫೫ ರವರಿಗೆ ಗಡುವು ಕೊಟ್ಟಿದ್ದ ಪರಿಷತ್ತು, ನವೆಂಬರ್ ೧೦ನೇ ತಾರೀಖು ಹಂಪಿಯಲ್ಲಿ ಸಭೆ ನಡೆಸಿ ಚಳವಳಿಯ ವಿಧಿ-ವಿಧಾನಗಳ ಬಗ್ಗೆ ಚರ್ಚಿಸಿದರು. 'ತುಂಗಭದ್ರಾ ಜಲಾಶಯವೇ ಹೊಸದಾಗಿ ಸೃಷ್ಟಿತವಾದ ಸಮಸ್ಯೆಗೆ

ಕಾರಣವಾದ್ದರಿಂದ, ತುಂಗಭದ್ರಾ ಬೋರ್ಡಿಗೆ ಮೊದಲೇ ಸೂಚನೆ ನೀಡಿ ಮೈಸೂರು ರಾಜ್ಯದಲ್ಲಿ ಉಳಿಯುವ ಬಳ್ಳಾರಿ ಜಿಲ್ಲೆಯ ಜನರು ಆಜ್ಞೆಯ ಉಲ್ಲಂಘನೆ ಮಾಡಿ, ತಮ್ಮ ಪ್ರದೇಶಕ್ಕೆ ನೀರನ್ನು ಬಳಸಿಕೊಳ್ಳಲು ಚಳವಳಿ ಮಾಡಬೇಕೆಂದು ತೀರ್ಮಾನಿಸಿದರು.'[೪೭]

## ನೀರಿನ ಸತ್ಯಾಗ್ರಹ

ತಮ್ಮ ಎಲ್ಲ ಪ್ರಯತ್ನಗಳು ವಿಫಲವಾದಾಗ ಅಖಿಲ ಕರ್ನಾಟಕ ರಾಜ್ಯನಿರ್ಮಾಣ ಪರಿಷತ್ತಿನವರು ಶಾಂತಿ ಮತ್ತು ಅಹಿಂಸೆ ಮೂಲಕ ಸತ್ಯಾಗ್ರಹ ಆರಂಭಿಸಲು ಸಿದ್ಧರಾದರು. ಸಿರುಗುಪ್ಪ ತಾಲೂಕು ಕೊಂಚಿಗೇರಿಯಲ್ಲಿ ಯರ್ರಿತಾತ ನೇತೃತ್ವದ ೫೮ ಜನರ ತಂಡವು ದಿನಾಂಕ. ೧೬-೧೧-೫೫ರ ಬೆಳಗ್ಗೆ ೯ ಗಂಟೆಗೆ ನೀರಿನ ಸತ್ಯಾಗ್ರಹ ಆರಂಭಿಸಿತು. ಆಗ 'ಬ್ಯಾಂಡ್, ಕೊಂಬು, ಕಹಳೆ ಮುಂತಾದ ವಾದ್ಯಗಳೊಡನೆ ತ್ರಿವರ್ಣ ಧ್ವಜ ಹಿಡಿದು ಮೆರವಣಿಗೆಯಲ್ಲಿ ಬಂದ ಸತ್ಯಾಗ್ರಹಿಗಳನ್ನು ದಾರಿಯುದ್ದಕ್ಕೂ ಹೆಣ್ಣು ಮಕ್ಕಳು ಆರತಿ ಎತ್ತಿ ಬೀಳ್ಕೊಡುತ್ತಿದ್ದರು. ಸತ್ಯಾಗ್ರಹಿಗಳು ನಿರ್ಧಾರಿತ ಸ್ಥಳಕ್ಕೆ ಬಂದು ತಮ್ಮ ಕೊಡಗಳಲ್ಲಿ ಹರಿಯುತ್ತಿದ್ದ ತುಂಗಭದ್ರೆಯ ನೀರನ್ನು ತುಂಬಿಕೊಂಡು ಕಾನೂನನ್ನು ಉಲ್ಲಂಘಿಸಿ, ಬಂಧನಕ್ಕೆ ಅಣಿಯಾದರು.'[೪೮] ನೀರಿನ ಸತ್ಯಾಗ್ರಹದಲ್ಲಿ ಬಂಧಿತರಾದವರನ್ನು ಕೋರ್ಟಿಗೆ ಹಾಜರುಪಡಿಸಿದರು. ೧೬-೧೧-೫೫ ರಿಂದ ೩೦-೧೧-೫೫ ಕ್ಕೆ ೧೫ ತಂಡಗಳಲ್ಲಿ ೫೪೨ ಜನರು ಬಂಧಿತರಾಗಿದ್ದರು. ಇದರ ನಾಯಕತ್ವವನ್ನು ಸತ್ಯವಂತರಾಯರು ವಹಿಸಿದ್ದರು. ನೀರಿನ ಸತ್ಯಾಗ್ರಹ ನಿಲ್ಲದೆ ೮-೧೨-೫೫ರ ವೇಳೆಗೆ ಜರುಗಿ ೧೨೦೦ ಜನ ಬಂಧಿತರಾದರು. ಈ ಜನರ ಶಿಸ್ತು, ಪಾಲನೆಗಳು ಉತ್ತಮವಾಗಿದ್ದು ಎಲ್ಲರಿಗೂ ಹಿಡಿಸಿತು. ವೃದ್ಧ ಮಹಿಳೆಯರು, ಬಡವ-ಬಲ್ಲಿದರೆನ್ನದೆ ಎಲ್ಲರೂ ಭಾಗವಹಿಸಿದ್ದರು.

ನೀರಿನ ಸತ್ಯಾಗ್ರಹಕ್ಕೆ ಸಂಬಂಧಿಸಿದಂತೆ ಒಂದು ರೋಚಕವಾದ ಘಟನೆ ನಡೆಯುತ್ತದೆ. ಅದೇನೆಂದರೆ : 'ಅನಂತಪುರ ಜಿಲ್ಲೆಯ ಗುತ್ತಿ ತಾಲೂಕಿನ ಪಾಲ್ತೂರು ಗ್ರಾಮದ ಸತ್ಯಾಗ್ರಹಿ ದಂಡಾ ಚೆನ್ನಬಸಪ್ಪನವರು ಒಂದು ಶಿಫಾರ್ಸಿನ ಪ್ರತಿಭಟನಾರ್ಥವಾಗಿ ಕಾಲುವೆಯ ಮೂರು ಹಿಡಿ ಮಣ್ಣನ್ನು ಆ ಕಡೆ ಹಾಕಿ ಪಕ್ಕದ ಹೊಲಕ್ಕೆ ಮೂರು ಬೊಗಸೆ ನೀರು ಸುರಿದದ್ದನ್ನು ಅಪರಾಧವೆಂದು ಪರಿಗಣಿಸಿ ನಮ್ಮ ಪ್ರಭುತ್ವ ೧೮ ದಿನ ಸೆರೆಯಲ್ಲಿಟ್ಟಿದೆ. ಈಗಾಗಲೇ ಲೋಕಸಭೆ ಅಂಗೀಕರಿಸಿ ರಾಷ್ಟ್ರಪತಿಗಳ ಒಪ್ಪಿಗೆಯ ಮುದ್ರೆ ಬಿದ್ದಿರುವ ಶಾಸನವನ್ನೇ ಬದಲಿಸಿದ ಆಯೋಗದ ಸದಸ್ಯರಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕು ಅವರನ್ನೇಕೆ ವಿಚಾರಣೆಗೆ ಗುರಿಪಡಿಸಬಾರದು' ಎಂದು ವಾದಿಸಿದರು.[೪೯] ಈ ದಂಡಾ ಚೆನ್ನಬಸಪ್ಪನವರಿಗೆ ನ್ಯಾಯಾಧೀಶರು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದೇಕೆಂದು ಕೇಳಿದಾಗ 'ಕರ್ನಾಟಕದ ಎಲ್ಲೆ ಬಳ್ಳಾರಿ ಜಿಲ್ಲೆಗೇ ಮುಗಿಯುವುದಿಲ್ಲ, ನಾನು ಆಂಧ್ರದಲ್ಲಿದ್ದರೂ ಕನ್ನಡಿಗನೇ'. ಕರ್ನಾಟಕದ ಹಿತರಕ್ಷಣೆ ನನ್ನ ಹೊಣೆ ಎನ್ನುತ್ತಾನೆ. ೧೯೫೫ರ ಸೆಪ್ಟೆಂಬರ್‌ನಲ್ಲಿ ಎಸ್. ಗೋಪಾಲಗೌಡರು ಮತ್ತು ನವೆಂಬರ್ ತಿಂಗಳಲ್ಲಿ ಮುಖ್ಯಮಂತ್ರಿ ಹನುಮಂತಯ್ಯನವರು ಒಂದಾದ ಕನ್ನಡಿಗರನ್ನು ಅಭಿನಂದಿಸಿದರು. ೧೯೫೬ ನವೆಂಬರ್ ೧ ರಂದು ಅಸ್ತಿತ್ವಕ್ಕೆ ಬಂದ ವಿಶಾಲ ಮೈಸೂರು ಇಂತಹ ಅನೇಕ ಸಮಸ್ಯೆಗಳನ್ನು ನಿವಾರಿಸಿತು. ದಿ: ೧-೧೧-೫೬ ರಂದು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಹಂಪಿಯಲ್ಲೂ ಒಂದು ಅವಿಸ್ಮರಣೀಯ ಕಾರ್ಯಕ್ರಮ ನಡೆಯಿತು. ಕರ್ನಾಟಕ ಕುಲಪುರೋಹಿತರಾದ ಆಲೂರ ವೆಂಕಟರಾಯರ ನೇತೃತ್ವದ

ಮೂಲಕ ಪಂಪಾ ವಿರೂಪಾಕ್ಷನ ಸನ್ನಿಧಿಯಲ್ಲಿ ರಾಜ್ಯೋತ್ಸವ ಕಾರ್ಯಕ್ರಮವಿತ್ತು. ಇದಕ್ಕೆ ಎಲ್ಲ ಭಾಗಗಳ ಪ್ರತಿನಿಧಿಗಳು ನೀರನ್ನು ಮಣ್ಣನ್ನು ತಂದು ಭಾಗವಹಿಸಿ, ಪೂಜೆ ಕಾರ್ಯಗಳನ್ನು ನಡೆಸಿದರು. ಬಹು ದಿನಗಳ ಕನಸು-ನನಸಿನ ಸ್ಫುರಣೆ ಈ ಘಟನೆಯಲ್ಲಿ ಕಂಡುಬಂದಿತ್ತು.

ತುಂಗಭದ್ರಾ ಯೋಜನೆಯಿಂದ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ೩.೬೩ ಲಕ್ಷ ಹೆಕ್ಟೇರು ಭೂಮಿಗೆ ನೀರಾವರಿ ಸೌಲಭ್ಯವಾಗಲಿದೆ. ಅಚ್ಚುಕಟ್ಟಿನ ಅಭಿವೃದ್ಧಿಗಾಗಿ ೧೧-೧೨-೧೯೭೯ ರಂದು ತುಂಗಭದ್ರಾ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ ಆರಂಭವಾಯಿತು.[೫೦]

ಮದ್ರಾಸ್ ಮತ್ತು ನಿಜಾಮ ಸರ್ಕಾರಗಳ ಜಂಟಿಯೋಜನೆಯಿಂದ ೧೯೪೫ರಲ್ಲಿ ಆರಂಭವಾಗಿ ೧೯೫೩ರಲ್ಲಿ ಮುಗಿದ ತುಂಗಭದ್ರಾ ಯೋಜನೆಯು, ೧೯೫೬ರಲ್ಲಿ ಆಂಧ್ರ ಪ್ರದೇಶ, ಕರ್ನಾಟಕ ರಾಜ್ಯಗಳ ಜಂಟಿ ಯೋಜನೆಯಾಯಿತು. ಆಗ ೧೩೩ ದಶಲಕ್ಷ ಘನ ಅಡಿ ನೀರು ಸಂಗ್ರಹವಿತ್ತು. ೧೯೮೫ರಲ್ಲಿ ೧೧೫.೬೧ ಸಹಸ್ರ ದಶಲಕ್ಷ ಘನ ಅಡಿ ನೀರು ಇದ್ದು, ೫-೨೩ ಲಕ್ಷ ಹೆಕ್ಟೇರ್ ಭೂಮಿಗೆ ನೀರಾವರಿಯ ಅನುಕೂಲವಿತ್ತು.

ಈ ಜಲಾಶಯ ಆರಂಭದಲ್ಲಿ ೧೩೩ ಟಿ.ಎಂ.ಸಿ. ನೀರು ಸಂಗ್ರಹ ಸಾಮರ್ಥ್ಯ ಹೊಂದಿದ್ದು, ೧೯೮೬ರಲ್ಲಿ ೧೧೧ ಟಿ.ಎಂ.ಸಿ.ಗೆ ಇಳಿದಿದೆ. ೧೯೫೩-೮೭ಕ್ಕೆ ೩೫ ವರ್ಷಗಳಲ್ಲಿ ೨೨ ಟಿ.ಎಂ.ಸಿ. ನೀರು ಹೂಳಿನಿಂದ ಮುಚ್ಚಿ ಹೋಗಿದ್ದು, ಇಂದು ೧೦೮ ಟಿ.ಎಂ.ಸಿ. ಮಾತ್ರ ಸಂಗ್ರಹಿಸುತ್ತಿದೆ ಎಂದು ಜನರ ಪ್ರತಿರೋಧ ಕೇಳಿಬರುತ್ತಿದೆ.

### ೫:೩. ಕೃಷ್ಣಾ ಮೇಲ್ದಂಡೆ ಯೋಜನೆಯ ವಿವಾದ ಕುರಿತ ಚಳವಳಿ

ಕ್ರಿ. ಶ. ೧೯೬೯ರಲ್ಲಿ ಬಿಜಾಪುರ ಜಿಲ್ಲೆಯ ಬಸವನಬಾಗೇವಾಡಿ ತಾಲೂಕಿನ ಆಲಮಟ್ಟಿ ಗ್ರಾಮದ ಬಳಿ ಕೃಷ್ಣಾನದಿಗೆ ಅಣೆಕಟ್ಟನ್ನು ನಿರ್ಮಿಸಲಾಗಿದೆ. ಕೃಷ್ಣಾನದಿ ಕರ್ನಾಟಕದ ಹಿರಿಯ ನದಿಗಳಲ್ಲೊಂದು. ಮಹಾರಾಷ್ಟ್ರದ ಪಶ್ಚಿಮಘಟ್ಟದ ಮಹಾಬಲೇಶ್ವರ ಬೆಟ್ಟದ ರಮಣೀಯ ವನಸಿರಿಯ ಮಡಿಲಲ್ಲಿ ಜನ್ಮ ತಳೆದು ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳಲ್ಲಿ ಸುಮಾರು ೧೪೦೦ ಕಿ. ಮೀ. ಹರಿದು ಕೊನೆಗೆ ಬಂಗಾಳ ಕೊಲ್ಲಿಯನ್ನು ಸೇರುವ ದಕ್ಷಿಣಭಾರತದ ಎರಡನೇ ದೊಡ್ಡ ನದಿಯಾಗಿದೆ. ಈ ನದಿಗೆ ಅಡ್ಡಲಾಗಿ ಕಟ್ಟಿದ ಕೃಷ್ಣಾ ಮೇಲ್ದಂಡೆ ಯೋಜನೆ ಕರ್ನಾಟಕ ರಾಜ್ಯದ ಅತಿ ಪ್ರತಿಷ್ಠಿತ ಹಾಗೂ ಪ್ರಮುಖ ಯೋಜನೆಯಾಗಿದೆ. ಕರ್ನಾಟಕದ ಕೃಷಿ ಕ್ರಾಂತಿಗೆ ಪೂರಕವಾಗಲಿರುವ ವಿವಿಧೋದ್ದೇಶ ಯೋಜನೆಯ ಅಭಿವೃದ್ಧಿಗೆ ಮಹತ್ವ ಪಾತ್ರವಹಿಸಿದೆ.

ಆಲಮಟ್ಟಿ ಜಲಾಶಯದಂತೆ ಇದೇ ನದಿಗೆ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಸಿದ್ದಾಪುರ ಮತ್ತು ಬಾಚಿಹಾಳ ಗ್ರಾಮಗಳ ಬಳಿ ೧೦,೬೩೭.೫೨ ಮೀ. ಉದ್ದದ ನಾರಾಯಣಪುರ ಜಲಾಶಯ ನಿರ್ಮಾಣ ಮಾಡಿದ ಕರ್ನಾಟಕ ಸರ್ಕಾರ ಇತರ ಕೆಲಸಗಳನ್ನು ಕೈಗೆತ್ತಿಕೊಂಡಿದೆ. ಉತ್ತರ ಕರ್ನಾಟಕದ ಬರಪೀಡಿತ ಪ್ರದೇಶಗಳಾದ ಬಸವನ ಬಾಗೇವಾಡಿ, ಇಂಡಿ, ಮುದ್ದೇಬಿಹಾಳ, ಸಿಂದಗಿ ಮತ್ತು ಗುಲಬರ್ಗಾ ಜಿಲ್ಲೆಯ ಜೇವರ್ಗಿ, ಶಹಾಪುರ ಮತ್ತು ಸುರಪುರ ಹಾಗೂ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ

ಸುಮಾರು ೬.೨೨ ಲಕ್ಷ ಹೆಕ್ಟೇರ್ (೧೫.೪೩ ಲಕ್ಷ ಎಕರೆ) ನಿವ್ವಳ ಕೃಷಿ ಭೂಮಿಯಾಗಲಿದೆ. ಅಂತಿಮವಾಗಿ ಒಟ್ಟು ೭.೫೦ ಲಕ್ಷ ಹೆಕ್ಟೇರ್ ಗರಿಷ್ಠ ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಿದೆ. ಕೃಷಿ ರಂಗದಲ್ಲಿ ಹಸಿರು ಕ್ರಾಂತಿಗೆ ಅವಕಾಶ ಸೃಷ್ಟಿಸಿ, ಕ್ಷಾಮ ಪೀಡಿತ ಪ್ರದೇಶಗಳ ಸಮಸ್ಯೆಗೆ ಪರಿಹಾರ ದೊರಕಿಸಿಕೊಡುವ ಉದ್ದೇಶದಿಂದ ಕರ್ನಾಟಕ ಸರ್ಕಾರ ಕೃಷ್ಣಾ ಮೇಲ್ದಂಡೆ ಯೋಜನೆಗೆ ಕ್ರಿ. ಶ. ೧೯೬೪ರಲ್ಲಿ ಶಂಕುಸ್ಥಾಪನೆ ಮಾಡಲಾಯಿತು. ಸಮಸ್ಯೆಗಳಿಂದ ಕೆಲಸ ೫ ವರ್ಷ ತಡವಾದದು ಸ್ಪಷ್ಟ. ಇದಕ್ಕೆ ವಿಶ್ವ ಬ್ಯಾಂಕಿನಿಂದ ಧನಸಹಾಯದ ನೆರವು ದೊರಕಿದೆ.

## ಆಯೋಗದ ತೀರ್ಪು

ಆರ್. ಎಸ್. ಬಚಾವತ್ (ವಕೀಲ) ಆಯೋಗದ ತೀರ್ಪಿನಂತೆ ಕರ್ನಾಟಕಕ್ಕೆ ಈ ಯೋಜನೆಯಲ್ಲಿ ೧೭೩ ಟಿ.ಎಂ.ಸಿ. ನೀರು ನಿಗದಿಯಾಗಿದ್ದು, ಪ್ರಥಮ ಹಂತದಲ್ಲಿ ೧೧೯ ಟಿ.ಎಂ.ಸಿ. ಹಾಗೂ ದ್ವಿತೀಯ ಹಂತದಲ್ಲಿ ೫೪ ಟಿ.ಎಂ.ಸಿ. ಬಳಸಿಕೊಳ್ಳಲು ಯೋಜಿಸಿದೆ. ಪ್ರಥಮ ಹಂತದ ೧೧೯ ಟಿ.ಎಂ.ಸಿ. ನೀರಿನಲ್ಲಿ ೧೦೦.೩೬ ಟಿ.ಎಂ.ಸಿ. ನೀರನ್ನು ಕಾಲುವೆಗಳ ಮೂಲಕ ಪಡೆಯಬಹುದಾಗಿದ್ದು, ಉಳಿದ ೧೮.೬೪ ಟಿ.ಎಂ.ಸಿ. ನೀರು ಜಲಾಶಯದಲ್ಲೇ ನಷ್ಟವಾಗುವುದೆಂಬ ಅಂದಾಜಿದೆ.

ಆಲಮಟ್ಟಿ ಮತ್ತು ನಾರಾಯಣಪುರ ಜಲಾಶಯಗಳು ಕ್ರಮವಾಗಿ ೧೨,೮೮೬ ಮತ್ತು ೧೮,೪೭೫ ಚದರ ಮೈಲಿ ಜಲಾನಯನ ಪ್ರದೇಶ ಹೊಂದಿದ್ದು, ೪೨.೧೯ ಮತ್ತು ೩೭.೮೬ ಟಿ.ಎಂ.ಸಿ. ಗರಿಷ್ಠ ಜಲಸಂಪನ್ಮೂಲ ಸಂಗ್ರಹಣಾ ಸಾಮರ್ಥ್ಯ ಹಾಗೂ ೨೯.೭೩ ಮತ್ತು ೩೦.೯೯ ಟಿ.ಎಂ.ಸಿ. ವಾಸ್ತವಿಕ ಸಂಗ್ರಹಣಾ ಸಾಮರ್ಥ್ಯ ಹೊಂದಿರುತ್ತವೆ. ಈ ಜಲಾಶಯಗಳ ನಿರ್ಮಾಣದಿಂದ ಕ್ರಮವಾಗಿ ಸುಮಾರು ೧೩೬ ಮತ್ತು ೪೧ ಗ್ರಾಮಗಳು ಮತ್ತು ಇವುಗಳ ೨೧,೨೯೦ ಮತ್ತು ೧೫,೯೯೮ ಹೆಕ್ಟೇರ್ ಭೂಪ್ರದೇಶ ಮುಳುಗಡೆಯಾಗುವ ಸಾಧ್ಯತೆಯಿದ್ದು, ೧.೮೦ ಲಕ್ಷ ಹಾಗೂ ೦.೪೮ ಲಕ್ಷ ಜನರು ನಿರಾಶ್ರಿತರಾಗಲಿದ್ದಾರೆ. ಆಲಮಟ್ಟಿ ಹಿನ್ನೀರಿನಿಂದ ಬಾಗಲಕೋಟೆ ನಗರ ಮುಳುಗಡೆಯಾಗುವುದರಿಂದ ಸು. ೧೨,೦೦೦ ಕುಟುಂಬಗಳು ನಿರಾಶ್ರಿತವಾಗಿವೆ. ಇವರಿಗೆ ಬಾಗಲಕೋಟೆ ಸಮೀಪ ಪುನರ್ವಸತಿ ಕಲ್ಪಿಸುವ ಯೋಜನೆ ಅನುಷ್ಠಾನದಲ್ಲಿದ್ದು, ೪೫೦೦ ಎಕರೆ ಪ್ರದೇಶ ಇದಕ್ಕೆ ಮೀಸಲಾಗಿದೆ. ಪರಿಹಾರ ಕಾರ್ಯ ನಡೆಯುವಲ್ಲಿ ವಿಳಂಬವಾದ್ದರಿಂದ ಚಳವಳಿಗಳು ಸಂಭವಿಸುತ್ತಿವೆ.

## ಎರಡನೆಯ ಹಂತ

ಕೃಷ್ಣಾನದಿ ಕಣಿವೆಯಲ್ಲಿ ಆಂಧ್ರಪ್ರದೇಶದ ನಾಗಾರ್ಜುನ ಸಾಗರ ಜಲಾಶಯ ದೊಡ್ಡ ಯೋಜನೆಯಾಗಿ ಪ್ರಥಮ ಸ್ಥಾನದಲ್ಲಿದ್ದರೆ, ಆಲಮಟ್ಟಿ ಅಣೆಕಟ್ಟು ಎರಡನೇ ಸ್ಥಾನದಲ್ಲಿದೆ. ಹೀಗಿದ್ದರೂ ಆಂಧ್ರದ ತಕರಾರು ಕೊನೆಗೊಂಡಿಲ್ಲ.

ಪ್ರಥಮ ಹಂತದಲ್ಲಿ ೫೦೯ ಮೀ. ಎತ್ತರಕ್ಕೆ ಆಲಮಟ್ಟಿ ಅಣೆಕಟ್ಟನ್ನು ನಿರ್ಮಿಸುವುದಾಗಿತ್ತು. ಅದರ ಮೇಲೆ ೧೫x೧೫. ೨೪ ಮೀ. ಎತ್ತರದ ೨೬ ಕ್ರೆಸ್ಟ್ ಗೇಟ್‌ಗಳನ್ನು ಸ್ಥಾಪಿಸುವುದರೊಂದಿಗೆ ೫೧೨.೨೦ ಮೀ.ಗಳವರೆಗೆ ನೀರು ಸಂಗ್ರಹಿಸಿ

ಆಲಮಟ್ಟಿ ಎಡದಂಡೆ ನಾಲೆಯಿಂದ ೦.೧೬ ಲಕ್ಷ ಹೆಕ್ಟೇರ್ ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸುವುದಾಗಿದೆ. ನಾರಾಯಣಪುರ ಜಲಾಶಯ ಪೂರ್ಣಗೊಳಿಸಿ ಎಡದಂಡೆ ನಾಲೆಯಿಂದ ೪.೦೯ ಲಕ್ಷ ಹೆಕ್ಟೇರ್ ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಉದ್ದೇಶವಿದೆ. ಕರ್ನಾಟಕ ಪ್ರಥಮ ಹಂತದಲ್ಲಿ ಕೃಷ್ಣಾ ನದಿಯಿಂದ ೧೧೯ ಟಿ.ಎಂ.ಸಿ. ಜಲಸಂಪನ್ಮೂಲ ಬಳಸಿಕೊಂಡು ಒಟ್ಟು ೪.೨೫ ಲಕ್ಷ ಹೆಕ್ಟೇರ್ ನಿವ್ವಳ ಕೃಷಿ ಭೂಮಿಗೆ ಮೇ ೩೧, ೨೦೦೦ ದೊಳಗೆ ನೀರಾವರಿ ಸೌಲಭ್ಯ ಕಲ್ಪಿಸಬೇಕಾಗಿದೆ. ಪ್ರಥಮ ಹಂತದ ಕಾಮಗಾರಿ ಮುಗಿದಿದೆ. ವಿಶ್ವ ಬ್ಯಾಂಕ್ ಇದಕ್ಕೆ ಧನಸಹಾಯ ಮುಂದುವರೆಸಿದೆ. ಇದರ ಷರತ್ತಿನಂತೆ ೧೯೮೮ ರಿಂದ ೭½ ವರ್ಷದೊಳಗಾಗಿ, ಅಂದರೆ ೧೯೯೫-೯೬ರ ಒಳಗಾಗಿ ಬಳಸಲು ಸೂಚಿಸಿತ್ತು. ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಮುಳುಗಡೆಯಾಗುವ ಸಂತ್ರಸ್ಥ ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸುವ ಯೋಜನೆಯಲ್ಲಿ ಕರ್ನಾಟಕ ಸರ್ಕಾರ ವಿಶ್ವಬ್ಯಾಂಕಿನ ಮಾರ್ಗ ಸೂಚಿಗಳನ್ನು ಉಲ್ಲಂಘಿಸಿದೆ ಹಾಗೂ ಯೋಜನಾ ಪ್ರಗತಿ ಅತೃಪ್ತಿಕರವಾಗಿದೆ ಎಂದು ಕೃಷ್ಣಾ ಮೇಲ್ದಂಡೆ ಯೋಜನೆಯ ಎರಡನೇ ಹಂತಕ್ಕೆ ವಿಶ್ವಬ್ಯಾಂಕ್ ಧನ ಸಹಾಯವನ್ನು ನಿಲ್ಲಿಸಿತ್ತು.

## ಕೃಷ್ಣಾ ಭಾಗ್ಯ ಜಲನಿಗಮ

ವಿಶ್ವಬ್ಯಾಂಕ್ ನೀಡಬೇಕಾದ ೧೬೫ ದಶಲಕ್ಷ ಅಮೆರಿಕನ್ ಡಾಲರ್ ಸಾಲದ ಮೊತ್ತವನ್ನು ೪೫ ದಶಲಕ್ಷ ಡಾಲರ್‌ಗಳಿಗೆ ಕಡಿಮೆ ಮಾಡಿತು. ಹೀಗಾಗಿ ಕೃಷ್ಣಾ ಮೇಲ್ದಂಡೆ ಯೋಜನೆಯ ಪ್ರಥಮ ಹಂತದ ಎರಡನೆಯ ಘಟ್ಟದ ಕಾಮಗಾರಿಗಳು ನಿಂತವು. ಇದಕ್ಕೆ ಬಂಡವಾಳ ಕ್ರೋಢೀಕರಿಸುವ ಹಾಗೂ ಯೋಜನೆಯನ್ನು ಮೇ ೩೧, ೨೦೦೦ ದೊಳಗೆ ಪೂರ್ಣಗೊಳಿಸುವ ಉದ್ದೇಶದಿಂದ ಕರ್ನಾಟಕ ಸರ್ಕಾರ ಕ್ರಿ. ಶ. ೧೯೯೫-೯೬ರಲ್ಲಿ ಕೃಷ್ಣಾ ಭಾಗ್ಯ ಜಲನಿಗಮ ಸ್ಥಾಪಿಸಿತು. ೧೯೯೫-೯೬ ಮತ್ತು ೧೯೯೬-೯೭ ಎರಡು ವರ್ಷಗಳಲ್ಲಿ ಇದು ಸು. ೬೮೯.೪೮ ಕೋಟಿ ರೂ.ಗಳನ್ನು ನೀರಾವರಿ ಬಾಂಡ್ ಡಿಬೆಂಚರ್‌ಗಳ ಮುಖಾಂತರ ಕ್ರೋಢೀಕರಿಸಿದ್ದು, ಕ್ರಿ. ಶ. ೧೯೯೭-೯೮ರಲ್ಲಿ ಸು. ೭೫೦ ಕೋಟಿ ರೂ.ಗಳನ್ನು ಸಂಗ್ರಹಿಸುವ ಗುರಿ ಹೊಂದಲಾಗಿತ್ತು. ಈ ನಿಗಮದಿಂದ ಕ್ರಿ. ಶ. ೧೯೯೫-೯೬ ಮತ್ತು ೧೯೯೬-೯೭ರಲ್ಲಿ ೬೭೦.೮೫ ಕೋಟಿ ರೂ. ವೆಚ್ಚ ಮಾಡಿದ್ದಾರೆ. ಕ್ರಿ. ಶ. ೧೯೯೭-೯೮ರಲ್ಲಿ ೧೧೬೭.೧೩ ಕೋಟಿ ರೂ. ವೆಚ್ಚ ಮಾಡುವ ಗುರಿ ಇತ್ತು.

## ಅಣೆಕಟ್ಟನ ಎತ್ತರ

ಎರಡನೇ ಹಂತದಲ್ಲಿ ಆಲಮಟ್ಟಿ ಅಣೆಕಟ್ಟನ್ನು ನದಿ ಮಟ್ಟದಿಂದ ೫೨೪.೨೫೬ ಮೀಟರ್ ಎತ್ತರಕ್ಕೆ ನಿರ್ಮಿಸಿ ಕೃಷ್ಣಾ ಕಣಿವೆಯ ೫೪ ಟಿ.ಎಂ.ಸಿ. ಜಲಸಂಪನ್ಮೂಲ ಬಳಸಿಕೊಂಡು ಸು. ೧.೯೭ ಲಕ್ಷ ಹೆಕ್ಟೇರ್ ನಿವ್ವಳ ಕೃಷಿ ಭೂಮಿಗೆ ಹಾಗೂ ೨.೩೦ ಲಕ್ಷ ಹೆಕ್ಟೇರ್ ಗರಿಷ್ಠ ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಗಳು ಸೇರಿದ್ದು, ಕೃಷ್ಣಾ ಮೇಲ್ದಂಡೆ ಯೋಜನೆಯ ೨ನೇ ಹಂತಕ್ಕೆ ಅಂದಾಜು ಮಾಡಲಾಗಿದೆ. 'ಬಚಾವತ್ ಆಯೋಗ ನಿಗದಿ ಮಾಡಿರುವ ಕಾಲಮಿತಿಗೆ ಅಂದರೆ ಮೇ ೩೧, ೨೦೦೦ಕ್ಕೆ

ಉಳಿದಿರುವುದು ಕೇವಲ ಒಂಭತ್ತು ತಿಂಗಳು ಮಾತ್ರ. ಇದಕ್ಕೆ ಆಂಧ್ರದ ಪ್ರಬಲ ವಿರೋಧವಿದೆ. ಆಂಧ್ರದ ರೈತರಿಗೆ ನೀರು ಸಿಗುವುದಿಲ್ಲ ಮತ್ತು ಕಾನೂನು ಉಲ್ಲಂಘನೆ ಎಂಬುದು ಅವರ ವಾದ.'

ಇದರಿಂದ ಸುಮಾರು ೧೩೬ ಹಳ್ಳಿಗಳು ಆಲಮಟ್ಟಿಯಲ್ಲಿ ಮತ್ತು ೪೧ ಹಳ್ಳಿಗಳು ನಾರಾಯಣಪುರದಲ್ಲಿ ಮುಳುಗಡೆಯಾಗುತ್ತವೆ. ಹೀಗಾಗಿ ಪುನರ್ವಸತಿ, ಪರಿಹಾರ ಕಾರ್ಯಗಳು ಸರಿಯಾಗಿ ನಡೆಯದೆ, ನಿರಾಶ್ರಿತರ ಬೇಡಿಕೆ ಮಂದಗತಿಯಲ್ಲಿ ಈಡೇರುವ ಸಾಧ್ಯತೆ ಇದೆ.

೧೯೭೮ರಲ್ಲಿ ಯೋಜನಾ ಆಯೋಗ ೨೮೩.೬೫ ಕೋಟಿ ರೂ.ಗಳ ಅಂದಾಜು ವೆಚ್ಚದ ಕೃಷ್ಣಾ ಮೇಲ್ದಂಡೆಯ ಪ್ರಥಮ ಹಂತಕ್ಕೆ ಆಡಳಿತಾತ್ಮಕ ಒಪ್ಪಿಗೆ ನೀಡಿತ್ತು. ೧೯೮೩-೮೪ರಲ್ಲಿ ಯೋಜನಾ ವೆಚ್ಚ ೧೦೭೧.೧೦ ಕೋಟಿ. ಪ್ರಸ್ತುತ ಕೃಷ್ಣಾ ಮೇಲ್ದಂಡೆ ಪ್ರಥಮ ಹಂತದ ವೆಚ್ಚ ೩೭೮.೪೬ ಕೋಟಿ ಆಗಿದೆ.

ನಾರಾಯಣಪುರ ಜಲಾಶಯ ಪೂರ್ಣಗೊಂಡಿದ್ದು, ೧೯೮೨ ಅಕ್ಟೋಬರ್‌ನಿಂದ ಕೃಷಿ ನೀರಾವರಿಗೆ ಸೌಲಭ್ಯವಾಯಿತು. ಆಲಮಟ್ಟಿ ಅಣೆಕಟ್ಟನ್ನು ೫೦೯ ಮೀಟರಿಗೆ ನಿರ್ಮಿಸುವ ಕೆಲಸ ಮುಗಿದಿದೆ. ಸ್ಪಿಲ್ವೇ ಮೇಲೆ ಕ್ರೆಸ್ಟ್‌ಗೇಟ್‌ಗಳನ್ನು ನಿರ್ಮಿಸುವ ಕೆಲಸ ೧೯೯೯ರ ಜೂನ್‌ನಲ್ಲಿ ಮುಗಿಯಬಹುದೆಂಬ ಅಂದಾಜಿತ್ತು, ಇನ್ನೂ ಆಗಿಲ್ಲ.

## ಆಂಧ್ರ ಪ್ರದೇಶದ ನೀರಿನ ಪಾಲು

ಕ್ರಿ. ಶ. ೧೯೬೭ ರಿಂದ ಮಾರ್ಚ್ ೩೧, ೧೯೯೭ ರವರೆಗೆ ಕೃಷ್ಣಾ ಮೇಲ್ದಂಡೆ ಯೋಜನೆಗೆ ೨೪೫೨.೮೨ ಕೋಟಿ ವೆಚ್ಚವಾಗಿದೆ. ಕೃಷ್ಣಾಮೇಲ್ದಂಡೆ ಯೋಜನೆ ೧೯೯೫ರಲ್ಲಿ ಮುಗಿಯಬೇಕಿದ್ದು, ಆರಂಭವಾಗಿ ೩೩ ವರ್ಷ ಕಳೆದರೂ ನಿರೀಕ್ಷಿಸಿದ ಫಲ ಸಿಕ್ಕಿಲ್ಲ. ಪ್ರಥಮ ಹಂತದಲ್ಲಿ ೧೧೯ ಟಿ.ಎಂ.ಸಿ. ನೀರು ಕರ್ನಾಟಕ ಬಳಸಿಕೊಳ್ಳಬೇಕಾಗಿದ್ದರೂ, ಅದು ಬಳಸಿಕೊಳ್ಳುತ್ತಿಲ್ಲ. ಇಲ್ಲಿಯವರೆಗೆ ಕೇವಲ ೬೦ ಟಿ.ಎಂ.ಸಿ. ಮಾತ್ರ ಬಳಸಿದೆ. ಉಳಿದ ೬೦ ಟಿ.ಎಂ.ಸಿ.ಗೆ ಎರಡನೇ ಹಂತದ ೫೪ ಟಿ.ಎಂ.ಸಿ. ಜನಸಂಪನ್ಮೂಲ ಅಂದರೆ ೧೧೦ ರಿಂದ ೧೧೪ ಟಿ.ಎಂ.ಸಿ. ಜಲಸಂಪನ್ಮೂಲ ಇಂದಿಗೂ ಆಂಧ್ರಪ್ರದೇಶದ ಪಾಲಾಗುತ್ತಿದೆ. ೨/೩ ರಷ್ಟು ಜಲಸಂಪನ್ಮೂಲ ಮೇ ೩೧, ೨೦೦೦ ದೊಳಗೆ ಕರ್ನಾಟಕ ಬಳಸಿಕೊಳ್ಳಬೇಕಾಗಿದೆ. ಅಂತಿಮ ನೀರಾವರಿ ಅಚ್ಚುಕಟ್ಟಿನ ಸೌಲಭ್ಯಕ್ಕೆ ಸು. ೬೦೦೦-೧೦,೦೦೦ ಕೋಟಿ ರೂ. ಬಂಡವಾಳ ಅಗತ್ಯವಿದ್ದು, ಕನಿಷ್ಠ ೧೫ ವರ್ಷಗಳ ಕಾಲ ಬೇಕಾಗುತ್ತದೆ. ೧೦-೧೫ ವರ್ಷ ಕರ್ನಾಟಕ ನೀರಾವರಿ ಸೌಲಭ್ಯದಿಂದ ವಂಚಿತವಾಗಲಿದೆ.

ಕರ್ನಾಟಕ ಬಚಾವತ್ ತೀರ್ಪಿನ ಪ್ರಕಾರ ಕೃಷ್ಣಾಮೇಲ್ದಂಡೆ 'ಎ' ಯೋಜನೆಯಡಿ ೧೭೩ ಟಿ.ಎಂ.ಸಿ. ಜಲಸಂಪನ್ಮೂಲವನ್ನು ಮೇ ೩೧, ೨೦೦೦ ದೊಳಗೆ ಬಳಸಿಕೊಳ್ಳಲೇ ಬೇಕು. ಇದರಂತೆ ಸರ್ಕಾರ ತೀವ್ರ ಗಮನವಿಟ್ಟು ಮೇಲಿನ ವೇಳೆಗೆ ಕಾಮಗಾರಿಗಳ ಪ್ರಗತಿ ಚುರುಕುಗೊಳಿಸಬೇಕಿದೆ. ಮೇಲಿನ ನೀರಿನ ಪಾಲು ಕರ್ನಾಟಕ ಪೂರ್ಣವಾಗಿ ಬಳಸಿಕೊಂಡರೆ ೧೧೦ ಟಿ.ಎಂ.ಸಿ. ನೀರು ಕೈತಪ್ಪುವುದೆಂಬ ಭೀತಿ ಆಂಧ್ರಕ್ಕಿದೆ. ಹೀಗಾಗಿ

ಕಾಮಗಾರಿಗಳನ್ನು ಕುಂಠಿತಗೊಳಿಸಿ ತನ್ನ ರಾಜಕೀಯ, ಪ್ರಾದೇಶಿಕ, ತೀರ ಸಂಕುಚಿತ ಭಾವನೆಯನ್ನು ಪ್ರಯೋಗಿಸಿ ವಿನಾ ಕಾರಣ ಆಂಧ್ರವು ವಿವಾದ ಮಾಡುತ್ತದೆ.

ಕೃಷ್ಣಾ ಜಲ ಆಯೋಗ, ಕೃಷ್ಣಾಜಲ ಸಂಪನ್ಮೂಲ ಬಳಕೆ ಕುರಿತು ಅಂತಿಮ ತೀರ್ಪು ನೀಡಿದ್ದು, ಕಣಿವೆಯ ರಾಜ್ಯಗಳು ಒಪ್ಪಿಕೊಂಡು ಜವಾಬ್ದಾರಿ ಅರಿತು, ರಾಷ್ಟ್ರದ ಸಮಗ್ರತೆ ಗಮನಿಸಿ, ತನ್ನ ಪಾಲಿಗೆ ನಿಗದಿಯಾದ ಜಲ ಸಂಪನ್ಮೂಲ ಪಡೆಯಲು ಬಿಟ್ಟು ಹೆಚ್ಚಿನ ಪಾಲು ಪಡೆದರೆ ಅದು ಕಾನೂನು ಬಾಹಿರ ಕೃತ್ಯ. ಹೀಗೆಯೇ ಆದರೆ ಜಲ ಆಯೋಗ, ಯೋಜನಾ ಆಯೋಗ ನಿರ್ಬಂಧ ಹೇರಿ ಪಕ್ಷಪಾತರಹಿತ ಕ್ರಮ ಕೈಗೊಂಡಲ್ಲಿ ಸಮಸ್ಯೆ ಇರುವುದಿಲ್ಲ. ಇಂತಹ ವಿಚಾರ, ವಿವಾದಕ್ಕೆ ಪ್ರಧಾನಿ, ಸುಪ್ರೀಂ ಕೋರ್ಟ್ ಹಸ್ತಕ್ಷೇಪ ಮಾಡುವುದಿಲ್ಲ.

'ಕರ್ನಾಟಕ ಸರ್ಕಾರ ಆಲಮಟ್ಟಿ ಅಣೆಕಟ್ಟೆಯ ಎತ್ತರವನ್ನು ಹೆಚ್ಚಿಸುವುದರ ಮೂಲಕ ಬಚಾವತ್ ಆಯೋಗ ಮಾಡಿರುವ ಜಲಸಂಪನ್ಮೂಲಕ್ಕಿಂತ ಹೆಚ್ಚು ಪ್ರಮಾಣದ ನೀರು ಬಳಸಿಕೊಳ್ಳಲು ಯೋಜಿಸಿದೆ. ಇದರಿಂದ ಆಂಧ್ರಪ್ರದೇಶದ ಜಲಾಶಯಗಳಲ್ಲಿ ನೀರಿನ ಪ್ರಮಾಣ ಕಡಿಮೆಯಾಗಿದ್ದು, ಆಂಧ್ರಪ್ರದೇಶದ ರೈತರ ಹಿತಾಸಕ್ತಿಗೆ ಮಾರಕವಾಗಲಿದೆ ಎಂದು ಆಪಾದಿಸಲಾಗಿದೆ. ಕರ್ನಾಟಕ ಸರ್ಕಾರ ಆಲಮಟ್ಟಿ ಅಣೆಕಟ್ಟು ಸೇರಿದಂತೆ ಕೃಷ್ಣಾ ಕಣಿವೆಯ ಎಲ್ಲಾ ಕಾಮಗಾರಿಗಳ ಅನುಷ್ಠಾನವನ್ನು ಸ್ಥಗಿತಗೊಳಿಸುವಂತೆ ನಿರ್ದೇಶಿಸಲು ಕೇಂದ್ರ ಸರ್ಕಾರಕ್ಕೆ ಆದೇಶ ನೀಡಬೇಕೆಂದು ಆಂಧ್ರಪ್ರದೇಶವು ಹೈಕೋರ್ಟ್ ಹಾಗೂ ಸುಪ್ರೀಂ ಕೋರ್ಟ್‌ಗಳಲ್ಲಿ ಅರ್ಜಿಸಲ್ಲಿಸಿದ್ದು, ಅದರ ಅರ್ಜಿ ಎರಡೂ ನ್ಯಾಯಾಲಯಗಳಲ್ಲಿ ತಿರಸ್ಕರಿಸಲ್ಪಟ್ಟಿರುವುದು ಸಮಂಜಸ ತೀರ್ಪೆನ್ನಬಹುದು. ಆಂಧ್ರಪ್ರದೇಶದ ಆಪಾದನೆಗಳು ಕೇವಲ ರಾಜಕೀಯ ಲಾಭಕ್ಕಾಗಿ ಪ್ರಾದೇಶಿಕ ಹಾಗೂ ಸ್ವಪ್ರತಿಷ್ಠೆಯ ಮತ್ತು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳುವಲ್ಲಿ ಜನರ ಪ್ರತಿಭಟನೆಯನ್ನು ಬೇರೆಡೆಗೆ ತಿರುಗಿಸುವ ನಿಟ್ಟಿನಲ್ಲಿ ಹೂಡಿದ ತಂತ್ರ ಹಾಗೂ ಅಗ್ಗದ ಜನಪ್ರಿಯತೆ ಪಡೆಯುವ ಕುತಂತ್ರವೆನ್ನಬಹುದು.'[೫೧]

## ಪ್ರಚಲಿತ ರಾಜಕೀಯ

ಎರಡು ರಾಜ್ಯಗಳ ಮುಖಂಡರು, ವಿಧಾನಸಭೆ, ಪರಿಷತ್ತು, ಸಂಸತ್ತಿನಲ್ಲೂ ಬಿಸಿ ಚರ್ಚೆ ವಾದ-ವಿವಾದ ನಡೆಸಿದ್ದು, ಜನಸಮುದಾಯದಲ್ಲಿ ಅನಗತ್ಯ ಶಂಕೆ ಹಾಗೂ ಭೀತಿ ಮೂಡಿಸಿ ಸಮಸ್ಯೆ ಸೃಷ್ಟಿಸಿದ್ದಾರೆ. ಪ್ರಧಾನಿಗಳು ನೇರವಾಗಿ ಹೇಳದೆ, ನ್ಯಾಯಾಲಯದ ತೀರ್ಪಿಗೆ ಬಿಟ್ಟ ಕಾರಣ ವಿವಾದ ಹೆಚ್ಚಾಯಿತು. ಬಚಾವತ್ ಆಯೋಗದ ತೀರ್ಪಿಗಿಂತ ವಿಭಿನ್ನವಾದ ತೀರ್ಪು ನೀಡಿದಾಗ ಅಗೌರವವಾಗುತ್ತದೆ. ಎಲ್ಲವನ್ನು ಸಮಗ್ರವಾಗಿ ನೋಡುವ ಭಾವನೆ ಬೆಳೆಸಿಕೊಳ್ಳಬೇಕು. ಪುನರ್ವಸತಿ ಕಾರ್ಯ ಮುಗಿಸಿದರೆ ಕರ್ನಾಟಕ ಬೇಗ ನೀರು ಪಡೆಯಬಹುದು. ಉತ್ತರ ಕರ್ನಾಟಕದ ಬಿಜಾಪುರ, ಬಾಗಲಕೋಟೆ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಸಮೃದ್ಧ ಕೃಷಿ, ನೀರಾವರಿ ಪ್ರದೇಶಗಳಾಗುತ್ತವೆ.

ಅಂತರ ರಾಜ್ಯ ಜಲಸಮಸ್ಯೆ ಪರಿಹರಿಸಲು ಆಗಸ್ಟ್ ೧೦, ೧೯೯೬ರಲ್ಲಿ ನಾಲ್ವರು ಮುಖ್ಯಮಂತ್ರಿಗಳ ಸಮಿತಿಯನ್ನು ಸಂಯುಕ್ತ ರಂಗ ಸರ್ಕಾರ ರೂಪಿಸಿತು. ಕೊನೆಗೆ ಸಂಯುಕ್ತ ರಂಗ ಸರ್ಕಾರದಲ್ಲಿ ಭಿನ್ನಾಭಿಪ್ರಾಯ ಬಂತು. ಆಂಧ್ರ ಪ್ರದೇಶ ಕಾನೂನನ್ನು ಉಲ್ಲಂಘಿಸಿದೆ

ಎಂದು ಹೇಳಲಾಗಿದೆ. ಅದು ತೆಲುಗು - ಗಂಗಾ ಯೋಜನೆ,[೫೨] ಜುರಾಲಾ ಯೋಜನೆ,[೫೩] ಶ್ರೀಶೈಲಂ ಬಲದಂಡೆ ನಾಲೆ,[೫೪] ಶ್ರೀಶೈಲಂ ಎಡದಂಡೆ ನಾಲೆ,[೫೫] ಭೀಮಾಪತ ನೀರಾವರಿ, ಪುಲಿಚಿಂತಲ ಡೈವರ್ಸ್ನ್ ಯೋಜನೆ[೫೬] ಮುಂತಾದವುಗಳನ್ನು ಕೈಗೊಂಡಿದ್ದು ಸಂವಿಧಾನ ಬಾಹಿರ ಎಂದು ಕರ್ನಾಟಕ ಹೇಳಿದರೂ, ಆಂಧ್ರ ಈ ಯೋಜನೆಗಳನ್ನು ಕೈಬಿಟ್ಟಿಲ್ಲ. ಕೃಷ್ಣಾ ಕೊಳ್ಳದಲ್ಲಿ ಇನ್ನು ಕಾಮಗಾರಿ ಕೆಲಸ ಮುಗಿದಿಲ್ಲವಾದರೂ ಚಳವಳಿ, ಹೋರಾಟಗಳು ಜೀವಂತವಾಗಿವೆ. ಜನಪರ ಕಾಳಜಿ ವಹಿಸಿ ಎಚ್. ಕೆ. ಪಾಟೀಲ್ ಕೃಷ್ಣೆಯ ಕಣ್ಣೀರು ಎಂಬ ಪುಸ್ತಕವನ್ನು ಬರೆದರೆ, ಮಲ್ಲಿಕಾರ್ಜುನ ಖರ್ಗೆ ಅವಿರತ ಹೋರಾಟ ನಡೆಸಿರುವುದು ಗಮನಾರ್ಹ.

**೫:೪. ಕೃಷ್ಣಾ - ಗೋದಾವರಿ ವಿವಾದ ಕುರಿತ ಚಳವಳಿ**

ಕೃಷ್ಣಾ ಮತ್ತು ಗೋದಾವರಿ ದೇಶದ ಎರಡು ಪ್ರಮುಖ ನದಿಗಳು. ಮಹಾರಾಷ್ಟ್ರದ ನಾಸಿಕ್‌ನಲ್ಲಿ ಹುಟ್ಟಿ ನೈರುತ್ಯಕ್ಕೆ ಹರಿದು ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶವನ್ನು ಹಾದು ಹೋಗುವ ಗೋದಾವರಿ ಪೂರ್ವಕ್ಕೆ ಹರಿಯುವ ದೊಡ್ಡ ನದಿಯಾಗಿದೆ. ಇವೆರಡು ನದಿಗಳ ಜಲಾನಯನ ಪ್ರದೇಶ ೨,೨೧,೦೦೦ ಚ. ಮೈ. ಆಂಧ್ರ ಪ್ರದೇಶ, ಕರ್ನಾಟಕ, ಮಹಾರಾಷ್ಟ್ರ, ಮಧ್ಯಪ್ರದೇಶ ಮತ್ತು ಒರಿಸ್ಸಾದ ಕೆಲವು ಭಾಗಗಳಿಗೆ ನೀರೆರೆಯುವುದರಿಂದ ಅಂತರ್‌ರಾಜ್ಯ ನದಿಗಳಾಗಿದ್ದು, ವಿವಾದವು ಸಹ ಹುಟ್ಟಿಕೊಂಡಿದೆ.

ಕೃಷ್ಣಾ, ಗೋದಾವರಿ ಜಲಾನಯನ ಪ್ರದೇಶಗಳಲ್ಲಿ ನೀರಾವರಿ ಯೋಜನೆಗಳನ್ನು ೧೯೫೧ರಲ್ಲಿ ಆರಂಭಿಸಿದರು. ನಂತರ ವಿದ್ಯುತ್ ಮತ್ತು ನೀರಾವರಿ ಉದ್ದೇಶಗಳಿಗೆಂದು ಮುಂಬೈ, ಹೈದರಾಬಾದ್, ಮದ್ರಾಸ್, ಮೈಸೂರು ಮುಂತಾದ ರಾಜ್ಯಗಳು ಗೋದಾವರಿ ಮತ್ತು ಅದರ ಉಪನದಿಗಳ ನೀರಿನ ಬಳಕೆಗಾಗಿ ಹೊಸ ಯೋಜನೆ ರೂಪಿಸಿದವು. ನದಿನೀರಿನ ಬಳಕೆಗೆ ರಾಜಕೀಯ ಪಕ್ಷಗಳು ತೀವ್ರ ಆಸಕ್ತಿಗೊಂಡಾಗ ಆ ರಾಜ್ಯಗಳಿಗೆ ಧಕ್ಕೆ ಉಂಟಾಗುವುದೆಂದು ಒಪ್ಪಂದವಾಯಿತು.

ಜುಲೈ ೧೯೫೧ರಲ್ಲಿ ಅಂತರ್‌ರಾಜ್ಯ ಸಮಾವೇಶ ನಡೆದು, ಪಂಚವಾರ್ಷಿಕ ಯೋಜನೆ ಮೂಲಕ ನೀರಿನ ಬಳಕೆಗೆ ಆಲೋಚಿಸಲಾಗಿ, ಕೃಷ್ಣಾ, ಗೋದಾವರಿ ಜಲಾನಯನದಲ್ಲಿ ನೀರಿನ ಬಳಕೆಗೆ ಯೋಜನೆ ರೂಪಿಸಿದರು. ೧೯೫೧ರಲ್ಲಿ ಒರಿಸ್ಸಾವನ್ನು ಬಿಟ್ಟು ಮುಂಬೈ, ಮದ್ರಾಸ್, ಹೈದರಾಬಾದ್, ಮಧ್ಯಪ್ರದೇಶ ಮತ್ತು ಮೈಸೂರು ರಾಜ್ಯಗಳು ಭಾಗವಹಿಸಿದ್ದವು. ಹೈದರಾಬಾದ್, ಮೈಸೂರು ಮತ್ತು ಮದ್ರಾಸ್ ರಾಜ್ಯಗಳು ಕೃಷ್ಣಾ ನದಿಯ ನೀರಿನ ಹಂಚಿಕೆಯನ್ನು ಬಯಸಿದರೆ, ಮುಂಬೈ, ಹೈದರಾಬಾದ್, ಮಧ್ಯಪ್ರದೇಶ, ಮದ್ರಾಸ್‌ಗಳು ಗೋದಾವರಿ ನದಿ ನೀರನ್ನು ಬಯಸಿದವು. ಮದ್ರಾಸ್, ಮುಂಬೈ, ಹೈದರಾಬಾದ್ ಹಾಗೂ ಮಧ್ಯಪ್ರದೇಶ ಈ ಒಪ್ಪಂದವನ್ನು ಸ್ವೀಕರಿಸಿದವು. ಮೈಸೂರು ಅವರಂತೆ ಬಯಸಲಿಲ್ಲ.

೧೯೫೩ರಲ್ಲಿ ರಾಜ್ಯಗಳು ಭಾಷಾವಾರು ಪ್ರಾಂತ್ಯಗಳಾಗಿ ವಿಂಗಡಣೆಗೊಂಡು ಮದ್ರಾಸ್ ಇಬ್ಭಾಗವಾಗಿ ಆಂಧ್ರ ಮತ್ತು ಮದ್ರಾಸ್ ಎಂದಾಯಿತು. ೧೯೫೬ರ ನಂತರ ಪುನಃ ವಿಂಗಡಣೆಯಾಗಿ ಹೈದ್ರಾಬಾದ್ ಭಾಗಗಳು ಆಂಧ್ರಕ್ಕೆ ಸೇರಿ ಆಂಧ್ರಪ್ರದೇಶವಾಯಿತು.

ಇದರಿಂದ ಒಂದು ಭಾಗ ಆಂಧ್ರಕ್ಕೆ, ಮತ್ತೊಂದು ಭಾಗ ಮುಂಬೈಗೆ ಮತ್ತು ಮೈಸೂರಿಗೆ ಹೋಯಿತು. ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶಗಳು ಕೃಷ್ಣಾ ನದಿತೀರದ ರಾಜ್ಯಗಳಾದವು. ೧೯೬೦ರ ಸೆಪ್ಟೆಂಬರ್‌ನಲ್ಲಿ ಕೇಂದ್ರ ನೀರಾವರಿ ಮತ್ತು ವಿದ್ಯುತ್ ಸಚಿವರು ನೀರಿನ ಹಂಚಿಕೆಗೆ ಸೌಹಾರ್ದ ವಾತಾವರಣ ರೂಪಿಸಲು ನವದೆಹಲಿಯಲ್ಲಿ ಸಭೆ ಕರೆದಿದ್ದರು. ಆಗ ೧೯೫೧ರ ಒಪ್ಪಂದವನ್ನು ಒರಿಸ್ಸಾ, ಮಧ್ಯಪ್ರದೇಶಗಳು ಪ್ರಶ್ನಿಸಿದವು. ಇದರ ಬದಲಾವಣೆಗೆ ಆಂಧ್ರ ಒಪ್ಪಲಿಲ್ಲ.

ಆಂಧ್ರಪ್ರದೇಶವು ಕೃಷ್ಣಾ ಮತ್ತು ಗೋದಾವರಿ ವಿವಾದಗಳೆರಡನ್ನೂ ಪಂಚಾಯ್ತಿಗೆ ಒಪ್ಪಿಸಿತು. ಒಂದು ಪಂಚಾಯ್ತಿ ಸಾಕೆಂದು ನಿರ್ಧರಿಸಿದವರು ಕರ್ನಾಟಕ ಮತ್ತು ಮಹಾರಾಷ್ಟ್ರದವರು. ಎರಡು ಪಂಚಾಯ್ತಿಗಳಿರಬೇಕೆಂದು ಆಂಧ್ರ ಹೇಳಿತು. ಇದಕ್ಕೆ ಸರ್ಕಾರ ಒಪ್ಪಿಕೊಂಡಿತು.

೧೯೫೧ರ ಅಂತರ್ ರಾಜ್ಯ ಒಪ್ಪಂದವನ್ನು ಪ್ರಶ್ನಿಸಲಾಗಿ, ಸಂವಿಧಾನದ ೨೬೯ರ ಅನುಚ್ಛೇಧದಲ್ಲಿ ತಿಳಿಸಿರುವಂತೆ ಸ್ಥಿರೀಕರಣದ ಬಗ್ಗೆ ಅನುಮಾನಿಸಿದವು. ಕೃಷ್ಣಾ ನದಿಗೆ ಕರ್ನಾಟಕ ಸ್ಥಿರೀಕರಣ ನೀಡಿರಲಿಲ್ಲ ಮತ್ತು ಗೋದಾವರಿ ನದಿನೀರಿಗೆ ಒರಿಸ್ಸಾ ಭಾಗವಹಿಸಲಿಲ್ಲ. ಹೀಗಾಗಿ ೧೯೫೧ರಲ್ಲಿ ರಾಜ್ಯಗಳು ಬದಲಾಗಿ : ೧೯೫೩ರಲ್ಲಿ ಆಂಧ್ರಪ್ರದೇಶ, ೧೯೫೬ರಲ್ಲಿ ಹೈದರಾಬಾದ್ ರೂಪುಗೊಂಡು ಮಧ್ಯಪ್ರದೇಶ ನಿರ್ಲಿಪ್ತಗೊಂಡಿತು. ಕರ್ನಾಟಕ ಕೃಷ್ಣಾ - ಗೋದಾವರಿ ಜಲಾನಯನ ಪ್ರದೇಶದಲ್ಲಿ ಪ್ರಾಂತ್ಯಗಳನ್ನು ಹೊಂದಿತ್ತು. ಆದರೆ ತಮಿಳುನಾಡು ಹೊಂದಿರಲಿಲ್ಲ. ಮೇಲಿನ ರಾಜ್ಯಗಳು ಬೇಡಿಕೆಯನ್ನು ಮುಂದಿಟ್ಟವು.

ಕೃಷ್ಣಾನದಿಯ ನೀರನ್ನು ಪಶ್ಚಿಮಕ್ಕೆ ಹರಿಸಿಕೊಂಡು ಕೊಯ್ನಾ ಜಲವಿದ್ಯುತ್ ಯೋಜನೆ ಹಾಗೂ ನೀರಾವರಿಗೆ ಮಹಾರಾಷ್ಟ್ರ ಮೇಲ್ದಂಡೆ ತೀರದ ರಾಜ್ಯವಾಗಿ ಬಳಸಿಕೊಂಡಿದ್ದು ಸಮಸ್ಯೆಯಾಗಿದೆ. ಕೃಷ್ಣಾ ಪೂರ್ವಕ್ಕೆ ಹರಿಯುವುದನ್ನು ಪಶ್ಚಿಮಕ್ಕೆ ತಿರುಗಿಸಿದ್ದರಿಂದ ನೀರಿನ ವಿವಾದ ಹುಟ್ಟಿತು. ಕೃಷಿಗೆ ಯೋಗ್ಯವಲ್ಲದ ಭೂಮಿಗಿಂತ ಜಲವಿದ್ಯುತ್‌ತ್ತನ್ನು ಸಮರ್ಥಿಸಿ ಕೊಂಡರು. ಮೇಲ್ದಂಡೆ ತೀರದ ರಾಜ್ಯಗಳು ಕೈಗೊಂಡ ಯೋಜನೆಗಳಿಂದ ವಿವಾದ ಹೆಚ್ಚಾಯಿತು. ಆಂಧ್ರವು ನಾಗಾರ್ಜುನ ಸಾಗರದಲ್ಲಿ ಸಂಗ್ರಹಿಸುವ ನೀರಿನ ಬಗ್ಗೆ ಮೇಲ್ದಂಡೆ ರಾಜ್ಯಗಳು ಆಕ್ಷೇಪಿಸಿದವು.

## ೧೯೫೧ರ ಒಪ್ಪಂದ

೧೯೫೧ರಲ್ಲಿ ಯೋಜನಾ ಆಯೋಗ ಕೃಷ್ಣಾನದಿ ನೀರಿನ ಹಂಚಿಕೆ ಕುರಿತು ನಡೆಸಿದ ಅಂತರ್ ರಾಜ್ಯ ಸಮಾವೇಶದಲ್ಲಿ ಒಪ್ಪಂದ ವಿವರಣಾ ಪತ್ರಕ್ಕೆ ಮುಂಬೈ, ಹೈದರಾಬಾದ್ ಮತ್ತು ಮದ್ರಾಸ್ ರಾಜ್ಯಗಳು ಸಮ್ಮತಿಸಿದವು. ಕರ್ನಾಟಕವು ಸಹ ಸಮ್ಮತಿಸುವುದೆಂದು ತಿಳಿಯಲಾಗಿತ್ತು, ಆದರೆ ದೂರ ಸರಿಯಿತು. ಕರ್ನಾಟಕ ಸ್ಥಿರೀಕರಿಸುತ್ತದೆ ಎಂದು ಎಲ್ಲ ರಾಜ್ಯಗಳ ನಂಬಿಕೆಗೆ ತದ್ವಿರುದ್ಧವಾಯಿತು.

೧೯೫೧ರಲ್ಲಿ ಕೃಷ್ಣಾನದಿ ನೀರಿನ ಹಂಚಿಕೆ ಬಗ್ಗೆ ವಾಜ್ಯ ಒಪ್ಪಂದವೆಂದು ಪಂಚಾಯ್ತಿ ನಿರ್ಣಯಿಸಿದಾಗ ಕರ್ನಾಟಕ ಒಪ್ಪಲಿಲ್ಲ. ಕರ್ನಾಟಕವು ಇದರಲ್ಲಿ ಭಾಗವಹಿಸುತ್ತದೆ ಎಂದು

ನಂಬಿ ಎಲ್ಲ ರಾಜ್ಯಗಳು ಸಮ್ಮತಿಸಿದವು. ನ್ಯಾಯಮೂರ್ತಿ ಬಿ. ಕೆ. ಮುಖರ್ಜಿ ಅವರು ಜೈ ನಾರಾಯಣ್, ರಾಮ್‌ಲೂಂಥಿಯಾ ಸೂರಜ್‌ಮಲ್ ಸಾಗರ್‌ಮಲ್ ಪ್ರಕರಣದಲ್ಲಿ ಪಂಚಾಯ್ತಿ ಈ ನಿರ್ಧಾರಕ್ಕೆ ಬಂದಿತ್ತು. ಉಭಯ ಪಕ್ಷಗಳು ಒಪ್ಪಂದವೊಂದನ್ನು ಮಾಡಿಕೊಳ್ಳುವಾಗ ಮತ್ತೊಂದು ಪಕ್ಷ ಒಪ್ಪಂದದ ಒಂದು ಭಾಗವಾಗಿರುವುದೆಂದೇ ಭಾವಿಸಿರುತ್ತದೆ.

## ಕೃಷ್ಣಾನದಿ ನೀರಿನ ಹಂಚಿಕೆ

೧೯೫೧ರ ಒಪ್ಪಂದ ಕೃಷ್ಣಾನದಿ ನೀರಿನ ಪರಿಪೂರ್ಣ ಒಪ್ಪಂದವಲ್ಲವೆಂದು ಅರಿತು, ನದಿನೀರಿನ ಸಮಾನ ಹಂಚಿಕೆಯು ಬಗ್ಗೆ ಹೊಸ ನಿಯಮಕ್ಕೆ ಮುಂದಾದರು. ರಾಜಸ್ಥಾನದಂಥಾ ಪ್ರದೇಶದ ಭೂಮಿಯ ಮೇಲ್ಪದರದಲ್ಲಿ ನೀರಿನ ಸೆಲೆಯೇ ಇಲ್ಲದೆ ವಿಶಿಷ್ಟವಾದ ಸ್ಥಳಗಳಲ್ಲಿ ನೀರಿರುವುದನ್ನು ಬಿಟ್ಟರೆ ನೀರಾವರಿ ಪ್ರದೇಶ ಕಡಿಮೆ. ಕೃಷ್ಣಾ ಜಲಾನಯನ ಪ್ರದೇಶದಲ್ಲಿ ಅಂತರ್ಜಲದ ಬಗ್ಗೆ ನಿಖರ ಮಾಹಿತಿ ಸಿಗುತ್ತದೆ. ಆದ್ದರಿಂದ ಕೃಷ್ಣಾನೀರಿನ ಸಮಾನ ಹಂಚಿಕೆಯ ಸಂದರ್ಭದಲ್ಲಿ ಅಂತರ್ಜಲದ ಪ್ರಶ್ನೆ ಮಹತ್ವವಲ್ಲದ ಕಾರಣ ಪಂಚಾಯ್ತಿ ನಿರ್ಧಾರದಂತೆ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ.

ಜಲಾನಯನ ಪ್ರದೇಶದ ಜಲಸಂಪನ್ಮೂಲ ಅದರ ಸಂಪೂರ್ಣ ನೀರಿನ ಹರಿಯುವಿಕೆಯನ್ನು ಹೊಂದಿರುತ್ತದೆ. ಹೀಗಾಗಿ ಭೂಪದರದ ಮೇಲೆ, ಭೂಮಿಯೊಳಗಡೆ ಹರಿಯುವ ಅಂತರ್ಜಲಗಳೆರಡೂ ಜಲಸಂಪನ್ಮೂಲದ ಭಾಗ. ಇದರಿಂದಾಗಿ ಕೃಷ್ಣಾ ನೀರಿನ ಹಂಚಿಕೆಯ ಸಂದರ್ಭದಲ್ಲಿ ಭೂಪದರದ ನೀರನ್ನು ಮರೆತಿರುವುದು ಸಮಂಜಸವಲ್ಲ. ಅಷ್ಟೇ ಅಲ್ಲ ಜಲಾನಯನ ಪ್ರದೇಶದ ಜಲಸಂಪನ್ಮೂಲದ ಬಳಕೆ, ಸಂಯುಕ್ತ ಉಪಯೋಗಕ್ಕೆ ಅಡ್ಡಿಯಾಗುತ್ತದೆ. ಸಂಬಂಧಿಸಿದ ರಾಜ್ಯಗಳ ಒಪ್ಪಂದವಿಲ್ಲದಿದ್ದರೆ, ಕಾನೂನು, ನ್ಯಾಯಾಂಗ ತೀರ್ಪಾಗಲಿ, ಆಯೋಗದ ತೀರ್ಮಾನವಾಗಲಿ ಇಲ್ಲದೆ ಹೋದರೆ ಸಮಸ್ಯೆಗಳು ಉದ್ಭವಿಸುತ್ತವೆ ಎನ್ನಲಾಗಿತ್ತು.

೧೯೭೮ ಆಗಸ್ಟ್ ೪ ರಂದು ಗೋದಾವರಿ ಜಲವಿವಾದ ಆಯೋಗ ಕೃಷ್ಣಾ ನದಿ ಕಣಿವೆಯ ೩ ರಾಜ್ಯಗಳ ಮಧ್ಯೆ ಆದ ಒಪ್ಪಂದದ ಪ್ರಕಾರ ಕೃಷ್ಣಾ ಕಣಿವೆಗೆ ಗೋದಾವರಿ ಕಣಿವೆಯಿಂದ ೮೦ ಟಿ.ಎಂ.ಸಿ. ಜಲಸಂಪನ್ಮೂಲ ವರ್ಗಾವಣೆ ಮುಖಾಂತರ ಅವಕಾಶ ಕಲ್ಪಿಸಲಾಗಿದೆ. ಇದರಲ್ಲಿ ಕರ್ನಾಟಕಕ್ಕೆ ಮರುತ್ಪತ್ತಿಯಲ್ಲಿ ೭ ಟಿ.ಎಂ.ಸಿ. ಸೇರಿದಂತೆ ಒಟ್ಟು ೨೩ ಟಿ.ಎಂ.ಸಿ. ದೊರೆಯಬೇಕಿದೆ. ಜನವರಿ ೨೯, ೧೯೭೯ರಲ್ಲಿ ಗೋದಾವರಿ ನದಿ ಕಣಿವೆ ರಾಜ್ಯಗಳ ಮಧ್ಯೆ ಅಂತರರಾಜ್ಯ ಒಪ್ಪಂದವಾಗಿ ಅಂಗೀಕರಿಸಲಾಗಿದ್ದರೂ, ಕೆಲಸ ಪ್ರಾರಂಭವಾಗಿಲ್ಲ.

ಕೃಷ್ಣಾ ನದಿ ನೀರನ್ನು ಮತ್ತೊಂದು ಜಲ ಪ್ರದೇಶಕ್ಕೆ ತಿರುಗಿಸುವ ವಿಷಯದ ಬಗ್ಗೆ ಪಂಚಾಯ್ತಿ ಅಮೆರಿಕಾದ ಉಚ್ಚನ್ಯಾಯಾಲಯ ಮತ್ತು ಅಂತಾರಾಷ್ಟ್ರೀಯ ನ್ಯಾಯ ಮಂಡಳಿಯ ತೀರ್ಪನ್ನು ಅವಲಂಬಿಸಿದೆ.[೫೭] ಯಾವುದೇ ನದಿದಂಡೆಯ ರಾಜ್ಯಗಳ ರಾಜಕೀಯ ಗಡಿಯೊಳಗಿರುವ ಪ್ರದೇಶಗಳಿಗೆ ನೀರನ್ನು ಹರಿಯಬಿಡುವುದು ಸರಿಯಾದ ಕ್ರಮ. ಆದರೆ ನದಿ ತೀರವಿಲ್ಲದ ರಾಜ್ಯಗಳಿಗೆ ನೀರು ಬಿಡುವ ಬಗ್ಗೆ ಪಂಚಾಯ್ತಿ ಉತ್ತರಿಸಿಲ್ಲ.

ಈ ನದಿ ನೀರನ್ನು ಲಾಭದಾಯಕ ಉದ್ದೇಶಕ್ಕೆ ಬಳಸಿದ್ದಾರೆ. ಸಮಾನ ನೀರಿನ ಹಂಚಿಕೆ ಮತ್ತು ಮುಂದಿನ ಬಳಕೆಯ ದೃಷ್ಟಿಯಿಂದ ಜಲಾನಯನ ಪ್ರದೇಶದೊಳಗಿನ ಅಗತ್ಯಕ್ಕೆ ನೀರನ್ನು ಬಿಡುವುದು ಸೂಕ್ತವೆಂದು ಪಂಚಾಯ್ತಿ ಹೇಳಿತು. ಆಂಧ್ರ ಪ್ರದೇಶ ತನ್ನ ಜಲಾನಯನ ಪ್ರದೇಶದಿಂದ ತಿರುಗಿಸಿ ಪಶ್ಚಿಮಕ್ಕೆ ಹರಿಸಿದ ನೀರು ನೀರಾವರಿ ಮತ್ತು ಜಲವಿದ್ಯುತ್ ಉತ್ಪಾದನೆಗಾಗಿ, ಜಲಾನಯನ ಪ್ರದೇಶದಿಂದ ಹೊರಗಿದ್ದರೂ ಮುಖಜ ಭೂಮಿಗಾಗಿ ಕೃಷ್ಣಾನದಿಯನ್ನು ಅವಲಂಬಿಸಿದೆ.

ಕೃಷ್ಣಾ ನೀರನ್ನು ಮಹಾರಾಷ್ಟ್ರವು ವಿದ್ಯುತ್ ಉತ್ಪಾದನೆಗಾಗಿ ಪಶ್ಚಿಮದ ಕಡೆ ತಿರುಗಿಸಿದನ್ನು ಎಲ್ಲ ಪಕ್ಷಗಳು ಒಪ್ಪಿಕೊಂಡವು. ಹೆಚ್ಚಿನ ನೀರನ್ನು ಮಹಾರಾಷ್ಟ್ರ ತಿರುಗಿಸಿಕೊಂಡಿದೆ ಎಂದು ಉಳಿದ ರಾಜ್ಯಗಳು ವಿವಾದ ಎಬ್ಬಿಸಿದವು. ಕೃಷ್ಣಾ ನದಿ ನೀರನ್ನು ಜಲವಿದ್ಯುತ್ ಉತ್ಪಾದನೆಗಿಂತ ನೀರಾವರಿ ಯೋಜನೆಗೆ ಬಳಸಲು ಪಂಚಾಯ್ತಿ ಒಪ್ಪಿತು; ಇದಕ್ಕೆ ಎರಡು ಕಾರಣಗಳಿವೆ : ನೀರಿಗೆ ಪರ್ಯಾಯವಾಗಿ ಬೇರೇನನ್ನೂ ಬಳಸಿ ಕೃಷಿ ಮಾಡಲಾಗುವುದಿಲ್ಲ. ಜಲವಿದ್ಯುತ್ ಉತ್ಪಾದನೆಗೆ ನೀರನ್ನು ಬಿಟ್ಟರೂ, ಕಲ್ಲಿದ್ದಲು, ತೈಲ, ಮತ್ತಿತರ ನೈಸರ್ಗಿಕ ಸಂಪನ್ಮೂಲಗಳಿವೆ. ಭಾರತ ಕೃಷಿಭರಿತ ದೇಶ, ಹೆಚ್ಚುವ ಜನಸಂಖ್ಯೆ, ಇತರ ಕಾರಣಗಳಿಂದ ನೀರಾವರಿಗೆ ಆದ್ಯತೆ ಬೇಕು. ಹೀಗಾಗಿ ಜಲವಿದ್ಯುತ್‌ಗಿಂತ ನೀರಾವರಿಗೆ ಆದ್ಯತೆ ನೀಡಿದರು.

ಮೇ ೩೧, ೨೦೦೦ದ ನಂತರ ತನ್ನ ಆಜ್ಞೆಯನ್ನು ಪುನರ್ವಿಮರ್ಶಿಸಬಹುದೆಂದು ಪಂಚಾಯ್ತಿ ಹೇಳಿತು. ಇದರಿಂದ 'ಎ' ಮತ್ತು 'ಬಿ' ಯೋಜನೆಗಳನ್ನು ಸೂಚಿಸಲಾಗಿದೆ. 'ಎ'ಗೆ ನೀರಿನ ಹಂಚಿಕೆಯಾಗಿದ್ದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ. ರಾಜ್ಯಗಳ ನಡುವೆ ಒಪ್ಪಂದವಾದ ನಂತರ ಅಥವಾ ಸಂಸತ್ತಿನ ಪರವಾನಗಿ ಸಿಕ್ಕನಂತರವೂ ಯೋಜನೆ 'ಬಿ' ಜಾರಿಯಾಗಲಿಲ್ಲ. ಬದಲಾಗುವ ಸಾಮಾಜಿಕ, ಆರ್ಥಿಕ ಚಟುವಟಿಕೆಗಳಿಂದ ನೀರಿನ ಹಂಚಿಕೆಗೆ ಪುನರ್ವಿಮರ್ಶಿಸಿ, ಧಕ್ಕೆ ಬಾರದ ಹಾಗೆ ನೋಡಿಕೊಂಡಿತು. ಕೃಷ್ಣಾನದಿ ನೀರಿನ ಬಗೆಗಿನ ಪಂಚಾಯ್ತಿ ತೀರ್ಮಾನದಂತೆ ಒಪ್ಪಂದಕ್ಕೆ ಇತರ ರಾಜ್ಯಗಳು ಬದ್ಧವಾದವು.

❑❑

# ೬. ಕರ್ನಾಟಕದ ಆಂತರಿಕ ಜಲಸಮಸ್ಯೆ ಕುರಿತ ಚಳವಳಿಗಳು

ರಾಜ್ಯದ ಆಂತರಿಕ ಜಲಸಮಸ್ಯೆ ಬೃಹತ್ ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಇಲ್ಲಿ ಸಣ್ಣ ಕೆರೆ, ಕಾಲುವೆ, ಚಿಕ್ಕ ಅಣೆಕಟ್ಟುಗಳು ಸಮರ್ಪಕವಾಗಿ ನೀರು ಪೂರೈಕೆ ಮಾಡದೆ ಇದ್ದಾಗ ರೈತರು ಪ್ರತಿಭಟಿಸಿ ಚಳವಳಿ ನಡೆಸುತ್ತಾರೆ. ಎಲ್ಲ ಭೌಗೋಳಿಕ ಪ್ರದೇಶ, ಎಲ್ಲಾ ಕಾಲಕ್ಕೂ ಜಲಾಶಯಗಳಿಂದ ನೀರು ಸಿಗುವುದಿಲ್ಲ. ಇದಕ್ಕೆ ಪರ್ಯಾಯ ವ್ಯವಸ್ಥೆಯನ್ನು ಅಂತಹ ಸಂದರ್ಭದಲ್ಲಿ ಮಾಡಿಕೊಳ್ಳಬೇಕಾಗುತ್ತದೆ. ಹಿಂದಿನಿಂದಲೂ ಬಾವಿಗಳನ್ನು ತೋಡಿ ಏತ ನೀರಾವರಿ ಮಾಡುವ ವ್ಯವಸ್ಥೆ ಇದೆ. ಇಂದು ಅಂತರ್ಜಲವೇ ಬತ್ತಿ ಹೋಗುವ ಸಂದರ್ಭದಲ್ಲಿ ಬಾವಿಗಳ ಪರಿಸ್ಥಿತಿ ಅಧೋಗತಿಗಿಳಿಯಿತು. ಹೀಗೆ ಕರ್ನಾಟಕದ ಅನೇಕ ಕೆರೆಗಳು ನೀರಾವರಿಗೆ ಯೋಗ್ಯವಾಗಿವೆ. ಹಂಚಿಕೆಯಲ್ಲಿ ನೀರು ಪೋಲು ಮಾಡುವಲ್ಲಿ ಚಳವಳಿ, ಗದ್ದಲ, ಗಲಾಟೆಗಳು ಸಂಭವಿಸುತ್ತವೆ. ಆಂತರಿಕ ಜಲಸಮಸ್ಯೆಯಲ್ಲಿ ನಮ್ಮ ವ್ಯವಸ್ಥೆಯ ವಿರುದ್ಧವೇ ಸುಧಾರಣೆ ಮಾಡಲು ಚಳವಳಿ ನಡೆಸುವುದು ಸಮಂಜಸವಾಗಿದೆ. ರೈತ-ನಾಗರಿಕರು ಸೇರಿ ಸರ್ಕಾರ (ಅಧಿಕಾರಿಗಳ)ದ ವಿರುದ್ಧ, ತಪ್ಪಿತಸ್ಥರ ವಿರುದ್ಧ, ಚಳವಳಿ ನಡೆಸುತ್ತಾರೆ. ಏಕೆಂದರೆ ಸಣ್ಣ ಅಣೆಕಟ್ಟುಗಳಿಂದ ನೀರಾವರಿ ಕಷ್ಟ : ಅಲ್ಪ ಪ್ರಮಾಣದ ನೀರಿನಲ್ಲಿ ಅತಿ ಹೆಚ್ಚಿನ ಬೆಳೆಗಳನ್ನು ಬೆಳೆಯುವುದರಿಂದ. ಬೃಹತ್ ನೀರಾವರಿ ಯೋಜನೆಗಳಿಗಿಂತ ಇಲ್ಲಿ ವಿವಾದ, ಚಳವಳಿಗಳು ವಿರಳವಾಗಿ ನಡೆದರೂ ಗಂಭೀರ ಸ್ವರೂಪದಿಂದ ಕೂಡಿರುತ್ತವೆ.

ನೀರಾವರಿಯ ಅಭಿವೃದ್ಧಿಗಾಗಿ ೧೯೦೧ರಲ್ಲಿ ಪ್ರಥಮ ನೀರಾವರಿ ಆಯೋಗ ರಚನೆಯಾಗಿ, ಇದು ೧೯೦೩ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ತರುವಾಯ ರಾಜ್ಯದಲ್ಲಿ ಒಂದು ಸಮೀಕ್ಷೆ ಪ್ರಕಾರ ೧೮೮೯, ೧೯೦೪, ೧೯೦೫, ೧೯೦೮, ೧೯೧೧, ೧೯೧೩, ೧೯೧೮, ೧೯೨೦, ೧೯೨೨, ೧೯೨೬, ೧೯೩೪, ೧೯೩೭, ಮತ್ತು ೧೯೪೫ ನೇ ವರ್ಷಗಳಲ್ಲಿ ಸಂಭವಿಸಿದ ಬರಗಾಲದಿಂದ ತೀವ್ರ ಪರಿಣಾಮ ಬೀರಿದಾಗ ಮೈಸೂರು ಸಂಸ್ಥಾನದ ಮೇಜರ್ ಸ್ಯಾಂಕಿ ಎಂಬ ಇಂಜನಿಯರ್ ನೀರಾವರಿ ಅಭಿವೃದ್ಧಿಗೆ ಶ್ರಮಿಸಿದ. ನಂತರ ಸರ್. ಎಂ. ವಿಶ್ವೇಶ್ವರಯ್ಯನವರು ಅನೇಕ ಯೋಜನೆಗಳನ್ನು ರೂಪಿಸಿದರು.

ಸ್ವಾತಂತ್ರ್ಯ ನಂತರ (೧೯೪೭-೧೯೯೭) ಪಂಚವಾರ್ಷಿಕ ಯೋಜನೆಗಳ ಮೂಲಕ ನೀರಾವರಿ ಜಲಾಶಯಗಳ ನಿರ್ಮಾಣಕ್ಕೆ ಗಮನಕೊಡಲಾಯಿತು. ಸು. ೬೮ ಬೃಹತ್ ಮತ್ತು ಮಧ್ಯಮ ನೀರಾವರಿ ಯೋಜನೆಗಳಿವೆ. ಈಗ ೩೪ ಮುಗಿದಿದ್ದು, ಇನ್ನು ೩೪ ಯೋಜನೆಗಳು ಪ್ರಗತಿಯಲ್ಲಿವೆ. ೧೯೫೬ರ ನಂತರ ದೇವರಾಜ ಅರಸು, ನಿಜಲಿಂಗಪ್ಪ,

ವೀರೇಂದ್ರಪಾಟೀಲ್ ಇತರ ಮುಖ್ಯಮಂತ್ರಿಗಳು ನೀರಾವರಿ ಯೋಜನೆಗಳನ್ನು ಆರಂಭಿಸಿದ್ದಾರೆ. ಉದಾ: ಹಾರಂಗಿ, ಹೇಮಾವತಿ, ಘಟಪ್ರಭಾ, ಮಲಪ್ರಭಾ ಮುಂತಾದವುಗಳು. ೧೯೭೦ರ ದಶಕದಲ್ಲಿ ಕರ್ನಾಟಕದ ಜಲಸಮಸ್ಯೆ ಬಗೆಗೆ ಶ್ರೀಮತಿ ಇಂದಿರಾಗಾಂಧಿಯವರು ನಿವಾರಿಸುವ ಪ್ರಯತ್ನ ಮಾಡಿದರು ಸಫಲವಾಗಲಿಲ್ಲ.

ಇಲ್ಲಿ ಮಧ್ಯಮ, ಸಣ್ಣ ನೀರಾವರಿ ಯೋಜನೆಗಳ ಸ್ಪಷ್ಟ ಚಿತ್ರಣವೆಂದರೆ : ೫ ಕೋಟಿ ರೂಪಾಯಿಗಳಿಗೂ ಹೆಚ್ಚಿನ ಬಂಡವಾಳವಿದ್ದ ನೀರಾವರಿ ಯೋಜನೆಗೆ ಬೃಹತ್ (೧೦ ಸಾವಿರ ಹೆಕ್ಟೇರ್) ಎಂದು, ೧೦ ಲಕ್ಷದಿಂದ ೫ ಕೋಟಿ ರೂ.ವರೆಗೆ ಮಧ್ಯಮವೆಂದು (೨೦೦೦-೧೦,೦೦೦ ಹೆಕ್ಟೇರ್), ೧೦ ಲಕ್ಷ ರೂ.ಗೆ ಕಡಿಮೆ ಇರುವ ಯೋಜನೆಗಳನ್ನು ಸಣ್ಣ ನೀರಾವರಿ ಎಂದು ಕರೆಯಲಾಗಿದೆ (೨೦೦೦ ಹೆಕ್ಟೇರು). ಈ ಯೋಜನೆಗಳಲ್ಲಿ ಪ್ರಮುಖವಾಗಿ ಸಣ್ಣ ನೀರಾವರಿ, ಮಧ್ಯಮ ನೀರಾವರಿಗೆ ಒತ್ತು ಕೊಡಲಾಗುವುದು. ಉದಾ: ಚಿತ್ರದುರ್ಗ ಜಿಲ್ಲೆಯ ಸಣ್ಣ ನೀರಾವರಿ ಯೋಜನೆಯಾದ ರಂಗಯ್ಯನದುರ್ಗ ಜಲಾಶಯದಲ್ಲಿ ೧೩-೩-೧೯೯೯ ರಂದು ಎರಡು ಗ್ರಾಮಗಳ ಜನರ ನಡುವೆ ಘರ್ಷಣೆಯಾಗಿ, ಪೋಲೀಸ್ ಠಾಣೆ, ನ್ಯಾಯಾಲಯದ ಮೊರೆ ಹೋಗಿದ್ದಾರೆ. ನೀರಿನ ಹಂಚಿಕೆ ಸಂಬಂಧ ಓಬೇನಹಳ್ಳಿ ಕೆರೆಗೆ ನೀರು ಬಿಡಲಿಲ್ಲವೆಂಬ ಕಾರಣದಿಂದ ಉಭಯರು ಘರ್ಷಣೆಗಿಳಿದರು. ಇದಕ್ಕೆ ನೀರಿನ ಸಾಮರ್ಥ್ಯವೇ ಕಡಿಮೆ ಇರುವಾಗ ಹೆಚ್ಚಿನ ನೀರು ನಿರೀಕ್ಷಿಸುವುದು ತಪ್ಪು. ರೈತರು ಇಂತಹ ಚಳವಳಿಗಳನ್ನು ಕರ್ನಾಟಕದಾದ್ಯಂತ ನಡೆಸುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಪ್ರಚಲಿತವಿರುವ ನೀರಾವರಿ ವಿವಾದದ ಚಳವಳಿಗಳು ನಾಳೆಗೂ ಸಮಸ್ಯೆಯಾಗಿ ಚಳವಳಿಗಳು ನಡೆಯುವ ಸಂದರ್ಭ ಒದಗಿಬರಬಹುದು. ಇಂಥ ಘಟನೆ ಮತ್ತು ಸಂಗತಿಗಳನ್ನು ಸಂಭವನೀಯ ಚಳವಳಿಗಳೆಂದು ಕರೆದು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಇಲ್ಲಿ ತುಂಗಾತಿರುವು, ಭದ್ರಾನಾಲೆ, ತುಂಗಭದ್ರಾ ಕಾಲುವೆ, ಇಂದಿನ ಕಾವೇರಿ ಘಟನೆಗಳು, ಕೃಷ್ಣಾ ಮೇಲ್ದಂಡೆ ಘಟನೆಗಳಲ್ಲದೆ, ಕುಡಿಯುವ ನೀರಿಗಾಗಿ ಪ್ರತಿನಿತ್ಯ ನಡೆಸುವ ಚಳವಳಿ, ಸತ್ಯಾಗ್ರಹ, ಹೋರಾಟ, ರಸ್ತಾರೋಕೊ, ಬಂದ್, ಮುಂತಾದವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಲಾಗುವುದು. ಇಂದಿನ ಸಮಸ್ಯೆ, ವಿವಾದಗಳು ಭವಿಷ್ಯತ್ತಿನ ಘಟನೆಗಳಿಗೆ ಕಾರಣವಾಗಿ ಚಳವಳಿ ಅಥವಾ ಭೀಕರ ದುರಂತಗಳು ಸಂಭವಿಸಬಹುದು.

ಜನಸಂಖ್ಯೆ ಹೆಚ್ಚಾದಂತೆ ಪ್ರಚಲಿತ ಸಂದರ್ಭದಲ್ಲಿ ಕುಡಿಯುವ ನೀರಿಗಾಗಿ ರಾಜ್ಯದ ಅನೇಕ ಕಡೆಗಳಲ್ಲಿ ಹಾಹಾಕಾರದ ಕೂಗು ಕೇಳಿಬರುತ್ತದೆ. ಅಣೆಕಟ್ಟು, ಕೆರೆ, ಕಾಲುವೆಗಳಿದ್ದರೂ ಸರಬರಾಜು ಮಾಡುವಾಗ ವ್ಯತ್ಯಯ ಉಂಟಾಗುತ್ತದೆ. ಪ್ರತಿವರ್ಷ ಕರ್ನಾಟಕದಲ್ಲಿ ಅತೀ (ಬರಗಾಲ) ಹೆಚ್ಚಿನ ನೀರಿನ ಅಭಾವವನ್ನು ಎದುರಿಸುವ ಜಿಲ್ಲೆ ಮತ್ತು ತಾಲ್ಲೂಕುಗಳೆಂದರೆ : ತುಮಕೂರು ಜಿಲ್ಲೆಯ ಪಾವಗಡ, ಶಿರಾ, ಕೊರಟಗೆರೆ, ಗುಬ್ಬಿ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮುರು, ಹಿರಿಯೂರು, ಹೊಸದುರ್ಗ, ದಾವಣಗೆರೆ ಜಿಲ್ಲೆಯ ಜಗಳೂರು; ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಲ್ಲದೇ ಬೀದರ್ ಜಿಲ್ಲೆಯಲ್ಲಿ ಔರಾದ್, ಹುಮನಾಬಾದ್, ಆಳಂದ, ಚಿಂಚೋಳಿ, ಬಾಗೇವಾಡಿ, ಬಿಜಾಪುರ

ಜಿಲ್ಲೆಯಲ್ಲಿ ಇಂಡಿ, ಜಮಖಂಡಿ, ಮುಧೋಳ, ಮುದ್ದೇಬಿಹಾಳ, ಸಿಂದಗಿ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಸೊಂಡೂರು, ಕೊಪ್ಪಳ-ರಾಯಚೂರು ಜಿಲ್ಲೆಗಳ ಗಂಗಾವತಿ, ಲಿಂಗಸುಗೂರು, ಕುಷ್ಟಗಿ, ಸಿಂಧನೂರು, ಗದಗ ಜಿಲ್ಲೆಯ ರೋಣ, ಬೆಳಗಾವಿಯ ಅಥಣಿ, ರಾಯಬಾಗ ಅಲ್ಲದೆ ಬೆಂಗಳೂರು ಅಕ್ಕಪಕ್ಕ, ಕೋಲಾರ ಜಿಲ್ಲೆಯ ದೇವನಹಳ್ಳಿ, ಮಾಗಡಿ, ನೆಲಮಂಗಲ, ಚಿಕ್ಕಬಳ್ಳಾಪುರ, ಗೌರಿಬಿದನೂರು, ಕೋಲಾರ ಮತ್ತು ಶಿಡ್ಲಘಟ್ಟ ಇತರ ಸ್ಥಳಗಳು ಕಂಡುಬರುತ್ತವೆ.

ರಾಜ್ಯದ ಭೌಗೋಳಿಕ ಗಡಿಯೊಳಗೆ ನೀರಾವರಿ ಮತ್ತು ಕುಡಿಯುವ ಸಲುವಾಗಿ ನೀರಿನ ಪೂರೈಕೆ ಬಗೆಗೆ ಅಂತಃಕಲಹ, ಹೋರಾಟ, ಚಳವಳಿಗಳು ಸಂಭವಿಸುವುದರಿಂದ ಆಂತರಿಕ ಸಮಸ್ಯೆ ಎಂದು ಮೇಲೆ ತಿಳಿಸಿದಂತೆ ಅರ್ಥೈಸಲಾಗುತ್ತದೆ. ಈ ವ್ಯಾಪ್ತಿಯೊಳಗೆ ಕೆಲವು ಪ್ರಮುಖವಾದ ಯೋಜನೆಗಳನ್ನು ಮಾತ್ರ ವಿಶ್ಲೇಷಣೆ ಮಾಡಲಾಗುವುದು.

### ೬:೧. ಬೃಹತ್, ಮಧ್ಯಮ ಮತ್ತು ಸಣ್ಣ ನೀರಾವರಿಗಳ ವಿವಾದ ಕುರಿತ ಚಳವಳಿಗಳು

ಕರ್ನಾಟಕದ ನೀರಾವರಿ ಯೋಜನೆಗಳನ್ನು ೩ ಭಾಗಗಳನ್ನಾಗಿ ವಿಭಾಗಿಸುತ್ತೇವೆ : ಬೃಹತ್ ನೀರಾವರಿ, ಮಧ್ಯಮ ನೀರಾವರಿ ಮತ್ತು ಸಣ್ಣ ನೀರಾವರಿ. ಭೌಗೋಳಿಕ ವಿಸ್ತೀರ್ಣದಿಂದ ಮೇಲಿನಂತೆ ನೋಡಲು ಸಾಧ್ಯ. ಸಹಸ್ರಾರು, ಲಕ್ಷಗಟ್ಟಲೆ ಹೆಕ್ಟೇರ್ ಪ್ರದೇಶ ನೀರಾವರಿಯಾದರೆ ಅದು ಬೃಹತ್ ನೀರಾವರಿ ಯೋಜನೆಗೊಳಪಡುತ್ತದೆ. ಹೀಗೆ ಮಧ್ಯಮ, ಸಣ್ಣ ಹಂತಗಳೆಂದು ಗುರುತಿಸುವಾಗಲೂ ಹೆಕ್ಟೇರ್, ನೀರಿನ ಸಾಮರ್ಥ್ಯ ಗಮನಾರ್ಹವಾಗಿರುತ್ತವೆ. ಕರ್ನಾಟಕದಲ್ಲಿ ಪ್ರಸ್ತುತ ಯೋಜನೆಗಳ ಪರಿಚಯ ಇಲ್ಲಿ ಮಾಡಲಾಗುತ್ತದೆ.

ಇವುಗಳ ಪೈಕಿ ಕಬಿನಿ ಯೋಜನೆಯ ಎರಡನೇ ಹಂತಕ್ಕೆ ೬೨೨.೫೦ ಕೋಟಿ ಅಂದಾಜು ವೆಚ್ಚ ಮಾಡಲಾಗಿತ್ತು. ಇದರ ಸರ್ವೆ ಕೆಲಸ ಮುಗಿದಿದೆ. ಕಬಿನಿ ಹಾಗೂ ವರುಣಾ ನಾಲಾ ವೃತ್ತವನ್ನು ಕಬಿನಿ ನಾಲಾ ವಿಭಾಗಕ್ಕೆ ವಹಿಸಲಾಗಿದೆ. ಈ ಕಾರ್ಯಕ್ಕೆ ೧೫ ಲಕ್ಷ ರೂ. ಖರ್ಚಾಗಿದೆ. 'ಕಬಿನಿಯೋಜನೆಭಾಗ್ಯಜಲ' ಸ್ಥಾಪನೆ ಮಾಡುವ ಉದ್ದೇಶವಿತ್ತು, ಈ ನಿರ್ಧಾರವನ್ನು ಈಗ ಬದಲಾಯಿಸಿದ್ದಾರೆ. ಮೈಸೂರು, ಮಂಡ್ಯ ಜಿಲ್ಲೆಯ ರೈತರ ಚಳವಳಿಗಳಿಂದ ಸು. ೨೭ ಸಾವಿರ ಎಕರೆಗೆ ನೀರಾವರಿ ಮಾಡಲು ಅನುಕೂಲವಾಯಿತು.

ನೇತ್ರಾವತಿ ಮತ್ತು ಭದ್ರಾ ಮೇಲ್ದಂಡೆ ಯೋಜನೆಗಳನ್ನು ಮುಂಗಡ ಪತ್ರದಲ್ಲಿ ಸೇರಿಸಲು ಅನೇಕರು ಒತ್ತಾಯಿಸಿದ್ದಾರೆ. ಅವರಲ್ಲಿ ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು, ಶಿವಮೊಗ್ಗ, ಬಳ್ಳಾರಿ ಮತ್ತು ಕೋಲಾರ ಜಿಲ್ಲೆಗಳ ಶಾಸಕರು ೯-೩-೯೮ ರಂದು ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಸಿದರು. ಅಭಾವ ಪೀಡಿತ ಪ್ರದೇಶಗಳ ನೀರಾವರಿ ಅಭಿವೃದ್ಧಿ ಸಮಿತಿ ಅಧ್ಯಕ್ಷ ಜಿ. ಎಸ್. ಪರಮಶಿವಯ್ಯ ಇದಕ್ಕೆ ಒತ್ತಾಯಿಸಿ, ಸರ್ಕಾರ ಒಪ್ಪಲಿಲ್ಲವೆಂದರೆ ಉಗ್ರ ಹೋರಾಟ ಮಾಡುವುದಾಗಿ ತಿಳಿಸಿದರು. ಕೃಷ್ಣಾ ನದಿ ನೀರಿನಲ್ಲಿ ೭೩೪ ಟಿ.ಎಂ.ಸಿ. ನೀರನ್ನು ೨೦೦೦ ಇಸ್ವಿಯೊಳಗೆ ಪಡೆಯಬೇಕು. ಕಾವೇರಿಯಿಂದ

೧೧೯.೯೨ ಟಿ.ಎಂ.ಸಿ. ನೀರು ಕಿರುನೀರಾವರಿಗೆ ಬಳಸಲಾಗುತ್ತದೆ. ಉಳಿದ ೬೦೯.೦೮ ಟಿ.ಎಂ.ಸಿ ನೀರಲ್ಲಿ ದಕ್ಷಿಣ ಕರ್ನಾಟಕವು ೯೧.೮೮ ಟಿ.ಎಂ.ಸಿ. ನೀರನ್ನು ಪಡೆದರೆ, ೫೧೩.೨೫ ಟಿ.ಎಂ.ಸಿ. ನೀರನ್ನು ಪಡೆಯಬಹುದು. ಭದ್ರಾ ಉಪಕೊಳ್ಳ ಪ್ರದೇಶದಲ್ಲಿ ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ, ಕೋಲಾರ ಮತ್ತು ತುಮಕೂರು ಜಿಲ್ಲೆಗಳು ಬರಪೀಡಿತ ಪ್ರದೇಶಗಳಾಗಿವೆ. ಇವುಗಳಿಗೆ ನೀರು ಒದಗಿಸಲು ಸಲಹಾ ಸಮಿತಿ ರಚಿಸಿದೆ. ಈ ಪ್ರದೇಶಗಳಿಗೆ ನೀರಾವರಿ ಅಭಿವೃದ್ಧಿ ಸಲಹಾ ಸಮಿತಿ ರಾಜ್ಯದ ನೀರಾವರಿ ಯೋಜನೆಗಳ ಬಗ್ಗೆ ವಿಸ್ತೃತವಾದ ಅಧ್ಯಯನ ನಡೆಸಲಾಯಿತು. ಭದ್ರಾ ಮೇಲ್ದಂಡೆ ಯೋಜನೆ ಬಗೆಗೆ ೭ ಪರ್ಯಾಯ ಯೋಜನೆಗಳನ್ನು ರೂಪಿಸಿ ಸರ್ಕಾರಕ್ಕೆ ಸಲ್ಲಿಸಿದ್ದರೂ, ಇವುಗಳನ್ನು ವಿರೋಧಿಸಿ ವಿಧಾನ ಪರಿಷತ್ ಸದಸ್ಯ ವಿ. ಎಸ್. ಉಗ್ರಪ್ಪ ಅವರು (೧೯೯೭-೯೮) ಭದ್ರಾ ಮೇಲ್ದಂಡೆ ಯೋಜನೆಯೇ ಬೇಕು ಎಂದು ಒತ್ತಾಯಿಸಿದ್ದಾರೆ.

ಹೊಸ ಕೆರೆಗಳ ನಿರ್ಮಾಣ ಸರ್ಕಾರದಿಂದ ಮಾತ್ರ ಸಾಧ್ಯ ಎಂಬುದಕ್ಕೆ ಉದಾ: ಬಾಗೆಪಲ್ಲಿ ತಾಲೂಕಿನ ಚಿತ್ರಾವತಿ ನದಿಗೆ ಅಡ್ಡಲಾಗಿ ಹೊಸಕೆರೆ ನಿರ್ಮಿಸಬೇಕೆಂಬ ಜನರ ಒತ್ತಾಯಕ್ಕೆ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ ಎಂದು ಸಣ್ಣ ನೀರಾವರಿ ಸಚಿವ ತಿಪ್ಪೇಸ್ವಾಮಿ ತಿಳಿಸಿದ್ದಾರೆ. ಸಿಪಿಎಂನ ಜಿ. ವಿ. ಶ್ರೀ ರಾಮರೆಡ್ಡಿ, ಬಿಜೆಪಿಯ ಶಿವಾನಂದ ನಾಯ್ಕ ಅವರ ಪ್ರಶ್ನೆಗೆ ಮೇಲಿನಂತೆ ವಿಧಾನಸಭೆಯಲ್ಲಿ ಉತ್ತರ ಕೊಟ್ಟರು. ಜನ ಪ್ರತಿನಿಧಿಗಳಾದ ರಾಜಕೀಯ ಧುರೀಣರು ಚಳವಳಿ ಮಾಡಲು ಮುಂದಾಗುವ ದೃಶ್ಯ ಇಲ್ಲಿ ಕಾಣುತ್ತೇವೆ.

ಹಿಪ್ಪರಗಿ ಬಂದಾರದ ಎತ್ತರ ಮತ್ತು ಅದರ ಹಿನ್ನೀರಿನಲ್ಲಿ ಮುಳುಗಡೆಯಾಗ ಬಹುದಾದ ಭೂಮಿಯ ವಿಸ್ತೀರ್ಣ ಕುರಿತು ಮಹಾರಾಷ್ಟ್ರದ ಮುಖ್ಯಮಂತ್ರಿ ಪ್ರಭಾಕರರಾಣೆಯವರೊಂದಿಗೆ ಜೂನ್ ೧೯೯೯ರಲ್ಲಿ ಮುಖ್ಯಮಂತ್ರಿ ಜೆ. ಹೆಚ್. ಪಟೇಲ್ ಒಪ್ಪಂದ ಮಾಡಿಕೊಂಡಿದ್ದಾರೆ. ಆಂಧ್ರಪ್ರದೇಶವು ಆಲಮಟ್ಟಿ ಅಣೆಕಟ್ಟು ಎತ್ತರದ ಬಗ್ಗೆ ಸುಪ್ರೀಂ ಕೋರ್ಟ್‌ನಲ್ಲಿ ತಕರಾರು ಎತ್ತಿದಾಗ ನಿಯೋಜಿತ ಎತ್ತರಕ್ಕೆ ಆಲಮಟ್ಟಿಯಲ್ಲಿ ತೂಬು ಕೂಡಿಸಿದರೆ ಹಿಪ್ಪರಗಿ ಬಂದಾರ ಮುಳುಗಡೆಯಾಗುತ್ತದೆ. ಮಹಾರಾಷ್ಟ್ರ ತನ್ನ ಭೂಮಿ ಮುಳುಗಡೆಯಾಗುವುದೆಂಬ ಆತಂಕದಿಂದ ಪಾರು ಮಾಡಲು ಆ ರಾಜ್ಯದ ಮುಖ್ಯಮಂತ್ರಿ ಜತೆ ೨೯-೬-೯೯ ರಂದು ಪುನಃ ಮಾತುಕತೆ ನಡೆಸಿದರು.

ಹಾರಂಗಿ ಅಣೆಕಟ್ಟಿನಿಂದ ಜಲವಿದ್ಯುತ್ ಯೋಜನಾ ಘಟಕದ ಕಾಮಗಾರಿ ಮುಕ್ಕಾಲು ಭಾಗ ಮುಗಿದಿದೆ. ೧೯೯೯ ಮೇ ವರೆಗೆ ವಿದ್ಯುತ್ ಉತ್ಪಾದಿಸುವ ಸಾಧ್ಯತೆ ಇತ್ತು. ಕೊಡಗು ಜಿಲ್ಲೆಗೆ ೯ ಮೆಗಾವ್ಯಾಟ್ ವಿದ್ಯುತ್ ಲಭಿಸಲಿದೆ. ಇದಕ್ಕೆ ೫೦ ಕೋಟಿ ರೂ. ಖರ್ಚಾಗುತ್ತಿದ್ದು , ಸುರಂಗದ ಮೂಲಕ ನೀರು ಹರಿಯುತ್ತದೆ. ಇದರಿಂದ ರೈತರಿಗ ಅನೇಕ ರೀತಿಯ ಸಮಸ್ಯೆಗಳಿವೆ.

ಕುಕ್ಕರಹಳ್ಳಿ ಕೆರೆ ಇಂದು ಅವಸಾನದ ಅಂಚಿನಲ್ಲಿರುವುದು ಸ್ಪಷ್ಟ. ೧೮೬೪ರಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರ್ ಆಳ್ವಿಕೆಯಲ್ಲಿ ಪೂರ್ಣಯ್ಯನವರು ಇದನ್ನು ನಿರ್ಮಿಸಿದರಂತೆ. ನಿರ್ಮಾಣದ ಉದ್ದೇಶ ಮೈಸೂರು ನಗರಕ್ಕೆ ನೀರೊದಗಿಸುವುದಾಗಿತ್ತು. ಶ್ರೀಗಂಧದ ಎಣ್ಣೆಯ ಕಾರ್ಖಾನೆಗೆ ಇದರ ನೀರು ಬಿಡಲಾಗುತ್ತದೆ. ಈಗ ಹೂಳು ತುಂಬಿ,

ಗಿಡ-ಗಂಟೆ, ಪಾಚಿ ಬೆಳೆದಿದೆ. ಇತರ ವಿಧ್ವಂಸಕ ಕೃತ್ಯಗಳಿಂದ ಈ ಕೆರೆಯ ಒಳ ಹರಿವು ಕ್ಷೀಣಿಸುತ್ತಿದೆ.

ಕರ್ನಾಟಕದ ಅನೇಕ ಕೆರೆ, ಜಲಾಶಯಗಳಲ್ಲಿಯೂ ಹೂಳೆತ್ತಲು ಪ್ರತ್ಯೇಕ ನಿಧಿಯನ್ನು ಸ್ಥಾಪಿಸಲು ಒತ್ತಾಯಿಸಲಾಗಿದೆ (೧೩-೩-೯೮). ಬಳ್ಳಾರಿ ಜಿಲ್ಲೆಯ ಕಮಲಾಪುರ ಕೆರೆ ಮತ್ತು ತುಂಗಭದ್ರಾ ಜಲಾಶಯವು ಆ ಪಟ್ಟಿಯಲ್ಲಿವೆ.

ಕೊಪ್ಪಳದ ಸಮೀಪ ಹುಲಿಕೆರೆ ಪರಿಸರದಲ್ಲಿ ಕಾಡುನಾಶ, ಮರಗಿಡಗಳ ನಾಶದಿಂದ ಬೆಟ್ಟದ ಮಣ್ಣು, ಮಳೆ ನೀರಿನೊಂದಿಗೆ ಸೇರಿ ಕೆರೆ ಸೇರತೊಡಗಿತು. ಇದು ರಾಜರ, ಮಾಂಡಲಿಕರ, ನಿಜಾಮರ ಆಡಳಿತಕ್ಕೆ ಸೇರಿದ್ದು, ಇಂದು ಹೂಳು ತುಂಬಿದೆ. ಪರಿಣಾಮವಾಗಿ ಸುಮಾರು ೫೦ ಮೀನುಗಾರರ ಕುಟುಂಬಗಳು ಅತಂತ್ರ ಸ್ಥಿತಿಯಲ್ಲಿವೆ.

ಬೀದರ್ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಮುಲ್ಲಾಮಾರಿ ಮೇಲ್ದಂಡೆ ಭಾಗದಲ್ಲಿ ಕೃಷಿ ಚಟುವಟಿಕೆಯನ್ನು 'ಪ್ರವರ್ಧಾ' ಎಂಬ ಸಂಸ್ಥೆ ಮಾಡುತ್ತದೆ. ಇದರ ಫಲವತ್ತತೆ, ಅಂತರ್ಜಲ, ಚೆಕ್‌ಡ್ಯಾಂ, ಒಡ್ಡು ನಿರ್ಮಾಣ ಬಗ್ಗೆ ಕ್ರಾಂತಿಕಾರಿ ಬದಲಾವಣೆ ಮಾಡಿದ್ದಾರೆ. ಒಣಗುತ್ತಿದ್ದ ಬಾವಿಗಳು ಜೀವ ಪಡೆದಂತಾಗಿದೆ. ಜಲಾನಯನ ಅಭಿವೃದ್ಧಿ ಮುಖ್ಯವಾಗಿದ್ದು, ಜನರಲ್ಲಿ ನೀರಿನ ಬಳಕೆ, ಕೃಷಿ ಜ್ಞಾನದ ಬಗ್ಗೆ ಉತ್ತಮ ಮಾಹಿತಿ ನೀಡಿ ಚಳವಳಿಗೆ ನಾಂದಿ ಹಾಡಿದಂತಿದೆ (೨೩-೧-೯೯).

ಘಟಪ್ರಭಾ ನೀರಾವರಿ ಯೋಜನೆ ಆಂತರಿಕ ಜಲಸಮಸ್ಯೆಗಳಲ್ಲಿ ಒಂದಾಗಿದೆ. ಬೆಳಗಾವಿ ಜಿಲ್ಲೆಯ ಘಟಪ್ರಭಾ ನೀರಾವರಿ ಯೋಜನೆ ಅಧಿಕಾರಿ, ಗಣ್ಯವ್ಯಕ್ತಿ, ಜನ ಸಾಮಾನ್ಯರುಗಳ ಆಲಸ್ಯ, ಅಸಡ್ಡೆಯಿಂದ ನಿರ್ಲಕ್ಷೆಗೆ ಗುರಿಯಾಗಿದೆ. ಬಚಾವತ್ ತೀರ್ಪಿನ ಪ್ರಕಾರ ೨೦೦೦ವರೆಗೆ ಕಾಮಗಾರಿ ಮುಗಿದು ಹೊಲಗಳಿಗೆ ನೀರು ಹರಿಯಬೇಕಾಗಿದೆ. ಇದರಿಂದ ಬೆಳಗಾವಿ, ಬಿಜಾಪುರ ಜಿಲ್ಲೆಗಳ ೩.೩೧ ಲಕ್ಷ ಹೆಕ್ಟೇರ್ ಭೂಮಿಗೆ ನೀರಾವರಿಯಾಗುತ್ತದೆ.

ಘಟಪ್ರಭಾ ಬಲದಂಡೆ ಕಾಮಗಾರಿ ನಿಧಾನಗೊಳ್ಳಲು ಮಾರ್ಗಮಧ್ಯೆ ಗುಡ್ಡಗಾಡು ಪ್ರದೇಶವೇ ಕಾರಣ. ಇದರ ವ್ಯಾಪ್ತಿಗೆ ಚಿಕ್ಕೋಡಿನಾಲಾ ಕಾಲುವೆ ನಿರ್ಮಾಣ ಪ್ರಗತಿಯಲ್ಲಿದೆ. ಘಟಪ್ರಭಾ ಯೋಜನೆ ಮುಗಿಸಲು ತುರ್ತು ಯೋಜನೆಯನ್ನು ನೀರಾವರಿ ಇಲಾಖೆ ಸಿದ್ಧಗೊಳಿಸಿದ್ದು, ರೂ. ೪೦೦ ಕೋಟಿ ವೆಚ್ಚದ ಅಂದಾಜಿದೆ. ಇದೇ ರೀತಿ ಆಲಮಟ್ಟಿ (೧೪೦.೮೯ ಟಿ.ಎಂ.ಸಿ.), ಘಟಪ್ರಭಾ (೭೯ ಟಿ.ಎಂ.ಸಿ.) ಮಲಪ್ರಭಾ (೪೪-೫೩), ಹಿಪ್ಪರಗಿ (೮.೫೬ ಟಿ.ಎಂ.ಸಿ.), ಮಾರ್ಕಂಡೇಯ (೪ ಟಿ.ಎಂ.ಸಿ.), ಹರಿನಾಲಾ (೮ ಟಿ.ಎಂ.ಸಿ.), ದೂಧಗಂಗಾ (೪ ಟಿ.ಎಂ.ಸಿ.) ಈ ಎಲ್ಲಾ ಯೋಜನೆಗಳು ಮುಗಿದರೆ ಬಿಜಾಪುರ, ಬೆಳಗಾವಿ ಜಿಲ್ಲೆಗಳಿಗೆ ನೀರಾವರಿಯಾಗುತ್ತದೆ. ತರುವಾಯ ರೈತರ ಹೋರಾಟ, ಚಳವಳಿಗಳಿಗೆ ಅಂತಿಮ ತೆರೆ ಬೀಳಬಹುದು. ಎಸ್.ಎಂ. ಕೃಷ್ಣ ಅವರು ಮಹದಾಯಿ ನೀರಾವರಿ ಮತ್ತು ವಿದ್ಯುತ್ ಯೋಜನೆಯ ಸ್ಥಳವನ್ನು ವೀಕ್ಷಿಸಿ ೯ ಟಿ.ಎಂ.ಸಿ. ನೀರನ್ನು ಮಲಪ್ರಭಾ ಅಣೆಕಟ್ಟೆಗೆ ತಿರುಗಿಸುವ ಉದ್ದೇಶವಿದೆ (೨೩.೧೨.೯೯) ಎಂದು ಹೇಳಿದ್ದಾರೆ.

ಮುಂಡರಗಿ ತಾಲೂಕಿನ ಕೊರ್ಲಹಳ್ಳಿ ಹತ್ತಿರದ ರಾಜೆ ಏತ ನೀರಾವರಿ ಯೋಜನೆಯನ್ನು ೩೦ ಲಕ್ಷ ರೂ. ವೆಚ್ಚದಲ್ಲಿ ನಿರ್ಮಾಣ ಮಾಡಲು ಶಿಲಾನ್ಯಾಸವನ್ನು ಸಣ್ಣ ನೀರಾವರಿ ಸಚಿವ ತಿಪ್ಪೇಸ್ವಾಮಿ ನೆರವೇರಿಸಿದ್ದು, (೧೯೯೮) ಇದರಿಂದ ೩,೭೦೦ ಎಕರೆ ಜಮೀನಿಗೆ ನೀರಾವರಿಯಾಗಲಿದೆ. ಸ್ಥಳೀಯರ ಚಳವಳಿ ದಮನಗೊಳ್ಳಲು ಇದು ಫಲಕಾರಿಯಾಯಿತು ಎನ್ನಬಹುದು.

ಹೇಮಾವತಿ ನಾಲಾ ಯೋಜನೆಗಾಗಿ ಒಟ್ಟು ೭೭೫೪ ಎಕರೆ ಜಮೀನು ಸ್ವಾಧೀನ ಪಡಿಸಿಕೊಳ್ಳಲು ೧೯೮೭ ರಿಂದ ಕ್ರಮಕೈಗೊಳ್ಳಲಾಗಿದ್ದು, ರೈತರಿಗೆ ಪರಿಹಾರ ಕಾರ್ಯ ವಿಳಂಬವಾಗಿದೆ. ಬಾಕಿ ಹಣಕ್ಕಾಗಿ ಆಗಾಗ ಚಳವಳಿ ನಡೆಸುತ್ತಿದ್ದಾರೆ. ಈ ಸಂಬಂಧ ಬಾಗೂರು - ನವಿಲೆ ಸುರಂಗ ಮಾರ್ಗದ ಸಂತ್ರಸ್ತರ ಪರದಾಟ, ಚಳವಳಿಗಳು ಗಮನಾರ್ಹವಾಗಿವೆ (೭-೩-೯೮). ಹಾಸನ ಜಿಲ್ಲೆಯ ಬಾಗೂರು-ನವಿಲೆಸುರಂಗ, ಹೇಮಾವತಿ ಹಿನ್ನೀರಿನಲ್ಲಿ ಮುಳುಗಡೆಯಾದ ಗ್ರಾಮಗಳಿಗೆ ಪುನರ್ವಸತಿ ಇತರ ವಿಷಯಗಳ ಬಗ್ಗೆ ಉಗ್ರ ಹೋರಾಟ, ಚಳವಳಿ ನಡೆಸುವುದಾಗಿ ನಾಗರಿಕರು ಮೊದಲಿನಿಂದಲೂ ಹೇಳುತ್ತಿದ್ದಾರೆ. ಇವರು ರಾಷ್ಟ್ರೀಯ ಜಲನೀತಿಯನ್ನು ಪ್ರಶ್ನಿಸುತ್ತಿದ್ದಾರೆ. ಆ ಮೂಲಕ ಮಿತವ್ಯಯದ ನಿಟ್ಟಿನಲ್ಲಿ ಧಾರವಾಡ, ಗುಲಬರ್ಗಾ, ಬೆಂಗಳೂರುಗಳಲ್ಲಿರುವ ರಾಜ್ಯ ಜಲಮಂಡಳಿ ವಲಯ ಕಚೇರಿಗಳ ರದ್ಧತಿಗೆ ಒತ್ತಾಯಿಸಿದೆ.

ಬಹು ದಿನಗಳ ಬೇಡಿಕೆಯಾದ ಗಂಗಾ-ಕಾವೇರಿ ಯೋಜನೆ ನನೆಗುದಿಗೆ ಬಿದ್ದಿರುವುದನ್ನು ಮನಗಂಡು, ಇದು ಸೇನೆಯಿಂದ ಮಾತ್ರ ಸಾಧ್ಯ ಎಂದು ಗ್ರಾಮೀಣಾಭಿವೃದ್ಧಿ ಸಚಿವ ಎಂ. ಪಿ. ಪ್ರಕಾಶ್ (೧೯೯೯ ಏಪ್ರಿಲ್) ಹೇಳಿದ್ದಾರೆ. ಇದು ಅಸಾಧ್ಯವಾದ ಕೆಲಸವು ಆಗಿರುವುದರಿಂದ ನಾಗರಿಕರ ಬಯಕೆಗೆ ನಿಲುಕದಷ್ಟು ಖರ್ಚು, ವೆಚ್ಚ ಶ್ರಮವನ್ನು ಇದಕ್ಕೆ ಮೀಸಲಿಡಬೇಕಾಗುತ್ತದೆ.

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನ ವಾಣಿವಿಲಾಸ ಸಾಗರ ಅಣೆಕಟ್ಟಿನ ನೀರಿಗಾಗಿ ರೈತರು ಚಳವಳಿ ಮಾಡುವ ಘಟನೆಗಳು ಕಂಡುಬರುತ್ತವೆ. ಅದೇ ರೀತಿ ರಂಗಯ್ಯನ ದುರ್ಗ (ಮೊಳಕಾಲ್ಮುರು-ತಾ॥) ಜಲಾಶಯ ಪರಿಸರದ ರೈತರು ಬೆಳೆಗಳನ್ನು ಬೆಳೆಯಲಿಕ್ಕಾಗಿ ನೀರಿನ ಹರಿವನ್ನು ಪ್ರಶ್ನಿಸಿ ಚಳವಳಿಯಲ್ಲಿ ತೊಡಗಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಭಾರೀ, ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳಲ್ಲಿ ಕಂಡುಬರುವ ಚಳವಳಿಗಳು ಹಲವಾರು. ಆ ಯೋಜನೆಗಳೆಂದರೆ : ಕಬಿನಿ, ತಾರಕಾ, ಉಡುತೊರೆಹಳ್ಳ, ವರುಣನಾಲೆ, ಕೆ. ಆರ್. ಎಸ್. ಕಾಲುವೆ, ಮಂಚನಬೆಲೆ, ಇಗ್ಗಲೂರು ಬ್ಯಾರೇಜ್, ಅರ್ಕಾವತಿ, ಹಾರಂಗಿ, ಚಿಕ್ಲಹೊಳೆ, ಹೇಮಾವತಿ, ವಾಟೇಹೊಳೆ, ಯಗಚಿ, ಕಾಮಸಮುದ್ರ ಏತ ನೀರಾವರಿ, ಹುಚ್ಚನಕೊಪ್ಪ ಏತನೀರಾವರಿ, ಮಲಪ್ರಭಾ, ಘಟಪ್ರಭಾ, ದೂಧ್‌ಗಂಗಾ, ಹಿಪ್ಪರಗಿ ಕೋಡಿ, ಮಹಾದಾಯಿತಿರುವು, ಹಿರೇನಾಲಾ, ತುಂಗಭದ್ರಾ ಕಾಲುವೆಗಳು, ಮಸ್ಕಿನಾಲಾ, ಹಿರೇಹಳ್ಳ, ತುಂಗಾಮೇಲ್ದಂಡೆ, ರಾಣಿಕೆರೆ ಪೂರಕ ನಾಲೆ, ವರಾಹಿ, ಬಸಾಪುರ ಏತನೀರಾವರಿ, ಇಟಗಿ ಸಾಸಲವಾಡ ಏತ ನೀರಾವರಿ ಮುಂತಾದವುಗಳನ್ನು ಹೆಸರಿಸಬಹುದು.

ಫಲಾನುಭವಿಗಳು (ರೈತ) ಉಳುಮೆಗಾಗಿ ನೀರನ್ನು ಆಶ್ರಯಿಸುವುದು ಅನಿವಾರ್ಯ. ನೀರೆ ಲಭ್ಯವಾಗಲಿಲ್ಲವೆಂದಾಗ ಹೋರಾಟ ಮಾಡುವುದು ಸಹಜ. ಆಗ ಸರ್ಕಾರ ವಿರುದ್ಧವೇ ಪ್ರತಿರೋಧವನ್ನು ಎದುರಿಸುತ್ತಾರೆ. ನೀರಿನ ಹಂಚಿಕೆಗಾಗಿ ರೈತರಲ್ಲೆ ಘಟನೆಗಳು ಹೆಚ್ಚಾಗಿ ಸಂಭವಿಸುತ್ತವೆ. ಪ್ರಾದೇಶಿಕವಾಗಿ ಈ ಹೋರಾಟಗಳು ಭಿನ್ನವಾಗಿದ್ದು, ಅಂಥ ಕೆಲವು ಯೋಜನೆಗಳನ್ನು ಮುಂದೆ ವಿವರಿಸಲಾಗಿದೆ.

## ೬:೨. ಭದ್ರಾಮೇಲ್ದಂಡೆ ಯೋಜನೆ

ಸರ್ಕಾರ ಭದ್ರಾ ಜಲಾಶಯದ ಮೇಲ್ಭಾಗದಲ್ಲಿ ಅಣೆಕಟ್ಟನ್ನು ಕಟ್ಟಿ, ಚಿತ್ರದುರ್ಗ ಇತರ ನೆರೆಯ ಜಿಲ್ಲೆಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಯೋಜನೆ ರೂಪಿಸಲಾಗಿತ್ತು. ಇತ್ತೀಚಿನ ವರ್ಷಗಳಲ್ಲಿ ಅದನ್ನು ಕೈಬಿಟ್ಟು 'ತುಂಗಾ ತಿರುವು' ಎಂದು ಯೋಜನೆಯನ್ನು ಜನರ ಮುಂದಿಟ್ಟು ೨೦ ಟಿ.ಎಂ.ಸಿ. ನೀರನ್ನು ಪೂರೈಸುವುದಾಗಿ ಹೇಳಿದ್ದಾರೆ. ಇದರಿಂದ ಭದ್ರಾ ಮೇಲ್ದಂಡೆ ಯೋಜನೆಯನ್ನು ಕೈಬಿಡಲಾಯಿತು. ಭದ್ರಾಮೇಲ್ದಂಡೆ ಯೋಜನೆಯಿಂದ ಅಪಾರ ಮೊತ್ತದ ಕಾಫಿ ತೋಟ, ೬ ಸಾವಿರ ಎಕರೆ ಅರಣ್ಯ, ೬೯೪ ಹೆಕ್ಟೇರ್ ಭೂ ಪ್ರದೇಶ ಮುಳುಗಡೆಯಾಗುವುದೆಂದು ಜನರ ಪ್ರತಿರೋಧ ಕಂಡುಬಂದಾಗ ನಿರ್ಧಾರ ಬದಲಾಯಿತು ಎನ್ನಲಾಗಿದೆ. ಇಂದು ೩೦೦೦ ಕೋಟಿ ರೂ.ಗಳಿಗೆ ಈ ಯೋಜನೆಯನ್ನು ರೂಪಿಸಿದ್ದು, ಜನರ ಕಣ್ಣಿಗೆ ಮಣ್ಣೆರಸುವ ಕೃತ್ಯವೆಂದು ಜನರು ಭಾವಿಸಿದ್ದಾರೆ.

ತುಂಗಾನದಿಯಿಂದ ಎರಡು ಕಡೆ ಮೇಲೆತ್ತಿ, ಭದ್ರಾ ಜಲಾಶಯದಿಂದ ಮುಂದೆ ನಾಲ್ಕು ಕಡೆ ಒಟ್ಟು ೬೦೦ ಅಡಿಗಳಷ್ಟು ಮೇಲಕ್ಕೆತ್ತಿ ೨ ಲಕ್ಷದ ೨೭ ಸಾವಿರ ಎಕರೆಗೆ ನೀರುಣಿಸುವ ಯೋಜನೆಯಾಗಿದೆ. ಇಲ್ಲಿ ತರೀಕೆರೆ, ಕಡೂರು, ಹೊಸದುರ್ಗ, ಹೊಳಲ್ಕೆರೆ, ಚಿತ್ರದುರ್ಗ, ಚಳ್ಳಕೆರೆ ಮತ್ತು ಹಿರಿಯೂರು ತಾಲ್ಲೂಕುಗಳ ಕೆಲವು ಭಾಗಗಳಷ್ಟೆ ಸೇರಿದ್ದವು. ಜಗಳೂರು, ಮೊಳಕಾಲ್ಮುರು ಮತ್ತು ಹಿರಿಯೂರು ತಾಲೂಕುಗಳು ಬರಪೀಡಿತಗೊಂಡರೂ ಇಂದು ಯೋಜನೆಯಲ್ಲಿಲ್ಲ. ಈ ಯೋಜನೆಗೆ ಸುಮಾರು ೨೨೦೩ ಕೋಟಿ ಖರ್ಚಾಗುವ ಅಂದಾಜಿದೆ. ಪ್ರತಿ ಎಕರೆಗೆ ರೂ. ೯೮,೦೦೦ ಸಾವಿರ ತಗಲಬಹುದು.

ಇದಕ್ಕೆ ೨೦೩ ಮೆಗಾವ್ಯಾಟ್ ವಿದ್ಯುತ್ ಒಂದೇ ಮೂಲದಿಂದ ಸರಿಯಾಗಿ ಸರಬರಾಜಾಗುತ್ತಿಲ್ಲ. ಈಗ ೧೧೦೦ ಮೆಗಾವ್ಯಾಟ್ ವಿದ್ಯುತ್ತಿನ ಕೊರತೆಯಿದೆ. ತುಂಗಾ ತಿರುವಿನ ೨೦ ಟಿ.ಎಂ.ಸಿ. ನೀರಿನ ಲಭ್ಯತೆಯನ್ನು ಬಚಾವತ್ ಆಯೋಗದ 'ಎ' ಸ್ಕೀಮಿನಡಿ ೨೦೦೦ ಇಸವಿಯೊಳಗೆ ಮುಗಿಸಬೇಕಿದೆ. ಈ ಯೋಜನೆಗೆ ಭದ್ರಾ, ತುಂಗಾ, ಗೊಂಡಿ ಅಣೆಕಟ್ಟುಗಳನ್ನು ಆಧುನಿಕರಿಸಿ ೫ ಟಿ.ಎಂ.ಸಿ. ನೀರು, ಗೋದಾವರಿ ನದಿಯಿಂದ ೮ ಟಿ.ಎಂ.ಸಿ.ಯನ್ನು ಒರಿಸ್ಸಾದಿಂದ ಆಂಧ್ರಪ್ರದೇಶಕ್ಕೆ ಬಳಸಲು ಕೊಟ್ಟು ಆ ಮೂಲಕ ತುಂಗಾ ತಿರುವಿಗೆ ೮ ಟಿ.ಎಂ.ಸಿ. ಹಾಗೂ ಚಿಕ್ಕ ಪುಟ್ಟ ನೀರಾವರಿ ಯೋಜನೆ ಆಧುನಿಕರಿಸಿ ೨ ಟಿ.ಎಂ.ಸಿ. ಹೀಗೆ ೨೦ ಟಿ.ಎಂ.ಸಿ. ನೀರು ಉಳಿತಾಯ ಮಾಡಿ ತುಂಗಾ ತಿರುವಿಗೆ ಬಳಸಬಹುದಾಗಿದೆ. ಈ ಯೋಜನೆಗೆ ೨೨೧ ಕೋಟಿ ರೂಪಾಯಿಗಳ ವಿಶ್ವ ಬ್ಯಾಂಕಿನ ಸಹಾಯಧನವನ್ನು ಕೇಳಲಾಗಿದೆ.

ಬಚಾವತ್ 'ಬಿ' ಸ್ಕೀಂ ಕ್ರಿ. ಶ. ೨೦೦೦ ಮೇ ೩೧ ರಂದು ಜಾರಿಗೆ ಬಂದಾಗ ಇದರಂತೆ ೧೮೩ ಟಿ.ಎಂ.ಸಿ. ನೀರು ಲಭ್ಯವಾಗಲಿದೆ. ಬಚಾವತ್ 'ಎ' ಸ್ಕೀಮಿನಲ್ಲಿ

ಕೃಷ್ಣಾ ಕಣಿವೆಯ ನೀರಾವರಿ ಯೋಜನೆಯ ನೀರಿನಲ್ಲಿ ೫೧೩ ಟಿ.ಎಂ.ಸಿ. ನೀರು ಬಳಸಿ ೪೪.೨೫ ಲಕ್ಷ ಎಕರೆ ಜಮೀನಿಗೆ ಉತ್ತರಕರ್ನಾಟಕದ ಕೆಲವು ಜಿಲ್ಲೆಗಳಿಗೆ ನೀರು ಹಾಯಿಸಿದೆ. 'ಬಿ' ಸ್ಕೀಮಿನ ೧೮೩ ಟಿ.ಎಂ.ಸಿ. ನೀರಿನಲ್ಲಿ ತುಂಗಭದ್ರಾ ಉಪಕಣಿವೆ ಯೋಜನೆಯ ವ್ಯಾಪ್ತಿಗೆ ಬರುವ ಚಿತ್ರದುರ್ಗ, ತುಮಕೂರು, ಬಳ್ಳಾರಿ, ಕೋಲಾರ ಮುಂತಾದ ಜಿಲ್ಲೆಗಳಿಗೆ ೧೦೦ ಟಿ.ಎಂ.ಸಿ. ನೀರೊದಗಿಸುವ ನೀರಾವರಿ ಯೋಜನೆಯನ್ನು ಕೈಗೊಳ್ಳಬೇಕೆಂದು ಆಗ್ರಹಪಡಿಸಿದ್ದಾರೆ.

ಹಳೆಯ ಭದ್ರಾ ಮೇಲ್ದಂಡೆ ಯೋಜನೆಯಂತೆ ಮಾಗುಂಡಿ ಬಳಿ ದೊಡ್ಡ ಅಣೆಕಟ್ಟು ನಿರ್ಮಿಸಬೇಕಾಗಿತ್ತು. ಭದ್ರಾ ಜಲಾಶಯದ ಮತ್ತು ಉಪನದಿಗಳಾದ ಸೋಮವಾಹಿನಿ, ತಡವೆ ಹಾಗೂ ಹೆಬ್ಬೆ ಹಳ್ಳಗಳಿಗೆ ಮೂರು ಚಿಕ್ಕ ಪಿಕ್ ಅಪ್ ಡ್ಯಾಂಗಳನ್ನು ಕಟ್ಟಿ ಸುಮಾರು ೧೧ ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳಬಹುದು. ೩೦ ಟಿ.ಎಂ.ಸಿ. ನೀರನ್ನು ತುಂಗಾದ ಕೆಳ ಜಲಾಶಯದಿಂದ ಬಳಸಿಕೊಂಡರೆ ಬಳ್ಳಾರಿ ಜಿಲ್ಲೆಯ ಹಡಗಲಿ, ಹರಪನಹಳ್ಳಿ ಮತ್ತು ಕೂಡ್ಲಿಗಿ ತಾಲೂಕುಗಳಿಗೆ ನೀರು ಹರಿಯುತ್ತದೆ. ಮಾಜಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ, ಮಾಜಿ ಶಾಸಕ ಎಸ್. ಟಿ. ಬೊಮ್ಮಣ್ಣ ಮೊದಲಾದವರು ಭದ್ರಾ ಮೇಲ್ದಂಡೆಗಾಗಿ ಆಗ್ರಹಿಸಿದ್ದು ಸ್ಮರಣೀಯ. ಇತ್ತೀಚಿನ ಚುನಾವಣೆಗಳಲ್ಲಿ ಇದು ರಂಗೇರಿದ್ದು, ಲೋಕಸಭಾ ಸದಸ್ಯ ಶಶಿಕುಮಾರ್ ಅವರು ಜಾರಿಗೆ ತರಲು ಪ್ರಯತ್ನಿಸುವುದಾಗಿ ಹೇಳಿದ್ದಾರೆ.

### ೬:೩. ಕಾರಂಜಾ ಯೋಜನೆ

ಕಾರಂಜಾ ನದಿಯ ಮೂಲ ಆಂಧ್ರಪ್ರದೇಶದ ಕೊಹಿರ್ ಎಂಬ ಗ್ರಾಮ. ೧೧೦ ಕಿ. ಮೀ. ದೂರ ಹರಿದು ಆಂಧ್ರಪ್ರದೇಶದ ಜಹೀರಬಾದ್ ಮೂಲಕ ಬೀದರ್ ಜಿಲ್ಲೆಯ ಹುಮನಾಬಾದ್ ಮತ್ತು ಭಾಲ್ಕಿ ತಾಲೂಕುಗಳಲ್ಲಿ ಹರಿದು ನರದ-ಸಂಗಮ ಗ್ರಾಮದ ಹತ್ತಿರ ಮಂಜ್ರಾನದಿಯನ್ನು ಸೇರುತ್ತದೆ. ಇದಕ್ಕೆ ಭಾಲ್ಕಿ ತಾಲೂಕಿನ ಬಾಲ್ಕಿಹಳ್ಳಿ ಹತ್ತಿರ ಅಣೆಕಟ್ಟು ಕಟ್ಟಿದ್ದಾರೆ.

೧೯೭೩ರ ಬರ ಪರಿಹಾರ ಕಾಮಗಾರಿ ಯೋಜನೆಯಲ್ಲಿ ೯.೯೦ ಕೋಟಿ ಅಂದಾಜಿನಂತೆ ಅಣೆಕಟ್ಟು ಆರಂಭಿಸಿದರು. ೧೯೮೬-೮೭ರಲ್ಲಿ ಮರು ಅಂದಾಜು ೯೮.೦೦ ಕೋಟಿ ಆಯಿತು. ೩೫,೬೧೪ ಹೆಕ್ಟೇರ್ (೮೮,೦೦೦ ಎಕರೆ) ಭೂಮಿಗೆ ಕಾರಂಜಾ ನೀರುಣಿಸುತ್ತದೆ. ಬೀದರ ಜಿಲ್ಲೆಯ ಒಣಭೂಮಿಗೆ ವರದಾನವಾದ ಕಾರಂಜಾ ಹೊಸ ಜೀವನೀಡುತ್ತದೆಂಬ ಆಸೆ ಎಲ್ಲರಲ್ಲೂ ಇತ್ತು. ಈ ಜಲಾಶಯವಿಂದು ವಿವಾದದ ಸುಳಿಯಲ್ಲಿರುವುದು ಖೇದಕರವಾದದು. ಜಲಾಶಯದ ಕೆಳಭಾಗದ ರೈತರ ನಿವೇಶನ, ಹೊಲಮನೆಗಳಿಗೆ ಹಾನಿಯು ಆಗಿದೆ. ೧೯೬೯ಕ್ಕೂ ಹಿಂದೆ ಜನ್ಮತಾಳಿದ ಈ ಯೋಜನೆಯು ೧೯೭೩ರಲ್ಲಿ ಕಾರ್ಯ ಆರಂಭವಾದರೂ ೯.೯ ಕೋಟಿ ರೂ. ಅಂದಾಜು ವೆಚ್ಚವೆಂದು ನಿರ್ಧರಿಸಿದ್ದರು. ಆದರೆ ಯೋಜನೆ ಗಜಗಾತ್ರ ಬೆಳೆದಂತೆ ಈಗ ೯೮ ಕೋಟಿಗೂ ಮೀರಿದೆ. ಇಷ್ಟಾದರೂ ಹೊಲಗಳಿಗೆ ನೀರಿಲ್ಲ. ಜಲಾಶಯದ ಯೋಜಿತ ಪ್ರಮಾಣದ ಭೂ ಪ್ರದೇಶಕ್ಕೆ ನೀರುಣಿಸಬೇಕಾದರೆ ಕನಿಷ್ಠ ಇನ್ನೂ ಹತ್ತು ವರ್ಷಗಳಷ್ಟಾದರೂ ಬೇಕು. ಕಾಲುವೆಗಳ ಕೆಲಸ ಇನ್ನೂ ನಡೆಯುತ್ತದೆ.

ನೆಲವನ್ನು ಸಮತಟ್ಟು ಮಾಡುವ ಕಾರ್ಯವಾಗಬೇಕು. ನಂತರ ವಿತರಣಾ ಹರಿಗಾಲುವೆಗಳಾಗಬೇಕು. ಇದಕ್ಕೆ ರೈತರ ಶಕ್ತಿ ವಿನಿಯೋಗವಾಗಬೇಕೆಂಬ ಬೇಡಿಕೆ ಮೊದಲಿತ್ತು. ಈ ಯೋಜನೆ ಆರಂಭವಾದಾಗ ಇದ್ದಂತ ಉತ್ಸಾಹ ಈಗ ಉಳಿದಿಲ್ಲ. ಈ ಸ್ಥಿತಿಯಲ್ಲಿಯೇ ಯೋಜನೆಯ ವಿವಾದಗಳ ಚರ್ಚೆ ಆರಂಭವಾಯಿತು. ನೀರು ಸಂಗ್ರಹಿಸಲು ಜಲಾಶಯ ಸಿದ್ಧವಾಗಿದ್ದು ನಿರ್ಮಾಣದ ಸಂದರ್ಭದಲ್ಲಿ ಆದ ಕಾಲ ವಿಳಂಬದಿಂದ ಮುಳುಗಡೆ ಪ್ರದೇಶದ ಜನರು ಸ್ಥಳದಿಂದ ಪುನರ್ವಸತಿ ಕೇಂದ್ರಕ್ಕೆ ತೆರಳದೇ ಅಲ್ಲಿಯೇ ತಂಗಿದ್ದು ಫಸಲು ಪಡೆದರು. ಪ್ರತಿವರ್ಷ ಮಳೆಗಾಲ ಬಂದಾಗಲೂ ಜಲಾಶಯದಲ್ಲಿ ನೀರು ಸಂಗ್ರಹಿಸುವ ಕುರಿತು ಪ್ರಕಟಣೆಗಳು ಬಂದರೂ, ರೈತರು ಬೆಳೆಯುತ್ತಿರುವ ಬೆಳೆಯಿಂದಾಗಿ ಮಾನವೀಯ ದೃಷ್ಟಿಯಿಂದ ಈ ಕೆಲಸ ಮುಂದಕ್ಕೆ ಹೋಗುತ್ತಲಿತ್ತು. ೧೯೮೮ರ ವರೆಗೆ ಜಲಾಶಯದಲ್ಲಿ ನೀರು ಸಂಗ್ರಹಿಸಲಾಗಲಿಲ್ಲ. ಕಾರಣ ಹೆಚ್ಚಿನ ಪರಿಹಾರಕ್ಕೆ ರೈತರ ತಕರಾರು, ಪುನರ್ವಸತಿ ಪ್ರದೇಶಗಳಲ್ಲಿ ಸೌಲಭ್ಯ ನೀಡುವಲ್ಲಿ ಆಗಿರುವ ತೊಂದರೆ ಹಾಗೂ ವಿಳಂಬದಿಂದ ಮುಳುಗಡೆ ಪ್ರದೇಶದ ಜನರು ಪುನರ್ವಸತಿ ಪ್ರದೇಶಕ್ಕೆ ಹೋಗಲು ಹಿಂಜರಿದರು. ೧೯೮೯ರಲ್ಲಿ ಅಂದಿನ ಜಿಲ್ಲಾಧಿಕಾರಿಗಳಾಗಿದ್ದ ಎಚ್. ಶಿವರಾಮು ಅವರ ಸ್ವಹಿತಾಸಕ್ತಿಯಿಂದ ನಿರಾಶ್ರಿತರನ್ನು ಪುನರ್ವಸತಿ ಕೇಂದ್ರಕ್ಕೆ ಕಳುಹಿಸಲಾಯಿತು. ಕೇಂದ್ರ ಜಲ ಆಯೋಗ ನಿಗದಿಪಡಿಸಿದ ನೀರಿನ ಮಟ್ಟಕ್ಕೆ ನೀರನ್ನು ಸಂಗ್ರಹಿಸಿತು. ಅಂದು ಅಪಾರ ಮಳೆಯಾಗಿ ಜಲಾಶಯ ತುಂಬಿತು. ಖೇಣಿರಂಜೋಳ್ ಗ್ರಾಮದವರೆಗೆ ನೀರು ಹರಿದು ಬಂದು ಆತಂಕ ಮೂಡಿಸಿತ್ತು. ಜಲಾಶಯದ ಸಿಬ್ಬಂದಿ ಎಲ್ಲ ಆರು ಕ್ರೆಸ್ಟ್ ಗೇಟುಗಳನ್ನು ತೆರವು ಮಾಡಿ ನೀರನ್ನು ನದಿಗೆ ಬಿಟ್ಟರು. ರಾಜ್ಯದಲ್ಲಿ ಅಂದು ರಾಷ್ಟ್ರಪತಿ ಆಡಳಿತವಿತ್ತಾದರೂ, ತನಿಖೆಗೆ ಆಜ್ಞೆಯಾಯಿತು. ನಂತರ ಕಾರಂಜಾ ಜಲಾಶಯ ನೀರಾವರಿಗಾಗಿ ೧೫೦೦ ಹೆಕ್ಟೇರ್ ಭೂಮಿಗೆ ನಿರೋದಗಿಸಲು ಮುಂದೆ ಬಂತು. ಆಗಿನ ರಾಜ್ಯಪಾಲ ಪಿ. ವೆಂಕಟಸುಬ್ಬಯ್ಯ ಉದ್ಘಾಟಿಸಿ ದೇಶಕ್ಕೆ ಸಮರ್ಪಿಸಿದರು.

ಜಲಾಶಯದ ಸಮೀಪದಲ್ಲಿದ್ದ ಖೇಣ್‌ರಂಜೋಳ್ ಗ್ರಾಮದ ಜನರು ರಾಜ್ಯಪಾಲರಿಗೆ ಮನವಿ ಸಲ್ಲಿಸಿ ಜಲಾಶಯದ ಮಟ್ಟ ಹೆಚ್ಚಿರುವುದರಿಂದ ನಮ್ಮ ಗ್ರಾಮಕ್ಕೆ ನೀರು ನುಗ್ಗುತ್ತವೆಂದು ಪರಿಹಾರ, ಪುನರ್ವಸತಿಗೆ ವಿನಂತಿಸಿಕೊಂಡರು. ರಾಜ್ಯಪಾಲರು ಅವರ ಮನವಿಗಳ ಮರು ಸಮೀಕ್ಷೆಗೆ ಆದೇಶ ನೀಡಿದರು. ಅದರಂತೆ ೭ ಗ್ರಾಮಗಳು ಮುಳುಗಡೆಯಾಗುತ್ತಿದ್ದವು. ಹಿಂದಿನ ವರದಿಯ ಗ್ರಾಮಗಳೆಂದರೆ : ಸಂಗೊಳಗಿ, ನೆಲವಾಡ, ಅತಿವಾಳ, ಸಿಂದಬಂಡಗಿ, ಹೆಜ್ಜದಗಿ, ಕಮಲಾಪುರ ಮತ್ತು ಡಾಕುಳಗಿ ಮುಳುಗುತ್ತವೆಂದು ಹೇಳಲಾಗುತ್ತದೆ.

ಜನರು ವಾದಿಸುವಂತೆ ಪರಿಣತರ ತಂಡ ೬ ತಿಂಗಳು ಸಮೀಕ್ಷೆ ನಡೆಸಿದ ನಂತರ ಖೇಣಿರಂಜೋಳ ಮುಳುಗಡೆಯಾಗಲ್ಲ, ಇತ್ತೀಚೆಗೆ ನಿರ್ಮಿಸಿದ ೬೦ ಮನೆಗಳು ಮಾತ್ರ ಮುಳುಗುತ್ತವೆ ಎಂದರು. ಅಂದು ಸಂಸತ್ ಸದಸ್ಯರಾದ ನರಸಿಂಗರಾವ್ ಸೂರ್ಯವಂಶಿ ವರದಿಯನ್ನು ಟೀಕಿಸಿ ಖೇಣಿರಂಜೋಳ ಮುಳುಗಡೆಯಾಗುತ್ತದೆ ಎಂದರು. ಅವರ ಪ್ರಕಾರ ೯.೯ ಕೋಟಿಗೆ ಯೋಜನೆ ರೂಪಿಸಿದಾಗ ಅದರಂತೆ ನಿರ್ಮಿಸಲು ಆಗಲಿಲ್ಲ. ವೆಚ್ಚ ಹೆಚ್ಚಾದಾಗ ಎಲ್ಲವು ವ್ಯತ್ಯಾಸ ಆಗಬೇಕಾಗಿತ್ತು. ಕೇಂದ್ರ ಜಲ ಆಯೋಗದ ನಿಯಮದಂತೆ

ಜಲಾಶಯದ ಮಟ್ಟ ಹೆಚ್ಚಿಸಲಾದರೂ ಮುಳುಗಡೆ ಪ್ರದೇಶದ ಹರವನ್ನು ಹಿಗ್ಗಿಸಿಲ್ಲ. ಅಂದು ಮರು ಸಮೀಕ್ಷಾ ವರದಿ ಸತ್ಯವಾಗಿಲ್ಲವೆಂದು ಜಿಲ್ಲಾ ಪರಿಷತ್ ಅಧ್ಯಕ್ಷ ಮುರಳೀಧರ ರಾವ್ ಕಾಳೆ ವಾದಿಸಿದ್ದರು. ನೀರಾವರಿ ಇಲಾಖೆಯ ಸಿಬ್ಬಂದಿಯ ಪ್ರಕಾರ ೧೫೦೦೦ ಹೆಕ್ಟೇರ್ ಭೂಮಿಗೆ ಸದ್ಯ ನೀರು ಬಿಡಲಾಗಿದೆ. ಆದರೆ ರೈತರು ನೆಲವನ್ನು ಸಮತಟ್ಟುಗೊಳಿಸಿಲ್ಲದ ಕಾರಣ ಕೇವಲ ೩೦೦ ಎಕರೆ ಪ್ರದೇಶಕ್ಕೆ ಮಾತ್ರ ಬೇಸಗೆಯಲ್ಲಿ ಕಾರಂಜಾ ನೀರು ಬಳಸಲಾಗಿದೆ.

## ಅಣೆಕಟ್ಟಿನ ನೀರು ಸರಬರಾಜು

ಕಾರಂಜಾ ಯೋಜನೆಯಿಂದ ೭ ಗ್ರಾಮಗಳು, ೭೨೨೦ ಜನರು ನಿರ್ವಸತಿಗೊಳ್ಳುತ್ತಾರೆ. ಅವರಿಗಾಗಿ ೫೧ ಕೋಟಿ ರೂ. ಖರ್ಚು ಮಾಡಿ ಮನೆ, ದೇವಾಲಯ, ಮಸೀದಿ ಕಾಲುವೆಗಳ ನಿರ್ಮಾಣ ಮಾಡಲಾಗಿದೆ. ಜನರ ಮನಃ ಪರಿವರ್ತಿಸಿದಾಗ ಕಾರಂಜಾ ನದಿಗೆ ಅಣೆಕಟ್ಟು ಕಟ್ಟಿರುವುದಕ್ಕೆ ಎಲ್ಲಿಲ್ಲದ ಭಾವನೆಗಳು ಚಿಗುರಿದವು. ೨೦೨೫ ಚ. ಕಿ. ಮೀ. ನೀರಿನ ಹರಿವು, ೩೬.೬೧ ಇಂಚು ವಾರ್ಷಿಕ ಮಳೆ, ಅಣೆಕಟ್ಟು ೨೭೫ ಅಥವಾ ೯.೬ ಟಿ.ಎಂ.ಸಿ. ಸಾಮರ್ಥ್ಯವಿದ್ದು ಒಟ್ಟು ನೀರಿನ ಸಂಗ್ರಹಣೆ ೭.೬೯೧ ಟಿ.ಎಂ.ಸಿ. ಜಲಾಶಯದಲ್ಲಿ ೭.೩೧೬ ಟಿ.ಎಂ.ಸಿ. ಇದ್ದು, ೧೦.೨೯ ಟಿ.ಎಂ.ಸಿ. ವಿನಿಯೋಗವಾಗುತ್ತದೆ. ಡ್ಯಾಂನ ಉದ್ದ ೩೪೮೦ ಮೀಟರ್, ಅಂದಾಜು ಎತ್ತರ ೨೧.೦೦ ಮೀಟರ್, ೪ ಮೀಟರ್ ಅಗಲ, ೪.೬೯ ಲಕ್ಷ ಕ್ಯುಸೆಕ್ಸ್ ನೀರು ಬಿಡುತ್ತದೆ. ೫೬೭೨ ಹೆಕ್ಟೇರ್‌ಗೆ ನೀರು ಸರಬರಾಜಾಗುತ್ತದೆ. ಮೇಲಿನಂತೆ ಕಾರಂಜಾ ನೀರು ಹರಿದರೂ ಪ್ರತಿರೋಧಗಳು ಅಲ್ಲಲ್ಲಿ ವ್ಯಕ್ತಪಟ್ಟಿವೆ.

## ಪ್ರಸ್ತುತ ಕಾರಂಜಾ ಯೋಜನೆಯ ವಿವಾದ

ಕಾರಂಜಾ ನೀರಾವರಿ ಯೋಜನೆ ಬೀದರ್ ಜಿಲ್ಲೆಯ ಏಕೈಕ ಯೋಜನೆಯಾಗಿದೆ. ಗೋದಾವರಿ ಜಲಾನಯನ ಪ್ರದೇಶದ ಮಾಂಜ್ರಾ ನದಿಯ ಉಪನದಿಯಾದ ಕಾರಂಜಾ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸಿದ್ದಾರೆ. ಇದು ಬೀದರಿನಿಂದ ೨೫ ಕಿ. ಮೀ. ದೂರವಿದೆ. ಇದಕ್ಕೆ ಹೆಚ್ಚಾಗಿ ಮಣ್ಣಿನ ಏರಿ ಮತ್ತು ಮಧ್ಯ ಭಾಗದಲ್ಲಿ ಕಾಂಕ್ರೀಟ್ ಕೋಡಿಯನ್ನು ನಿರ್ಮಿಸಲಾಗಿದ್ದು, ಇಂದು ಎಲ್ಲ ಕೆಲಸಗಳು ಪೂರ್ಣಗೊಂಡಿವೆ. ಭಾಲ್ಕಿ ಮತ್ತು ಬೀದರ ತಾಲೂಕಿನ ೩೫,೬೧೪ ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸಲು ಉದ್ದೇಶಿಸಿದೆ. ೧೯೯೪-೯೫ರ ಯೋಜನೆಯ ಅಂದಾಜು ಸು. ೨೫,೮೧೭ ಲಕ್ಷ ರೂ. ಆಗಿದೆ.

**ಮುಳುಗಡೆ** : ಮುಳುಗಡೆಯಾದ ಏಳು ಹಳ್ಳಿಗಳ ಪುನರ್‌ವಸತಿಯಲ್ಲದೆ ಇತರ ಸೌಕರ್ಯಗಳನ್ನು ಕಲ್ಪಿಸಲಾಗಿದೆ.

**ಸೇತುವೆ ನಿರ್ಮಾಣ** : ರಂಜೋಳಖೇಣಾ, ಮರಕಲ್ ಮತ್ತು ಬಗದಲ್ ಹಳ್ಳಿಗಳ ಕೂಡು ರಸ್ತೆಗಳ ಮೇಲಿರುವ ಸೇತುವೆಗಳು ಜಲಾಶಯದಲ್ಲಿ ಮುಳುಗುವುದರಿಂದ ಇವುಗಳ ಪುನರ್ ನಿರ್ಮಾಣ ಮಾಡಿ ಮುಗಿಸಲಾಗಿದೆ.

**ಎಡದಂಡೆ ಕಾಲುವೆ :** ಒಟ್ಟು ೩೧ ಕಿ. ಮೀ. ವರೆಗೆ ಕಾಮಗಾರಿಗಳು ಮುಗಿದಿದ್ದು ನೀರನ್ನು ಬಿಟ್ಟಿದೆ. ಟೇಲ್ ಚನಾಲ್ ಕೆಲಸ ಮುಗಿದಿದೆ. ಈ ಕಾಲುವೆಯ ವ್ಯಾಪ್ತಿಗೆ ಬರುವ ಪ್ರದೇಶ ಒಟ್ಟು ೫೨೧೧ ಹೆಕ್ಟೇರುಗಳು.

**ಬಲದಂಡೆ ಕಾಲುವೆ :** ಇದು ೧೩೧ ಕಿ. ಮೀ. ವರೆಗಿದೆ. ಮೊದಲ ಹಂತದಲ್ಲಿ ೬೬ ಕಿ. ಮೀ. ಕೆಲಸ ಮಾಡಿದ್ದಾರೆ. ಉಳಿದುದನ್ನು ಮಾಡುವ ಹಂತ ತಲುಪಿದ್ದು, ಈ ಕಾಲುವೆಯ ವ್ಯಾಪ್ತಿಗೆ ೨೯,೦೫೬ ಹೆಕ್ಟೇರು ಪ್ರದೇಶ ಸೇರುತ್ತದೆ.

**ಕಾರಂಜಾ ಏತ ನೀರಾವರಿ :** ಈ ಕಾಲುವೆ ೨೪ ಕಿ. ಮೀ. ಉದ್ದವಾಗಿದ್ದು ಅರ್ಧ ಕೆಲಸ ಮುಗಿದಿದೆ. ಇದರಿಂದ ೪೦೪೭ ಹೆಕ್ಟೇರು ಪ್ರದೇಶಕ್ಕೆ ನೀರಾವರಿ ಸೌಲಭ್ಯವಾಗುತ್ತದೆ.

## ಕಾರಂಜಾ ಯೋಜನೆಯ ಬಗ್ಗೆ ಸ್ಥಳೀಯರ ವಿರೋಧ

ಈಶ್ವರ ಜಾಕೋತೆ ವಕೀಲರು, ಅಭ್ಯರ್ಥಿ, ಜನತಾದಳ ವಿಧಾನಸಭಾ ಭಾಲ್ಕಿ, ಬೀದರ ಜಿಲ್ಲೆ ಇವರು ದಿನಾಂಕ ೧೫-೬-೯೪ ರಂದು ಸನ್ಮಾನ್ಯ ಕೆ. ಎನ್. ನಾಗೇಗೌಡರಿಗೆ ಬರೆದ ಪತ್ರದ ವಿವರ ಇಂತಿದೆ :

'ಕಾರಂಜಾ ನೀರಾವರಿ ವಿಭಾಗ ನಂ-೧ ರಲ್ಲಿ ಕಾರ್ಯನಿರ್ವಾಹಕ ಅಭಿಯಂತರಾದ ಶ್ರೀ ಮಹಮದ್ ಹುಸೇನ್ ಇವರು ಕಳೆದ ಒಂದು ವರ್ಷದಿಂದ ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇವರು ಬೇಜವಬ್ದಾರಿ ಕೆಲಸಗಾರರೆಂದು ತಿಳಿಸಿದ್ದಾರೆ. ಕೋಟ್ಯಾಂತರ ರೂ.ಗಳ ಕಾಮಗಾರಿಗಳನ್ನು ತಮಗಿಷ್ಟವಾದ ಪರ್ಸೆಂಟೇಜ್ ಕೊಡತಕ್ಕ ಗುತ್ತೇದಾರರಿಗೆ ಶಾರ್ಟ್ ಟೆಂಡರ್ ಹೆಸರಿನಲ್ಲಿ ಒಂದು ಲಕ್ಷದಿಂದ ಒಂದು ಕೋಟಿವರೆಗೆ ಕೊಟ್ಟಿದ್ದಾರೆ. ಸಿದ್ರಾಮಪ್ಪ ಮುಖ್ಯ ಇಂಜಿನಿಯರ್, ರಾಘವೇಂದ್ರರಾವ್ ನಿವೃತ್ತ ಮುಖ್ಯ ಇಂಜಿನಿಯರ್ ಕೂಡ ಶಾಮೀಲಾಗಿದ್ದಾರೆ ಎಂದು ವಾದಿಸಿದ್ದಾರೆ. ಖರೀದಿ ವ್ಯವಹಾರಗಳಲ್ಲಿ ಅವ್ಯವಹಾರ ನಡೆದಿದೆ ಎಂದು ತನಿಖೆಗೆ ಒತ್ತಾಯಿಸಲಾಗಿದೆ. ಪುನರ್ ವಸತಿ ಕೇಂದ್ರಕ್ಕೆ ವಿದ್ಯುತ್, ನೀರಿನ ಸರಬರಾಜಿನಲ್ಲಿ ಅಪಾರ ಹಣವನ್ನು ನುಂಗಿ ಹಾಕಲಾಗಿದೆ. ಈಶ್ವರ ಚಾಕೋತೆಯವರು ಕಾರಂಜಾ ಯೋಜನೆಯಲ್ಲಿ ಶ್ರೀ ಮಹಮದ್ ಹುಸೇನ್ ಇ. ಇ. ರವರು ಒಂದು ಕೋಟಿ ಭೋಗಸ್ ಮೇನ್ಟನೆನ್ಸ್ ಮತ್ತು ೨-೩ ಕೋಟಿ ರೂ. ಭೋಗಸ್ ಖರೀದಿಸಿದ್ದಾರೆ. ಇವರನ್ನು ಸಸ್‌ಪೆಂಡ್ ಮಾಡಿ ವಿಚಾರಣೆ ಮಾಡಲು ಕೆ. ಎನ್. ನಾಗೇಗೌಡರಿಗೆ ಮನವಿ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಇಂದು ಕಾರಂಜಾ ಯೋಜನೆಯಲ್ಲಿ ಅವ್ಯವಹಾರ ನಡೆದ ಬಗ್ಗೆ ಇಬ್ಬರು ಸದಸ್ಯರ ಆಯೋಗ ನೇಮಕವಾಗಿದೆ. ಒಬ್ಬ ಎಕ್ಸ್‌ಕೂಟಿವ್ ಇಂಜಿನಿಯರ್‌ನ್ನು ಸಸ್ಪೆಂಡ್ ಮಾಡಲು ಆದೇಶಿಸಲಾಗಿದೆಂದು ಎಚ್. ಕೆ. ಪಾಟೀಲ್ ಹೇಳಿದ್ದಾರೆ.

ಹೀಗೆ ಕಾರಂಜಾ ನದಿನೀರನ್ನು ಪಡೆಯಲು ಹಾತೊರೆಯುವ ರೈತರ ಪರಿ ಒಂದೆಡೆಯಾದರೆ, ಅಭಿವೃದ್ಧಿ ನೆಪದಲ್ಲಿ ಅಧಿಕಾರಿಗಳು ಹಣವನ್ನು ಪೋಲುಮಾಡುವ, ಕಳಪೆ ಕಾಮಗಾರಿ ಮಾಡುವ ಚಾಕಚಕ್ಯತೆ ಇನ್ನೊಂದು ನಿಟ್ಟಿನಲ್ಲಿ ಕಂಡುಬರುವುದು ವಿಪರ್ಯಾಸ. ಇಂತಹ ಅನೇಕ ಸಣ್ಣ-ಪುಟ್ಟ ಘಟನೆಗಳು ಮುಂದಿನ ಚಳವಳಿಗೆ ಕಾರಣವಾಗುತ್ತವೆ.

## ೬:೪. ಬಾಗೂರು - ನವಿಲೆ

ಬಾಗೂರು - ನವಿಲೆ ಸುರಂಗ ನಿರ್ಗಮನದ ಬಳಿ ಏತ ನೀರಾವರಿಯನ್ನು ಮಾಡುವ ಯೋಜನೆ. ಇದು ಹೇಮಾವತಿ ನದಿ ನೀರಿನ ಕಾಲುವೆಗಳಲ್ಲೊಂದು. ಈ ಸುರಂಗದ ನಿರ್ಗಮನ ನಂತರ ವೈನಾಲಾಪಥದ ಆಳ ಕಾಲುವೆ ಮಾಡುವ ಉದ್ದೇಶವಿದೆ. ಭೂ ಸ್ವಾಧೀನವಾದ ಜಮೀನಿನ ಸು. ೨೨ ಎಕರೆಗಳ ಪೈಕಿ ಆಳ ಕಾಲುವೆಯು ಒಟ್ಟು ೫ ಕಿ. ಮೀ. ಉದ್ದವಿದೆ. ಇದಲ್ಲದೆ ಏಳು ಅಡ್ಡ ಮೋರಿ ಕೆಲಸಗಳನ್ನು ಪೂರ್ಣಗೊಳಿಸಲಾಗಿದೆ.

೧೯೯೭-೯೮ರಲ್ಲಿ ಲೈನಿಂಗ್ ಕಾಮಗಾರಿಯನ್ನು ಕೈಗೆತ್ತಿಕೊಂಡಿದ್ದು, ಕೆಲಸ ಪ್ರಗತಿಯಲ್ಲಿದೆ. ಈ ಸಂಬಂಧ ಬಾಗೂರು-ನವಿಲೆ ಸುರಂಗ ಮಾರ್ಗಕ್ಕೆ ಜಮೀನು ಕಳೆದುಕೊಂಡ ಸಂತ್ರಸ್ತರು ಪ್ರತಿನಿತ್ಯ ಹೋರಾಟ, ಚಳವಳಿಗಳನ್ನು ನಡೆಸುತ್ತಿದ್ದಾರೆ. ಅವರಲ್ಲಿ ಕೆಲವರಿಗೆ ಇನ್ನೂ ಭೂ ಪರಿಹಾರ ಕೊಟ್ಟಿಲ್ಲ. ಹೀಗಾಗಿ ಸರ್ಕಾರದ ದೌರ್ಜನ್ಯದಲ್ಲಿ ಗೋಲಿಬಾರ್ ನಡೆದು ಅನೇಕ ಕಷ್ಟ-ನಷ್ಟಗಳಿಗೆ ರೈತರು ಒಳಗಾದರು.

ಬಾಗೂರು-ನವಿಲೆ ಸುರಂಗದ ನಿರ್ಗಮನದ ಬಳಿ ಏತ ನೀರಾವರಿ ಯೋಜನೆಯಿಂದ ಸು. ೨೩೫೮ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯವಾಗಲಿದೆ. ೧೯೯೮-೯೯ನೇ ಸಾಲಿನಲ್ಲಿ ಜಾಕ್‌ವೆಲಿ ಹಾಗೂ ಪಂಪ್‌ಹೌಸ್‌ಗಳ ನಿರ್ಮಾಣ ತೆಗೆದುಕೊಂಡು ಈ ಯೋಜನೆಗೆ ಹೊಸ ರೂಪ ಕೊಡಲಾಯಿತು.

ತುಮಕೂರು ಪಟ್ಟಣಕ್ಕೆ ಹೇಮಾವತಿ ನದಿನೀರನ್ನು ತರುವ ಒಂದು ಸುರಂಗವನ್ನು ಬಾಗೂರು - ನವಿಲೆ ಸಮೀಪ ಕೊರೆದಿದ್ದರಿಂದ ಅಂತರ್ಜಲ ಬತ್ತಿ ಹೋಯಿತೆಂಬ ಗೋಳು ರೈತರದು. ಸಮಸ್ಯೆ ಅರಿತು ಏತ ನೀರಾವರಿ ಮಾಡುತ್ತೇವೆಂದು ೧೯೭೮ ರಲ್ಲಿ ದೇವರಾಜ ಅರಸು ಮುಖ್ಯಮಂತ್ರಿಯಾಗಿದ್ದಾಗ ಭರವಸೆ ನೀಡಿದ್ದರೂ, ೧೯೯೯ರ ವರೆಗೂ ಈ ಕೆಲಸದ ಕಾರ್ಯ-ಚಟುವಟಿಕೆಗಳು ಕುಂಠಿತಗೊಂಡಿವೆ.

ಬಾಗೂರು-ನವಿಲೆ ಸುರಂಗ ಹೋರಾಟದ ರೈತರು ಕಳೆದ ಎರಡು ಮೂರು ವರ್ಷಗಳಿಂದ (ಜೂನ್-ಜುಲೈ, ೧೯೯೮) ಚಳವಳಿಗಳನ್ನು ಮಾಡುತ್ತಾ ಬಂದಿದ್ದಾರೆ. ವಡ್ಡರಹಳ್ಳಿ ಜಾಕವೆಲ್ ಬಳಿ ೪೦ ಹಳ್ಳಿಗಳ ರೈತರು 'ಸಂಗ್ರಾಮ ನಗರ' ನಿರ್ಮಿಸಿ ನಾಲೆಗೆ ಮಣ್ಣು ಸುರಿದು ನೀರು ಬಂದ್ ಮಾಡುವುದರ ಮೂಲಕ ಚಳವಳಿ ನಡೆಸಿದರು. ನಂತರ ತುಮಕೂರಿನ ರೈತರು ಹಾಸನ-ಮಂಗಳೂರು ಹೆದ್ದಾರಿಗೆ ಅಡ್ಡಗೋಡೆ ಕಟ್ಟಲು ಮುಂದಾದರು. ಆಗ ಪರಿಸ್ಥಿತಿ ವಿಕೋಪಕ್ಕೆ ಹೋಗಿ (ಜುಲೈ ೨೦) ರೈತರು ಬಾಗೂರಿನಲ್ಲಿ ಪೋಲೀಸ್ ಜೀಪಿಗೆ ಬೆಂಕಿ ಹಚ್ಚಿದಾಗ ಅಪಾರ ಹಾನಿಯಾಗಿ, ಕೆಲವು ರೈತರು ಹತರಾದರು.

ಸರ್ಕಾರ ಈ ಘಟನೆಗಳನ್ನರಿತು ಪರಿಹಾರ ನೀಡಲು ಮುಂದಾಯಿತು. ಬಾಗೂರು ಹೋಬಳಿಯ ಬಡರೈತರಿಗೆ ಹಸಿರು ಕಾರ್ಡ್, ರಸಗೊಬ್ಬರ, ಸಸಿ, ಔಷಧಿ ಇತ್ಯಾದಿ ವಸ್ತುಗಳನ್ನು ವಿತರಿಸಲಾಯಿತು. ಹೊಲ, ಮರಗಿಡ ಕಳೆದುಕೊಂಡವರು ಚಳವಳಿ ನಡೆಸುತ್ತಿದ್ದರೂ ಪರಿಹಾರ ಕೆಲಸ ಮಂದಗತಿಯಲ್ಲಿದೆ ಎನ್ನುವ ಸೊಲ್ಲು ಕೇಳಿ ಬರುತ್ತಿದೆ.

❑❑

## ೭. ಪ್ರಚಲಿತ ಮತ್ತು ಸಂಭವನೀಯ ಚಳವಳಿಗಳು

ಕರ್ನಾಟಕದಲ್ಲಿಂದು ಜಲವಿವಾದಗಳ ಸ್ವರೂಪ ವಿವಿಧ ರೂಪದಲ್ಲಿ ವ್ಯಕ್ತಪಡುತ್ತವೆ. ಇಂಥ ಘಟನೆಗಳು ಸಂಭವಿಸುತ್ತಲೇ ಬಂದಿವೆ. ಯಾವುದೇ ನಿರ್ದಿಷ್ಟ ತೀರ್ಮಾನ, ಒಪ್ಪಂದಕ್ಕೆ ಬಾರದೇ ಸಮಸ್ಯೆಯಾಗಿ ಉಳಿಯುವುದೇ ಹೆಚ್ಚು. ಆಂತರಿಕ ಮತ್ತು ಅಂತರರಾಜ್ಯ ವಿವಾದಗಳೆರಡು ಪ್ರಚಲಿತ ಚಳವಳಿಗೆ ಕಾರಣವಾಗಿವೆ. ಅವುಗಳಲ್ಲಿ ಕಾವೇರಿ, ಕೃಷ್ಣಾ, ತುಂಗಾ ಮೊದಲಾದವುಗಳನ್ನು ನೋಡಬಹುದು. ಅಚ್ಚುಕಟ್ಟು ವಿಸ್ತರಣೆ, ಜನಸಂಖ್ಯೆ ಹೆಚ್ಚಳ ಮತ್ತು ಮಳೆ ಇತರ ಕಾರಣಗಳಿಂದ ಜಲಸಮಸ್ಯೆ ನಿರಂತರವಾಗಿದೆ. ಕೈಗಾರಿಕೆ, ಉದ್ದಿಮೆಗಳಿಂದ ಹೊರ ಬಂದ ತ್ಯಾಜ್ಯ ವಸ್ತು ನದಿನೀರು ಸೇರುವ ಪರಿಣಾಮ ಜನರು ಚಳವಳಿಗಳನ್ನು ನಡೆಸುವಲ್ಲಿ ಮುಂದಾಗಿದ್ದಾರೆ. ರಾಜಕೀಯ ಪಕ್ಷಗಳು, ಸಂಘಟನೆಗಳು ಮತ್ತು ರೈತರ ನಡುವೆ ಚಳವಳಿಗಳು ಕಂಡುಬರುತ್ತವೆ.

### ೭:೧. ತುಂಗಾ ತಿರುವು

ತುಂಗಾ ಮತ್ತು ಭದ್ರಾ ನದಿಗಳ ತಿರುವು ಯೋಜನೆಗಳ ಬಗ್ಗೆ ಸರ್ಕಾರ ಯೋಜನೆ ರೂಪಿಸಿತ್ತು. ಇದಕ್ಕೆ ರೂ. ೨೨೦ಳ ಕೋಟಿ ತಗಲುವ ಅಂದಾಜಿದೆ. ಕಡೂರು, ಬೀರೂರು ತಾಲೂಕುಗಳ ಸು. ೨,೨೫,೦೦೦ ಎಕರೆ ಭೂಮಿಗೆ ನೀರಾವರಿಯಾಗುವುದು. ಎಂ.ಎಲ್.ಸಿ ಯಾದ ವಿ.ಎಸ್. ಉಗ್ರಪ್ಪ ಅವರು (೧೯೯೮) ರಾಜ್ಯದಲ್ಲಿ ಅತೀ ಕಡಿಮೆ ಮಳೆಬೀಳುವ ತುಮಕೂರು, ಚಿತ್ರದುರ್ಗ ಮತ್ತು ಕೋಲಾರ ಜಿಲ್ಲೆಗಳಿಗೆ ನೀರಾವರಿ ಸೌಲಭ್ಯ ಒದಗಿಸಲು ಒತ್ತಾಯಿಸಿದರು. ಇದಕ್ಕೆ ಕಾಂಗ್ರೆಸ್‌ನ ವಿ. ಆರ್. ಸುದರ್ಶನ್, ಪಕ್ಷೇತರರಾದ ಕೆ. ಸಿ. ಪುಟ್ಟಸಿದ್ದಶೆಟ್ಟಿ ಧ್ವನಿಕೂಡಿಸಿದರು. ರಾಜ್ಯ ಸರ್ಕಾರದ ತುಂಗಾ ತಿರುವನ್ನು ವಿರೋಧಿಸಿ ಇವರುಗಳು ಭದ್ರಾ ಮೇಲ್ದಂಡೆ ಯೋಜನೆಗೆ ಒತ್ತಾಯಿಸಿದರು. ಇದಕ್ಕೆ ಬೇಕಾಗುವ ೨೦ ಟಿ.ಎಂ.ಸಿ. ನೀರನ್ನು ಗೋದಾವರಿ ತಿರುವು ಯೋಜನೆಯಿಂದ ೮ ಟಿ.ಎಂ.ಸಿ. ಹಾಗೂ ಲಕ್ಕವಳ್ಳಿಯ ಭದ್ರಾಯೋಜನೆಯ ಕಾಲುವೆಗಳ ನವೀಕರಣದಿಂದ ೧೨ ಟಿ.ಎಂ.ಸಿ. ಪಡೆಯಲಾಗುತ್ತದೆ. ಬಚಾವತ್ ತೀರ್ಪಿಗೂ ಇದಕ್ಕೂ ಸಂಬಂಧವಿಲ್ಲ ಎನ್ನಲಾಗುವುದು. ಚಿಕ್ಕಮಗಳೂರಿನ ಮಲ್ಲಿಕಾರ್ಜುನ ಅವರು ಮಲೆನಾಡಿನಲ್ಲಿ ಮಳೆ ಪ್ರಮಾಣ ಕಡಿಮೆಯಾಗಿದೆ. ಹೀಗಾಗಿ ಭದ್ರಾ ಮೇಲ್ದಂಡೆ ಯೋಜನೆ ಕೈಗೊಳ್ಳುವುದರಲ್ಲಿ ಅರ್ಥವಿಲ್ಲ ಎಂದರು. ಇದರಿಂದ ಕೋಪಗೊಂಡ ಉಗ್ರಪ್ಪ ಮತ್ತು ಸುದರ್ಶನ ಅವರು ಸರ್ಕಾರದೊಂದಿಗೆ ವಾದಕ್ಕಿಳಿದು ಯೋಜನೆ ಕೈಗೊಳ್ಳುವ ಬಗ್ಗೆ ಒತ್ತಾಯಿಸಿ ಧರಣಿ ನಡೆಸಿದರು. ಮೇ ೧೯೯೯ರಲ್ಲಿ ಜೆ. ಹೆಚ್. ಪಟೇಲ್ ಅವರು ತುಂಗಾತಿರುವು ಯೋಜನೆಯ ಸಮೀಕ್ಷೆಗೆ ಶಿಲಾನ್ಯಾಸ ನೆರವೇರಿಸಿದ್ದಾರೆ.

ಸರ್ಕಾರದ ತುಂಗಾ ಮೇಲ್ದಂಡೆ ಕಾಲುವೆಯ ಮಾರ್ಗ ಬದಲಾವಣೆಯನ್ನು ವಿರೋಧಿಸಿ ಹಾಗೂ ತುಂಗಾ ಏತ ನೀರಾವರಿ ಕಾಮಗಾರಿಯನ್ನು ಜಾರಿಗೊಳಿಸುವಂತೆ ಒತ್ತಾಯಿಸಿ 'ತುಂಗಾ ಏತ ನೀರಾವರಿ ಯೋಜನಾ ಪಕ್ಷಾತೀತ ಅಭಿವೃದ್ಧಿ ಸಮಿತಿ' ಪುರದಾಳು ಹಾಗೂ ಸುತ್ತಮುತ್ತಲ ಗ್ರಾಮಗಳ ರೈತರು ಮೆರವಣಿಗೆ ನಡೆಸಿ ನೀರಾವರಿ ಇಲಾಖೆಗೆ ಮುತ್ತಿಗೆ ಹಾಕಿದ್ದರು. ಇನ್ನಿತರ ಸಂಘಟನೆಗಳು ಇದರಲ್ಲಿ ಪಾಲ್ಗೊಂಡಿದ್ದವು. ತುಂಗಾ ಮೂಲ ಉಳಿಸಿ ಚಳವಳಿಯನ್ನು ಕರ್ನಾಟಕ ವಿಮೋಚನಾ ರಂಗ ಹಮ್ಮಿಕೊಂಡಿತ್ತು. ಹೀಗೆ ಸಂಘ-ಸಂಸ್ಥೆಗಳು ಇದರಲ್ಲಿ ಪಾಲ್ಗೊಂಡಿವೆ.

ಮೇಲಿನವರ ಉದ್ದೇಶ ನಿಯೋಜಿತ ಸ್ಥಳದಲ್ಲಿ ತುಂಗಾಮೇಲ್ದಂಡೆ ಯೋಜನೆ ನಿರ್ಮಿಸಬೇಕು. ಇದನ್ನು ಬದಲಾಯಿಸಿದರೆ ರೈತರಿಗೆ ಮಾರಕವಾಗುವುದು ಎಂಬುದು ಗಮನಾರ್ಹ. ಶರಾವತಿ, ಚಕ್ರ, ವರಾಹಿ, ಸಾವೆಹಕ್ಕಲು ಯೋಜನೆಗಳಲ್ಲಿ ಮುಳುಗಡೆಗೊಂಡು ನಿರಾಶ್ರಿತರಾದವರು ತುಂಗಾ ಏತ ನೀರಾವರಿ ಯೋಜನಾ ಪ್ರದೇಶದಲ್ಲಿ ಜಮೀನು, ಮನೆ ಮಾಡಿಕೊಂಡಿದ್ದು, ಮಾರ್ಗ ಬದಲಾವಣೆಯಿಂದ ಪುನಃ ನಿರಾಶ್ರಿತರಾಗುತ್ತಾರೆಂದು ಅವರು ತಿಳಿಸಿದ್ದಾರೆ. ಘಟನೆ ಜರುಗುವ ಸಂದರ್ಭದಲ್ಲಿ ನಮ್ಮ ಹೆಣಗಳ ಮೇಲೆ ಕಾಲುವೆ ತೋಡಿ ಎಂದು ಅವರು ಪ್ರತಿಭಟಿಸಿದ್ದರು.

ಈ ತುಂಗಾ ತಿರುವು ಯೋಜನೆಯಾದರೂ ಶೀಘ್ರವಾಗಿ ಆರಂಭಗೊಂಡರೆ ರೈತರಿಗೆ ಅನುಕೂಲವಾಗುತ್ತದೆ. ಇಲ್ಲಿ ಸರ್ಕಾರ ದ್ವಿಮುಖ ನೀತಿಯನ್ನು ಅನುಸರಿಸುವಂತೆ ಕಾಣಬರುತ್ತದೆ. ಚಿತ್ರದುರ್ಗ, ದಾವಣಗೆರೆ, ತುಮಕೂರು ಮತ್ತು ಬಳ್ಳಾರಿ ಜಿಲ್ಲೆಗಳ ರೈತರು ಬರಡು ಭೂಮಿಗೆ ನೀರು ಬೇಕೆಂದು ಒತ್ತಾಯಿಸಿದರೆ, ಮಲೆನಾಡಿನ ಶ್ರೀಮಂತರ ಕಾಫಿ ತೋಟಗಳು ಮತ್ತು ಅರಣ್ಯ ಪ್ರದೇಶ ನಾಶವಾಗುತ್ತದೆಂಬ ದರ್ಪಿಷ್ಟ ದೊರೆಗಳ ಪರವಾಗಿ ಸರ್ಕಾರ ವರ್ತಿಸುತ್ತದೆ. ಹೀಗಾಗಿ ಬರಗಾಲದಿಂದ ಬೇಸತ್ತವರಿಗೆ ನೀರಿನ ಅಗತ್ಯವಿದೆ. ಈ ಯೋಜನೆ ನಿರೀಕ್ಷಿಸಿ ಗುರಿ ತಲುಪುವಲ್ಲಿ ಸಾಕಷ್ಟು ಸಮಯ ಬೇಕಾಗುವುದರಿಂದ ಶೀಘ್ರವಾಗಿ ಆರಂಭಿಸಬೇಕಾಗಿದೆ. ಇದಕ್ಕೆ ಪೂರಕವಾಗಿ ತುಂಗಾ ಮೇಲ್ದಂಡೆ ಯೋಜನೆಗೆ ಕೇಂದ್ರ ಅರಣ್ಯ ಇಲಾಖೆಯು 'ಪರಿಸರ'ದ ಅನುಮತಿ ನೀಡಬೇಕೆಂದು ತುಮಕೂರು ಲೋಕಸಭಾ ಸದಸ್ಯ ಎಸ್. ಮಲ್ಲಿಕಾರ್ಜುನಯ್ಯ ಒತ್ತಾಯಿಸಿದ್ದಾರೆ. ಹೀಗೆ ಸಂಘಟನೆಗಳು ಈ ಕುರಿತು ಚಳವಳಿಗಳಲ್ಲಿ ತೊಡಗಿವೆ.

### ೭:೨. ತುಂಗಭದ್ರಾ ಎಡದಂಡೆ ಕಾಲುವೆ

೧೯೪೪ರಲ್ಲಿ ಭದ್ರಾ ಹಾಗೂ ತುಂಗಾ ಯೋಜನೆಗಳಿಗಾಗಿ ಮೈಸೂರು ಮತ್ತು ಮದ್ರಾಸ್ ಸರ್ಕಾರಗಳ ನಡುವೆ ಒಪ್ಪಂದವಾದಂತೆ, ತುಂಗಭದ್ರಾ ಯೋಜನೆಗೂ ಅದೇ ವರ್ಷ ಮದ್ರಾಸ್, ಹೈದರಾಬಾದ್ ಹಾಗೂ ಮೈಸೂರು ಸರ್ಕಾರಗಳ ನಡುವೆ ಒಪ್ಪಂದವಾಯಿತು. ಏಕೀಕರಣ ನಂತರ (೧೯೫೬) ಆಂಧ್ರ - ಕರ್ನಾಟಕಗಳಿಗೆ ಏರ್ಪಟ್ಟ ಒಪ್ಪಂದದಂತೆ ತುಂಗಭದ್ರಾ ಜಲಾಶಯ ರೂಪುಗೊಂಡು, ನೀರಿನ ವಿತರಣೆ, ವಿದ್ಯುತ್ ಉತ್ಪಾದನೆ ಬಗೆಗೆ ಹಂಚಿಕೆ ನಡೆಯಿತು. ಅಂದಿನಿಂದ ಇಂದಿನವರೆಗೆ ಒಂದಿಲ್ಲೊಂದು ಸಮಸ್ಯೆಯ ಸುಳಿಯಲ್ಲಿದೆ ಈ ಜಲಾಶಯ.

ಅತೀ ಹೆಚ್ಚು ವಿವಾದವು ತುಂಗಭದ್ರಾದ ಎಡದಂಡೆಯ ಕಾಲುವೆ ಯದಾಗಿದೆ. ಪ್ರತಿವರ್ಷ ಎಲ್ಲಾದರೊಂದು ಕಡೆ ಕಾಲುವೆ ಒಡೆದು ರೈತರ ಗೋಳನ್ನು ಮೀರಿಸುತ್ತದೆ. ಇದು ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಿಗೆ ಜೀವನಾಡಿಯಾಗಿದ್ದು, ೨೨೬ ಕಿ. ಮೀ. ಉದ್ದಕ್ಕೆ ಹರಿಯುವ ರಾಜ್ಯದ ಅತಿ ದೊಡ್ಡ ಕಾಲುವೆಯಾಗಿದೆ. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಸು. ೧.೨ ಲಕ್ಷ ಎಕರೆ, ರಾಯಚೂರು ಜಿಲ್ಲೆ ಸಿಂಧನೂರು, ಮಾನ್ವಿ ಹಾಗೂ ರಾಯಚೂರು ತಾಲೂಕುಗಳಲ್ಲಿ ೪.೯ ಲಕ್ಷ ಎಕರೆ ನೀರಾವರಿ ಗೊಳಪಡುತ್ತದೆ. ಫೆಬ್ರವರಿ ೧೭, ೧೯೯೮ರಲ್ಲಿ ಗಂಗಾವತಿಯ ಕಾರಟಗಿ ಬಳಿ ಒಡೆದ ಕಾಲುವೆಯನ್ನು ಒಂದು ವಾರದಲ್ಲಿ ಸಿದ್ಧಪಡಿಸಲಾಯಿತು. ನಂತರ ನೀರಿಗಾಗಿ ಯಾದವಿಕಲಹ ಆರಂಭಿಸಿದರು. ಇದಕ್ಕೂ ಮೊದಲು ಸಿಂಧನೂರು ತಾಲೂಕಿನಲ್ಲಿ ಒಣಗಿ ಸಾಯುತ್ತಿರುವ ಹತ್ತಿ, ಭತ್ತ, ಜೋಳ, ರಾಗಿ ಬೆಳೆಗಳನ್ನು ಬೆಳೆದ ರೈತರು ನೀರಿಲ್ಲದೆ ಕಂಗಾಲಾಗಿದ್ದರು. ತುಂಗಭದ್ರಾ ನಾಲೆಯ ಬಿರುಕಿನಿಂದ ಸುಮಾರು ೨೦ ಸಾವಿರ ಎಕರೆ ಪ್ರದೇಶದಲ್ಲಿ ಬಿತ್ತನೆ ಮಾಡಿದ ಹತ್ತಿ, ಇನ್ನು ೨೦ ಸಾವಿರ ಎಕರೆ ಪ್ರದೇಶದಲ್ಲಿ ಬೆಳೆದ ಮೆಕ್ಕೆಜೋಳ, ಸೂರ್ಯಕಾಂತಿ, ನೀರಿಲ್ಲದೆ ಒಣಗಿತ್ತು. ರೈತರು ಕಾಲುವೆ ಪರಿಸ್ಥಿತಿ ಹದಗೆಡಲು ಜಿಲ್ಲಾಧಿಕಾರಿಗಳು ಕಾರಣ ಎಂದಿದ್ದಾರೆ. ಜಿಲ್ಲಾಧಿಕಾರಿ ಅಶೋಕ ದಳವಾಯಿ ಅವರು ಸಿಂಧನೂರು ಉಪಕಾಲುವೆಯ ನೀರನ್ನು ಕಡಿತಗೊಳಿಸಿ ಕಾಲುವೆ ಕೆಳಭಾಗಕ್ಕೆ ನೀರು ಒದಗಿಸಿದ್ದಾರೆ. ನೀರಾವರಿ ಅಧಿಕಾರಿಗಳು ನೀರು ಹಂಚಿಕೆಯಲ್ಲಿ ಸಮತೋಲನ ಕಾಯ್ದುಕೊಳ್ಳಲು ವಿಫಲರಾಗಿರುವುದೇ ಈ ಸ್ಥಿತಿಗೆ ಕಾರಣ ಎನ್ನಬಹುದು.

ನೀರು ಕಾಲುವೆಗೆ ಸರಿಯಾಗಿ ಪೂರೈಕೆಯಾಗದೆ ಇಲ್ಲಿ ರೈತರು ರಸ್ತಾರೋಖೋ ನಡೆಸಿದರು. ಜಿಲ್ಲಾಧಿಕಾರಿ ಅಶೋಕ ದಳವಾಯಿ ಮತ್ತು ಹೆಚ್ಚುವರಿ ಪೋಲೀಸ್ ವರಿಷ್ಠಾಧಿಕಾರಿ ಪಿ. ಎಸ್. ಮಾಲಿಪಾಟೀಲ್ ೨೪ ಗಂಟೆಗಳಲ್ಲಿ ನೀರು ಕೊಡಿಸುವುದಾಗಿ ಹೇಳಿದರು. ತಕ್ಷಣ ಚಳವಳಿ ಕೈಬಿಟ್ಟರು. ಈ ಭಾಗದಲ್ಲಿ ಇಂತಹ ಅನೇಕ ಚಳವಳಿಗಳು ನಡೆದಿವೆ.

ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಸುಮಾರು ೬ ಲಕ್ಷ ಎಕರೆ ಪ್ರದೇಶಕ್ಕೆ ನೀರಾವರಿ ಒದಗಿಸುವ ತುಂಗಭದ್ರಾ ಎಡದಂಡೆ ನಾಲೆ ಬಿರುಕು ಬಿಟ್ಟನಂತರ ನೀರು ಸರಬರಾಜು ಸ್ಥಗಿತಗೊಂಡ ಹಿನ್ನೆಲೆಯಲ್ಲಿ ರೈತರ ಚಳವಳಿ ಕುರಿತು (೧-೮-೯೮) ಸಭೆ ನಡೆಸಿದರು.

ತುಂಗಭದ್ರಾ ಎಡದಂಡೆ ಕಾಲುವೆಗೆ ನೀರನ್ನು ನಿಗದಿತ ವೇಳೆಗೆ ಬಿಡದಿದ್ದರೆ, ಉಗ್ರಹೋರಾಟ ಮಾಡಬೇಕಾಗುತ್ತದೆಂದು ರೈತ ಸಂಘದವರು ಹೇಳಿದ್ದಾರೆ. ಅವರು ನಾಲೆಯ ಕೆಲಸ ಸಮರ್ಪಕವಾಗಿ ನಡೆದಿಲ್ಲವೆಂದು ಆರೋಪಿಸಿದ್ದಾರೆ. ಇದೇ ಜುಲೈ ಅಂತ್ಯದ ವೇಳೆಗೆ ನೀರು ಬಿಡಲಾಗುತ್ತದೆಂದು (೨೪-೬-೯೯) ಉದ್ದೇಶಿಸಲಾಗಿದೆ. ರೈತರ ವಿರೋಧ ಹೆಚ್ಚಾಗಿದ್ದರಿಂದ ನೀರಾವರಿ ಇಲಾಖೆಯವರು ತುಂಗಭದ್ರಾ ಯೋಜನೆ ಕಾಲುವೆಗಳ ೫೯ನೇ ನೀರಾವರಿ ಸಲಹೆ ಸಭೆಯಲ್ಲಿ ಜಲಾಶಯದಿಂದ ನೀರು ಬಿಡಲು ದಿನಾಂಕ ಗೊತ್ತುಪಡಿಸಿದ್ದು, ೧-೮-೯೯ ರಿಂದ ೧೧-೧-೨೦೦೦ದ ವರೆಗೆ ಎಲ್ಲ ಕಾಲುವೆಗಳಿಗೆ ಹೆಚ್ಚು ಕಡಿಮೆ ನೀರು ಬಿಡಲಾಗುತ್ತದೆ. ರಾಯ, ಬಸವಣ್ಣ ಕಾಲುವೆಗಳಿಗೆ ಮಾತ್ರ ೩೧-೫-೨೦೦೦ದ ವರೆಗೆ ನೀರು ಬಿಡಲಾಗುವುದು.

ನೀರು ಮತ್ತು ವಿದ್ಯುತ್ ಸರಬರಾಜು ಆಂಧ್ರಪ್ರದೇಶಕ್ಕೆ ಮತ್ತು ಕರ್ನಾಟಕಕ್ಕೆ ಆಗುವ ತಾರತಮ್ಯ, ಮಲತಾಯಿ ಧೋರಣೆ ವಿರುದ್ಧ ಪರಸ್ಪರ ಎರಡು ರಾಜ್ಯಗಳ ರೈತರು ಧರಣಿ, ಪ್ರತಿಭಟನೆ ವ್ಯಕ್ತಪಡಿಸುತ್ತಾರೆ.

ಈ ಭಾಗದಲ್ಲಿ ಬರಗಾಲ, ಕ್ಷಾಮ-ಢಾಮರ, ಪ್ರವಾಹ ಕಾಡದೆ ಬಿಟ್ಟಿಲ್ಲ. ೧೯೯೨ರಲ್ಲಿ ಪ್ರವಾಹದಿಂದ ನದಿಗೆ ಸು. ೩.೫ ಲಕ್ಷ ಕ್ಯುಸೆಕ್ಸ್ ನೀರನ್ನು ಜಲಾಶಯದಿಂದ ಬಿಟ್ಟಾಗ ನದಿದಂಡೆಯ ಅನೇಕ ಗ್ರಾಮಗಳು ಮುಳುಗಡೆಯಾಗಿದ್ದವು. ಉದಾ: ಹಂಪೆ ಪರಿಸರದ ಬಲದಂಡೆ ಭಾಗ ಸಂಪೂರ್ಣ ಮುಳುಗಡೆಯಾಗಿತ್ತು. ಮನೆ, ದೇವಾಲಯಗಳಲ್ಲದೆ ಕನ್ನಡ ವಿಶ್ವವಿದ್ಯಾಲಯದ ಕಟ್ಟಡವು ಜಲಾವೃತಗೊಂಡಾಗ ಅಪಾರ ನಷ್ಟಕ್ಕೀಡಾದವು. ಈ ವರ್ಷವೂ ಸಹ ಜಲಾಶಯ ಜುಲೈನಲ್ಲಿ ತುಂಬಿದ್ದು, ಪ್ರವಾಹದ ಮುನ್ನೆಚ್ಚರಿಕೆ (೩೦-೭-೯೯) ಯಿಂದ ನದಿಗೆ ನೀರು ಬಿಡಲಾಗಿತ್ತು.

### ೭:೩. ಕಾವೇರಿ

ಕಾವೇರಿ ನದಿನೀರು ವಿವಾದವು ಇತ್ಯರ್ಥವಾಗದೆ, ಚಳವಳಿ, ಹೋರಾಟಗಳು ನಿರಂತರವಾಗಿ ನಡೆಯುತ್ತಿವೆ. ಸರ್ಕಾರ, ನ್ಯಾಯಾಲಯ, ಸಂವಿಧಾನದ ಚೌಕಟ್ಟು, ರಾಜಕೀಯ ಪಕ್ಷಗಳ ಮಧ್ಯಸ್ತಿಕೆ, ಪ್ರಧಾನಿಗಳ ನೇತೃತ್ವ ಹೀಗೆ ಜನಸಾಮಾನ್ಯರಿಂದ ಸಂವಿಧಾನ ಮಟ್ಟದವರೆಗೆ ಸಮಸ್ಯೆಯ ಸುಳಿಯಲ್ಲಿದೆ. ಒಂದು ತೀರ್ಮಾನ ಕೈಗೊಳ್ಳಲು ಶತಮಾನ ಕಳೆಯಿತು. ತಮಿಳುನಾಡು ತನ್ನ ಹಕ್ಕುಗಳನ್ನು ಪ್ರತಿಪಾದಿಸಿದರೆ ಕರ್ನಾಟಕವು ತನಗಿರುವ ಹಕ್ಕು ಭಾದ್ಯತೆ ಬಗ್ಗೆ ಪ್ರತಿಕ್ರಿಯಿಸಿದೆ. ಹೀಗೆ ರಾಜ್ಯದ ಮುಖ್ಯಮಂತ್ರಿಯನ್ನೇ ಬದಲಾಯಿಸುವ ತಂತ್ರಗಳು ನಡೆದಿವೆ (ಎಸ್. ಬಂಗಾರಪ್ಪ : ೧೯೯೧-೯೨). ಹೀಗೆ ಎಐಎಡಿಎಂಕೆ ನಾಯಕಿ ಜಯಲಲಿತಾ (ಕಾವೇರಿ ವಿಷಯದಲ್ಲಿ) ಬಿಜೆಪಿ ನೇತೃತ್ವದ ಸಂಯುಕ್ತ ರಂಗ (ಅಟಲ್‌ಬಿಹಾರಿವಾಜಪೇಯಿ) ಸರ್ಕಾರಕ್ಕೆ ಕೊಟ್ಟ ಬೆಂಬಲವನ್ನು ವಾಪಸು ಪಡೆದುದರಿಂದ ಪುನಃ ಚುನಾವಣೆಗಳನ್ನು ನಡೆಸಲು ಉದ್ದೇಶಿಸಲಾಯಿತು. ಇವಳು ಬಿ.ಜೆ.ಪಿ. ಮೈತ್ರಿಯನ್ನು ಕಡಿದುಕೊಂಡು ಕಾಂಗ್ರೆಸ್‌ನೊಂದಿಗೆ ಮೈತ್ರಿ ಬೆಳೆಸಿದರು ರಾಜಕೀಯವಾಗಿ ಏಳಿಗೆ ಆಗದೆ ನಿರ್ಲಿಪ್ತಗೊಂಡಂತೆ ಕಂಡು ಬರುವಳು.

ಇತ್ತೀಚಿನ ಸಂದರ್ಭದಲ್ಲಿ ಕಾವೇರಿ ಘಟನಾವಳಿಗಳು ತುಂಬಾ ಪರಿಣಾಮ ಕಾರಿಯಾಗಿವೆ. ಹೆಚ್ಚಿನ ನೀರು ಅವಶ್ಯವಿರುವ ಭತ್ತದ ಎರಡು ಬೆಳೆಗಳನ್ನು ತಮಿಳುನಾಡು ಕೈಬಿಡಲು ಕೃಷಿತಜ್ಞ ಡಾ. ಪಿ. ಸಿ. ಮಹಾಪಾತ್ರ ತಿಳಿಸಿದ್ದಾರೆ. ಇವರು ಬಿಹಾರದ ಬಿರ್ಸಾ ಮತ್ತು ಒರಿಸ್ಸಾ ಕೃಷಿ ವಿ. ವಿ. ನಿವೃತ್ತ ಕುಲಪತಿಗಳು. ಕಾವೇರಿ ಕಣಿವೆಯಲ್ಲಿನ ಜಲಸಂಪನ್ಮೂಲ ಮತ್ತು ಮಣ್ಣು ಹಾಗೂ ವಾತಾವರಣಕ್ಕೆ ಸಂಬಂಧಿಸಿದಂತೆ ಭತ್ತ ಮತ್ತು ಭತ್ತದ ಆಧಾರದ ಮೇಲೆ ಬೆಳೆ ಪದ್ಧತಿ ಕುರಿತು ಕರ್ನಾಟಕದ ಪರ ಪ್ರಮಾಣಪತ್ರ ಕೊಟ್ಟಿದ್ದರು. ಪರಿಸರ ಸಂರಕ್ಷಣೆಗಾಗಿ, ಮಣ್ಣಿನ ಆರೋಗ್ಯ ನೀರಿನ ಕೊರತೆ ನಿವಾರಿಸುವ ಪ್ರಯತ್ನವಿದೆ. ನೀರಿನ ಉಳಿತಾಯಕ್ಕೆ ಭಾರತದಲ್ಲಿ ಭತ್ತದ ಬೆಳೆಯನ್ನು ಕಡಿಮೆಗೊಳಿಸಲು ೧೯೭೬ರಲ್ಲಿ ರಾಷ್ಟ್ರೀಯ ಕೃಷಿ ಆಯೋಗವು ಸಲ್ಲಿಸಿರುವ ವರದಿಯಲ್ಲಿದೆ (೨೬-೨-೯೮) ಎಂದು ಅವರು ಹೇಳಿದ್ದಾರೆ.

ಬಿಜೆಪಿ ನೇತೃತ್ವದ ಸಮ್ಮಿಶ್ರ ಸರ್ಕಾರದ ಕಾರ್ಯಸೂಚಿ ಕಾವೇರಿ ವಿವಾದದ ವಿಷಯದಲ್ಲಿ ಕರ್ನಾಟಕದ ಪರ ನಿಲುವನ್ನು ಪ್ರತಿಧ್ವನಿಸಿದೆಯೇ ಹೊರತು ತಮಿಳುನಾಡನ್ನಲ್ಲ ಎಂದು ಎಂ. ಕರುಣಾನಿಧಿ ಆತಂಕ ಪಟ್ಟರು (೨೨-೩-೯೮). ಇವರು ಹೊಸ ರಾಷ್ಟ್ರೀಯ ಜಲನೀತಿ ಆಧರಿಸಿ ಉಭಯ ರಾಜ್ಯಗಳು ವಿವಾದ ಬಗೆಹರಿಸಿಕೊಳ್ಳಲಾಗುವುದು ಎಂದಿದ್ದರು. ಕಾವೇರಿ ಪ್ರಾಧಿಕಾರದ ರಚನೆಯ ಪರವಾಗಿ ಸಂಯುಕ್ತರಂಗ ಸರ್ಕಾರವಿದೆ ಎಂದು ಆಪಾದಿಸಿದರು. ವಾಸ್ತವವಾಗಿ ಈ ಸಮಸ್ಯೆ ಆ ರೀತಿಯದಲ್ಲವೆಂಬುದು ಸ್ಪಷ್ಟ. ಕಾಮಗಾರಿ ಸಚಿವ ದೊರೆ ಮುರುಗನ್ ಸುಪ್ರೀಂ ಕೋರ್ಟ್‌ನಲ್ಲಿ ಮಾರ್ಚ್ ೩೦ ರಂದು ತಮಿಳುನಾಡು ಸರ್ಕಾರ ಅಂತರರಾಜ್ಯ ಜಲ ವಿವಾದ ಕಾಯ್ದೆಯ ೬ ಎ ವಿಧಿಯ ಅನ್ವಯ ರಚಿತ ಕರಡು ಯೋಜನೆಯನ್ನು ತಕ್ಷಣ ಜಾರಿಗೆ ತರಲು ಒತ್ತಾಯಿಸಿದರು.

ಮಧ್ಯಂತರ ತೀರ್ಪಿನ ಜಾರಿ, ಕಾವೇರಿ ಜಲ ಪ್ರಾಧಿಕಾರದ ರಚನೆಗೆ ಕರ್ನಾಟಕ ವಿರೋಧಿಸಿ ಪ್ರತ್ಯೇಕ ಸಮಿತಿಯನ್ನು ಬಯಸಿದೆ. ರಾಜ್ಯ ಮಟ್ಟದ ಜಲಪ್ರಾಧಿಕಾರ ರಚಿಸುವ ಅಗತ್ಯವಿದ್ದು, ನದಿನೀರನ್ನು ಹಂಚುವಾಗ ನೀರು ಪೂರೈಕೆಯನ್ನು ಹಲವು ಕಚೇರಿಗಳು ವಹಿಸಿಕೊಂಡಿದ್ದು, ಸಮರ್ಪಕ ನೀರು ಪೂರೈಕೆಗೆ ಈ ಪ್ರಾಧಿಕಾರ ಅಗತ್ಯ ಎಂದು ಜೆ. ಪಿ. ಶರ್ಮರು ಅಭಿಪ್ರಾಯಪಟ್ಟಿದ್ದಾರೆ.

ದಿನಾಂಕ ೨೭-೩-೯೮ ಗುರುವಾರ ಬೆಳಗ್ಗೆ ೧೧.೧೫ಕ್ಕೆ ನೀರಾವರಿ ಇಲಾಖೆಗೆ ಬಂದ ಅನಾಮಧೇಯನ ಟೆಲಿಫೋನ್ ಕರೆ ಕೃಷ್ಣರಾಜ ಸಾಗರವನ್ನು ಆಸ್ಫೋಟಿಸುವುದಾಗಿ ತಿಳಿಸಿತು. ಅವರ ಪ್ರಕಾರ ಶುಕ್ರವಾರ ೧.೧೫ಕ್ಕೆ ಸ್ಫೋಟಗೊಳ್ಳುವುದು ಹುಸಿಯಾಯಿತು. ಅಂದಿನಿಂದ ಬಾಂಬ್ ಸ್ಫೋಟದ ಬೆದರಿಕೆಯಿಂದಾಗಿ ಕನ್ನಂಬಾಡಿಗೆ ರಕ್ಷಣೆ ಮತ್ತು ಕಾವಲಿಡಲಾಯಿತು. ೧೯೯೨ರಲ್ಲಿ ಇಂಥ ಬೆದರಿಕೆಗಳು ಬಂದಿದ್ದವು. ಈ ರೀತಿ ಅನೇಕ ಘಟನೆಗಳು ನಡೆದರೂ ಯಾವುದೇ ಕೆಟ್ಟ ಪರಿಣಾಮಬೀರಲಿಲ್ಲ. ಉಭಯ ರಾಜ್ಯಗಳ ಜಲವಿವಾದವನ್ನು ಅನ್ಯೋನ್ಯವಾಗಿ ಬಗೆಹರಿಸುವ ಪ್ರಾಮಾಣಿಕ ಪ್ರಯತ್ನ ಮಾಡುವುದಾಗಿ ಎ. ಬಿ. ವಾಜಪೇಯಿ ಭರವಸೆ ನೀಡಿದ್ದು ಸ್ಪಷ್ಟ.

ಉದ್ದೇಶಿತ ರಾಷ್ಟ್ರೀಯ ಜಲನೀತಿಯನ್ನು ಇನ್ನು ಪ್ರಕಟಿಸದಿರುವ ಹಿನ್ನೆಲೆಯಲ್ಲಿ ಕಾವೇರಿ ಜಲವಿವಾದ ಬಗ್ಗೆ ನ್ಯಾಯ ಪಂಚಾಯ್ತಿ ನೀಡಿದ ಮಧ್ಯಂತರ ತೀರ್ಪನ್ನು ಜಾರಿಗೊಳಿಸಲು ಅಧಿಸೂಚನೆಯನ್ನು ಹೊರಡಿಸಿದಂತೆ ಕಾಣಲಿಲ್ಲ. ಇದರಿಂದ ದೆಹಲಿಯಲ್ಲಿ ಕುಳಿತು ಕಾವೇರಿ ವಿವಾದದ ಚರ್ಚೆ ಅಸಾಧ್ಯವಾದದು, ಉಭಯ ರಾಜ್ಯದ ಮುಖ್ಯಮಂತ್ರಿಗಳ ಸಭೆ ಕರೆದು ಚರ್ಚಿಸಲು ಸಾರ್ವಜನಿಕರು ಕೋರಿದ್ದರು. ಇಂತಹ ಕೆಲವು ಘಟನೆಗಳಿಂದ ಬೇಸತ್ತ ಮುಖ್ಯಮಂತ್ರಿ ಜೆ. ಹೆಚ್. ಪಟೇಲ್ ಅವರು ಕಾವೇರಿ ಸಂಬಂಧ ತಮಿಳುನಾಡಿನ ಒತ್ತಡಕ್ಕೆ ಮಣಿಯುವುದಿಲ್ಲ, ರಾಷ್ಟ್ರೀಯ ಜಲನೀತಿ ರೂಪಿಸಬೇಕು ಅನಂತರ ನೀರು ಬಿಡಲಾಗುತ್ತದೆ ಎಂದರು (೯.೪.೯೮).

ಕ್ರಮೇಣ ಕಾವೇರಿ ಜಲವಿವಾದ ಹೊಸರೂಪ ಪಡೆಯುವುದರ ಮತ್ತು ಬೀದರ್, ಗುಲ್ಬರ್ಗಾ ಜಿಲ್ಲೆಗಳ ಬೆಳೆನಾಶದಿಂದ ರೈತರು ಸಂಕಷ್ಟದ ಸ್ಥಿತಿಯಲ್ಲಿರುವುದರ ಬಗ್ಗೆ ವಿಧಾನಸಭೆಯ ಕಲಾಪದಲ್ಲಿ ಚರ್ಚಿಸಲಾಯಿತು. ಮಲ್ಲಿಕಾರ್ಜುನ ಖರ್ಗೆ ಅವರು ಅಂತರ ರಾಜ್ಯ ಮಂಡಳಿಯ ಶಿಫಾರಸ್ಸು ರಾಜ್ಯದ ಹಿತಕ್ಕೆ ಮಾರಕವಾಗಿದೆ ಎಂದರು. ಕಾವೇರಿ

ಸಮಸ್ಯೆಯನ್ನು ೪೦ ವರ್ಷಗಳಿಂದ ಬಲ್ಲ ನಂಜೇಗೌಡರು ರಾಷ್ಟ್ರೀಯ ಜಲನೀತಿ ಮಾರ್ಗಸೂಚಿ ಜಾರಿಗೆ ಬಾರದೇ ಕಾವೇರಿ ಪ್ರಾಧಿಕಾರ ರಚನೆ ಮಾಡಿದರೆ ಪಕ್ಷ ಮತ್ತು ಶಾಸಕ ಸ್ಥಾನಕ್ಕೆ ರಾಜೀನಾಮೆ ನೀಡುವುದಾಗಿ ಹೇಳಿದ್ದರು.

ತಮಿಳುನಾಡು ಕಾವೇರಿ ವಿವಾದವನ್ನು ನ್ಯಾಯಾಂಗದ ಮೂಲಕವೇ ಬಗೆಹರಿಸಿಕೊಳ್ಳಲು ತೀರ್ಮಾನಿಸಿದ್ದು, ಕರ್ನಾಟಕದೊಂದಿಗೆ ಯಾವುದೇ ಮಾತುಕತೆಗೆ ಸಿದ್ಧವಿಲ್ಲ ಎಂದಿತು. ನ್ಯಾಯಾಂಗದ ಮೂಲಕವೇ ತೀರ್ಮಾನಕ್ಕೆ ಬದ್ಧ, ಕಾವೇರಿ ವಿವಾದ ಸುಪ್ರೀಂ ಕೋರ್ಟಿನ ವಿಚಾರಣೆಯಲ್ಲಿದ್ದು ಅದರ ತೀರ್ಪು ಅಂತಿಮ ಎಂದು ಅದು ಪ್ರತಿಪಾದಿಸಿದೆ. ಕಾವೇರಿ ನ್ಯಾಯ ಮಂಡಳಿಯ ಮಧ್ಯಂತರ ತೀರ್ಪನ್ನು ತಮಿಳುನಾಡು ಪರವಾಗಿ ಜಾರಿಗೊಳಿಸಲು ಕೇಂದ್ರ ಸರ್ಕಾರ ಬದ್ಧವಾಗಿದೆ ಎಂದು ತಮಿಳುನಾಡು ಎಐಎಡಿಎಂಕೆ ನಾಯಕಿ ಜಯಲಲಿತಾ ತಿಳಿಸಿದ್ದಾಳೆ (೧೬-೪-೯೮). ಇಂತಹ ಘಟನೆಗಳನ್ನು ರಾಜಕೀಯ ಲೇಪಹಚ್ಚಿ, ಪ್ರಚಾರ ಪಡೆಯುವವರಲ್ಲಿ ಜಯಲಲಿತಾ ಪ್ರಮುಖಳಾಗಿದ್ದಾಳೆನ್ನಬಹುದು.

ಕಾವೇರಿ ಜಲವಿವಾದ ಇತ್ಯರ್ಥವಾಗದಿರುವುದರಿಂದ ಬೆಂಗಳೂರು ನಗರಕ್ಕೆ ಕುಡಿಯುವ ನೀರು ಪೂರೈಸುವ ಕಾವೇರಿ ನಾಲ್ಕನೇ ಹಂತದ ಯೋಜನೆಗೆ ನೆರವು ನೀಡಬಾರದೆಂದು ತಮಿಳುನಾಡು ಜಪಾನ್‌ನ ಸಾಗರೋತ್ತರ ಆರ್ಥಿಕ ಸಹಕಾರ ನಿಧಿಗೆ ಕೋರಿರುವುದನ್ನು ಪ್ರತಿಭಟಿಸಿ ಕೇಂದ್ರ ಸರ್ಕಾರಕ್ಕೆ ಕರ್ನಾಟಕ ಪತ್ರ ಬರೆದಿದೆ. ಈ ಹಿನ್ನೆಲೆಯಲ್ಲಿ ಕಾವೇರಿ ಜಲವಿವಾದ ನ್ಯಾಯ ಮಂಡಲಿಯ ಅಂತಿಮ ವರದಿಯಲ್ಲಿ ೯ ಟಿ.ಎಂ.ಸಿ. ನೀರು ಬಳಸಲು ಸೂಚಿಸಿತು (೧೮-೪-೯೮).

ಏನೆಲ್ಲಾ ಚಳವಳಿ, ಪ್ರತಿಭಟನೆಗಳು ನಡೆದ ತರುವಾಯವೂ ಸಮಸ್ಯೆಗೆ ಪರಿಹಾರ ಸಿಗಲಿಲ್ಲ. ತಮಿಳುನಾಡಿನ ಸಚಿವ ದೊರೈ ಮುರುಘನ್ ಅವರು ಅಂತರ ರಾಜ್ಯ ಜಲವಿವಾದಕ್ಕೆ ರಾಷ್ಟ್ರೀಯ ಜಲನೀತಿ ಪರಿಹಾರವಲ್ಲವಾದರೂ (೨೨-೪-೯೮), ೧೯೫೬ರ ಅಂತರ ರಾಜ್ಯ ಜಲವಿವಾದಗಳ ಕಾಯ್ದೆ ವ್ಯಾಜ್ಯಗಳನ್ನು ತೀರ್ಮಾನಿಸುತ್ತದೆ ಎಂದರು. ಕಾವೇರಿ ಮಧ್ಯಂತರ ತೀರ್ಪನ್ನು ನಿಷ್ಫಲಗೊಳಿಸುವುದಕ್ಕೆ ಕರಡು ಯೋಜನೆಯನ್ನು ರಾಷ್ಟ್ರೀಯ ಕಾರ್ಯಸೂಚಿಯಲ್ಲಿ ಸೇರ್ಪಡೆ ಮಾಡಲು ಅಣ್ಣಾ ಡಿಎಂಕೆ ಪ್ರಯತ್ನಿಸಿತು.

ಕಾವೇರಿ ನ್ಯಾಯ ಮಂಡಳಿಯ ಮಧ್ಯಂತರ ಆಜ್ಞೆಯನ್ನು ಜಾರಿಗೆ ತರಲು ಕರಡುಯೋಜನೆ ರೂಪಿಸುವುದಕ್ಕಾಗಿ ಬಿ.ಜೆ.ಪಿ. ಸರ್ಕಾರ ಕಾಲಾವಕಾಶ ಕೋರಿದೆ. ಈ ಪ್ರಕರಣದ ವಿಚಾರಣೆಯನ್ನು ಜುಲೈ ೨೧ಕ್ಕೆ ಮುಂದೂಡಿತ್ತು. ಕಾವೇರಿ ಜಲವಿವಾದಗಳ ನ್ಯಾಯಮಂಡಳಿಯು ೧೯೯೧ರ ಜೂನ್ ೨೫ ರಂದು ನೀಡಿದ ಮಧ್ಯಂತರ ಆಜ್ಞೆಯಂತೆ ಕರ್ನಾಟಕವು ತಮಿಳುನಾಡಿಗೆ ೨೦೫ ಟಿ.ಎಂ.ಸಿ. ನೀರು ಬಿಡುವ ಬಗೆಗೆ ಉಂಟಾದ ಅಡಚಣೆ ಹಿನ್ನೆಲೆಯಲ್ಲಿ ತಮಿಳುನಾಡು ಸುಪ್ರೀಂ ಕೋರ್ಟ್ ಮುಂದೆ ಮಾಡಿದ ಮನವಿ ಯೋಜನೆಯನ್ನು ರೂಪಿಸಲು ಹೆಚ್. ಡಿ. ದೇವೇಗೌಡ ಅವರು ಅಧಿಕಾರ ಕಳೆದುಕೊಳ್ಳುವ ದಿನಗಳಲ್ಲಿ ಕೇಂದ್ರವು ನ್ಯಾಯಾಲಯಕ್ಕೆ ಮುಚ್ಚಳಿಕೆ ಬರೆದು ಕೊಟ್ಟಿತು. ಕರ್ನಾಟಕದ ಪರವಾಗಿ ನ್ಯಾಯವಾದಿಗಳಾದ ಎಫ್. ಎಸ್. ನಾರಿಮನ್, ಅನಿಲ್ ದಿವಾನ್, ಅಡ್ವೊಕೇಟ್ ಜನರಲ್ ವಿಜಯ ಶಂಕರ್, ಎಸ್. ಎಸ್. ಜವಳಿ ಮತ್ತು ಮೋಹನ್ ವಿ. ಕಾತರಕಿ ಅವರುಗಳಿದ್ದರು.

ಕರ್ನಾಟಕದ ಮೇಲೆ ಸಣ್ಣ-ಪುಟ್ಟ ಕಾರಣಗಳಿಗೆ ಆಕ್ಷೇಪವೆತ್ತುವ ತಮಿಳುನಾಡಿಗೆ ಸ್ಪಷ್ಟತೆ, ಅಂತಿಮ ನಿರ್ಧಾರವಿಲ್ಲ. ಉದಾ: ಶಿವನಸಮುದ್ರದ ಬಳಿ ೨೭೦ ಮೆ. ವ್ಯಾ. ಸಾಮರ್ಥ್ಯದ ಜಲವಿದ್ಯುತ್ ಯೋಜನೆಯನ್ನು ಸ್ಥಾಪಿಸಬೇಕೆಂದಿರುವ ಕರ್ನಾಟಕದ ನಿರ್ಧಾರವನ್ನು ತಮಿಳುನಾಡು ವಿರೋಧಿಸಿದೆ. ಈ ಯೋಜನೆ ಕಾರ್ಯಗತವಾದರೆ ಮೆಟ್ಟೂರು ಅಣೆಕಟ್ಟೆಗೆ ಹರಿದುಬರುವ ನೀರಿನ ಪ್ರಮಾಣ ೧೨೫ ಟಿ.ಎಂ.ಸಿ.ಗೆ ಇಳಿಯಲಿದೆ. ಮುಂದಿನ ವರ್ಷಗಳಲ್ಲಿ ಕಡಿಮೆಯಾಗುವ ನಿರೀಕ್ಷೆ ಇದೆ ಎಂದು ಅವರು ವಿರೋಧಿಸಿದರು (೯-೬-೯೮).

ಕಾವೇರಿ ವಿವಾದ ಪರಿಹಾರಕ್ಕೆ ಎಲ್ಲ ಪಕ್ಷಗಳ ನಾಯಕರ ಸಭೆ ನಡೆಸಿ, ಒಮ್ಮತದ ನಿರ್ಧಾರಕ್ಕೆ ಬರಬೇಕೆಂದು ಬಿ.ಜೆ.ಪಿ. ಶಾಸಕಾಂಗದ ಮುಖಂಡ ಕೆ. ಎಸ್. ಈಶ್ವರಪ್ಪ ಅವರು ಮುಖ್ಯಮಂತ್ರಿಗಳಿಗೆ ದಿ: ೨೪-೭-೯೮ ರಂದು ಒತ್ತಾಯಿಸಿದರು. ನಂತರ ಎಲ್ಲ ಪಕ್ಷಗಳು ಒಂದಾಗಿ ಮನವಿ ಮಾಡಿಕೊಂಡವು. ಈ ಜಲ ವಿವಾದ ಬಗ್ಗೆ ನ್ಯಾಯ ಮಂಡಲಿಯ ಮುಂದೆ ಅರ್ಜಿಸಲ್ಲಿಸಲು ನಿರ್ಧರಿಸಿದೆ. ಕಾನೂನಿನ ಚೌಕಟ್ಟಿನಲ್ಲಿಯೇ ಅಲ್ಲದೆ ಹೊರಗೆ ಅವಕಾಶವಿರಬೇಕೆಂದು ಎಚ್. ಕೆ. ಪಾಟೀಲ್ ಹೇಳುತ್ತಾ, ಸೂಕ್ಷ್ಮ ಮತ್ತು ಗಂಭೀರ ವಿಷಯವಾಗಿರುವುದರಿಂದ ತಮಿಳುನಾಡಿನ ಒತ್ತಡಕ್ಕೆ ಮಣಿಯಬಾರದು ಎಂದು ಆಗ್ರಹಿಸಿದ್ದಾರೆ (೨೪-೭-೯೮).

ಈ ವಿವಾದಕ್ಕೆ ರಾಜಕೀಯ ಲೇಪ ಹಚ್ಚುವ ನಿಪುಣ ರಾಜಕಾರಣಿಗಳು ಇದ್ದಾರೆ. ಎಲ್ಲ ರಂಗಗಳಲ್ಲಿ ತಮಿಳುನಾಡಿನ ಹಿತಾಸಕ್ತಿಗಳಿಗೆ ವಾಜಪೇಯಿ ಸರ್ಕಾರ ದ್ರೋಹ ಬಗೆದಿರುವುದರಿಂದ ಆ ಸರ್ಕಾರಕ್ಕೆ ನೀಡಿರುವ ಬೆಂಬಲವನ್ನು ವಾಪಸ್ ಪಡೆಯುವಂತೆ ಡಾ. ಸುಬ್ರಮಣಿಯನ್‌ಸ್ವಾಮಿ ಜಯಲಲಿತಾಗೆ ಕುಮ್ಮಕ್ಕು ನೀಡಿದರು (೨೫-೭-೯೮). ಎರಡು ವರ್ಷಗಳ ಹಿಂದೆ ಇದೇ ಸ್ವಾಮಿ ಜಗತ್ತಿನ ಅತ್ಯಂತ ದುಷ್ಟ ಮಹಿಳೆ ಜಯಲಲಿತಾ ಎಂದಿದ್ದರು. ಹೀಗೆ ನ್ಯಾಯಾಧಿಕರಣದ ಮಧ್ಯಂತರ ಆದೇಶ ಜಾರಿಗೆ ಸಂಬಂಧಿಸಿದಂತೆ, ಕರಡು ಯೋಜನೆ ರೂಪಿಸಲು ಸರ್ವೋಚ್ಚ ನ್ಯಾಯಾಲಯದ ಆದೇಶ ನೀಡಿತ್ತು. ಈ ಹಿನ್ನೆಲೆಯಲ್ಲಿ ಕೇಂದ್ರ ಜಲಸಂಪನ್ಮೂಲ ಇಲಾಖೆಯು ಕಾವೇರಿ ಕಣಿವೆ ರಾಜ್ಯಗಳ ಮುಖ್ಯಕಾರ್ಯದರ್ಶಿಗಳ ಸಭೆಯಲ್ಲಿ (೨೯-೭-೯೮) ರಾಜ್ಯದ ಈ ನಿಲುವನ್ನು ಸ್ಪಷ್ಟಪಡಿಸಿತು. ರಾಜ್ಯದ ಹಿತಕ್ಕೆ ಮಧ್ಯಂತರ ಆದೇಶ ಮಾರಕವಾಗಿರುವುದನ್ನು ಒಪ್ಪಲು ಸಾಧ್ಯವಿಲ್ಲ ಎಂದು ಎಲ್ಲ ಪಕ್ಷಗಳು ವಿರೋಧಿಸಿದವು. ಈ ಸಂಬಂಧ ತಮಿಳುನಾಡಿನ ಆಗ್ರಹವನ್ನು ಅಲ್ಲಗಳೆಯಿತು. ನಾಲ್ಕು ರಾಜ್ಯಗಳ ಮುಖ್ಯಮಂತ್ರಿಗಳ ಸಭೆ ಕರೆಯಲು ಮತ್ತು ರಾಷ್ಟ್ರೀಯ ಜಲನೀತಿ ರೂಪಿಸಲು ತಮ್ಮ ನಿಲುವುಗಳನ್ನು ಸ್ಪಷ್ಟಪಡಿಸಿದರು.

ಕಾವೇರಿ ಪಂಚಾಯ್ತಿ ಮಧ್ಯಂತರ ವರದಿಯ ಜಾರಿಗಾಗಿ ರಚಿಸಲಾಗಿರುವ ಕೇಂದ್ರದ ಪರಿಷ್ಕೃತ ಕರಡು ಯೋಜನೆಯ ಕೆಲನಿಯಮಗಳು ಸಂಪೂರ್ಣವಾಗಿ ಅಂಗೀಕಾರ ವಿರುದ್ಧವಾಗಿದ್ದವು. ಇದಕ್ಕೆ ಸಭೆ ಕರೆದು ಎಸ್. ಬಂಗಾರಪ್ಪ, ವೀರಪ್ಪ ಮೊಯ್ಲಿ, ರಾಮಕೃಷ್ಣ ಹೆಗಡೆ, ಅನಂತಕುಮಾರ್, ಬಾಬಾಗೌಡ ಪಾಟೀಲ್, ಕೆ. ಎಸ್. ಈಶ್ವರಪ್ಪ, ಎಚ್. ಕೆ. ಪಾಟೀಲ್, ಟಿ. ಬಿ. ಜಯಚಂದ್ರ, ವಿ. ಎಲ್. ಪಾಟೀಲ್, ಬಿ. ಮುನಿಯಪ್ಪ

ಇತರರು ಭಾಗವಹಿಸಿದ್ದರು. ಪರಸ್ಪರ ಸಹಕಾರದೊಂದಿಗೆ ಬಗೆಹರಿಸಿಕೊಳ್ಳಲು ತೀರ್ಮಾನಿಸಿದರು.

ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅಧ್ಯಕ್ಷತೆಯಲ್ಲಿ ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದಂತೆ ದೆಹಲಿಯಲ್ಲಿ ಮುಖ್ಯಮಂತ್ರಿಗಳ ಸಭೆ ಸೇರಿತ್ತು. ಇದರಲ್ಲಿ ಜೆ. ಹೆಚ್. ಪಟೇಲ್ ಮಧ್ಯಂತರ ಆದೇಶ ಜಾರಿಯಿಂದ ಕರ್ನಾಟಕ ನೀರಾವರಿ ಅಭಿವೃದ್ಧಿಗೆ ಮಾರಕವಾಗುವ ಅಂಶಗಳಿವೆ. ಶಾಂತಿ ಹದಗೆಡುತ್ತದೆ, ಜನತೆಯಲ್ಲಿ ತೀವ್ರ ಅಸಮಾಧಾನವಿದೆ ಎಂದು ತಿಳಿಸಿದರು (೬-೮-೯೮). ಕಾವೇರಿ ನದಿನೀರು ಹಂಚಿಕೆಗೆ ನ್ಯಾಯ ಪಂಚಾಯ್ತಿಯ ಮಧ್ಯಂತರ ಆದೇಶ ಜಾರಿಗೆ ಸಂಬಂಧಿಸಿದಂತೆ ಕೇಂದ್ರದ ಪರಿಷ್ಕೃತ ಯೋಜನೆಗಾಗಿ ಅಧಿಸೂಚನೆ ಹೊರಡಿಸಿರುವುದಕ್ಕೆ ಕರ್ನಾಟಕ ತೃಪ್ತಿಪಟ್ಟಿದೆ. ತಮಿಳುನಾಡು ಸಹ ಸಂತಸಗೊಂಡಿದ್ದು, ಅಣ್ಣಾಡಿಎಂಕೆಯು ಅಭಿನಂದನೆ ಸಲ್ಲಿಸಿದೆ. ಈ ಪರಿಷ್ಕೃತ ಯೋಜನೆಯ ಅಧಿಸೂಚನೆಯನ್ನು ಪ್ರಕಟಿಸಿದಾಗ ಜಯಲಲಿತಾ ವಾಜಪೇಯಿಯವರನ್ನು ಬೆದರಿಕೆ ಹಾಕಿದಾಗ ಅವರು ನಿರ್ಲಕ್ಷಿಸಿದರು (೧೨-೮-೯೮). ಜಲವಿವಾದದ ಕರಡು ಯೋಜನೆ ತಿರಸ್ಕರಿಸಲು ಎಚ್. ಕೆ. ಪಾಟೀಲ್ ಆಗ್ರಹಪಡಿಸಿದ್ದರು. ಅವರು ೧೯೯೭ ಜುಲೈ ೧೦ ರಂದು ಕೇಂದ್ರ ಸರ್ಕಾರಕ್ಕೆ ರಾಜ್ಯ ಮಾಡಿದ ಕರಡಯೋಜನೆಯ ಮನವಿಗೆ ಗಮನ ನೀಡಿಲ್ಲ ಎಂದರು. ಈ ಘಟನೆಗಳಿಂದ ಕಾವೇರಿ ರಾಜ್ಯಕ್ಕೆ ಅನ್ಯಾಯ, ತಮಿಳುನಾಡಿಗೆ ಲಾಭ ಎಂದು ಕರ್ನಾಟಕದ ಮುಖ್ಯ ಕಾರ್ಯದರ್ಶಿ ಹೇಳಿದ್ದಾರೆ. ಇವೆಲ್ಲಕ್ಕಿಂತ ಭಿನ್ನವಾಗಿ ತಮಿಳುನಾಡು ಹಾಗೂ ಕರ್ನಾಟಕ ಸರ್ಕಾರಗಳ ನಡುವೆ ಮಾತುಕತೆ ನಡೆಯುವ ಬದಲಿಗೆ ಜನತೆಯ ಮಟ್ಟದಲ್ಲಿ ಸಂಧಾನ ನಡೆಯಬೇಕಾದ ಅಗತ್ಯವಿದೆ ಎಂದು ಲೋಕಶಕ್ತಿ ಪ್ರತಿಪಾದಿಸಿದೆ (೨-೮-೯೮).

ಕಾವೇರಿ ನ್ಯಾಯಮಂಡಳಿ ರದ್ದು ಮಾಡಿ ಜಲನೀತಿ ರೂಪಿಸಬೇಕೆಂದು ಆಗ್ರಹಿಸುತ್ತಿದ್ದ ಹೆಚ್. ಡಿ. ದೇವೇಗೌಡ ಪ್ರಧಾನ ಮಂತ್ರಿಯಾದಾಗ ರಾಜ್ಯಕ್ಕೆ ದ್ರೋಹ ಬಗೆದರೆಂದು ರೈತರು ಟೀಕಿಸಿದರು. ಇದು ಸಂಯುಕ್ತ ರಂಗ ಸರ್ಕಾರದ ದೌರ್ಬಲ್ಯಕ್ಕೂ ಕಾರಣವಾಯಿತು. ಪ್ರಧಾನಿ ಎ. ಬಿ. ವಾಜಪೇಯಿ ಅಧ್ಯಕ್ಷತೆಯಲ್ಲಿ ನಾಲ್ಕು ರಾಜ್ಯಗಳ ಮುಖ್ಯಮಂತ್ರಿಗಳ ನಡುವೆ ಸಭೆ ನಡೆಯಿತು (೭-೮-೯೮). ಮೊದಲ ದಿನ ಮಾತುಕತೆ ವಿಫಲವಾದಾಗ, ನೀವು ಒಮ್ಮತಕ್ಕೆ ಬನ್ನಿ ಇಲ್ಲವಾದರೆ ಸುಪ್ರೀಂ ಕೋರ್ಟಿಗೆ ಏನೆಂದು ಹೇಳಲಿ ಎಂದರು. ಪುನಃ ಸಂಜೆ ತಮ್ಮ ನಿವಾಸದಲ್ಲಿ ಸಭೆ ಸೇರಿದರು. ಕರ್ನಾಟಕದ ಜೆ. ಹೆಚ್. ಪಟೇಲ್, ತಮಿಳುನಾಡಿನ ಎಂ. ಕರುಣಾನಿಧಿ, ಕೇರಳದ ನಯನಾರ್ ಹಾಗೂ ಪುದುಚೇರಿಯ ಜಾನಕಿ ರಾಮನ್ ಭಾಗವಹಿಸಿದ ಮುಖ್ಯಮಂತ್ರಿಗಳು. ಕಾವೇರಿ ಪ್ರಾಧಿಕಾರದ ಬದಲು ಸಮನ್ವಯ ಸಮಿತಿ ರಚಿಸಬೇಕೆಂದು ಕರ್ನಾಟಕ ಹೇಳಿದರೆ, ತಮಿಳುನಾಡು ಇದನ್ನು ವಿರೋಧಿಸಿತು. ಒಮ್ಮತವಿಲ್ಲದೆ ಕಾವೇರಿ ನ್ಯಾಯ ಮಂಡಳಿ ಜಾರಿಗೆ ಬರುವುದಿಲ್ಲವೆಂಬುದು ಇನ್ನಷ್ಟು ಸ್ಪಷ್ಟವಾಯಿತು. ಕರ್ನಾಟಕದ ಮುಖ್ಯಮಂತ್ರಿ ರಾಜ್ಯದ ಹಿತರಕ್ಷಣೆಗಾಗಿ ಏಕರೂಪ ತಂತ್ರ ರೂಪಿಸುವ ಸಲುವಾಗಿ ಸರ್ವಪಕ್ಷಗಳ ನಾಯಕರ ಸಭೆ ನಡೆಸಿದಾಗ ; ಎಸ್. ಆರ್. ಬೊಮ್ಮಾಯಿ, ಸಿ. ಕೆ. ಜಾಫರ್ ಷರೀಫ್, ಅನಂತಕುಮಾರ್ ಭಾಗವಹಿಸಿ

ಮಂಡಿಸಿದ ನಿರ್ಣಯಗಳನ್ನು ಮುಖ್ಯಮಂತ್ರಿ ದೆಹಲಿಯಲ್ಲಿ ಪ್ರಸ್ತಾಪಿಸಿದರೂ ಫಲಕಾರಿಯಾಗಲಿಲ್ಲ.

ಪ್ರಧಾನಿಗಳ ನಿವಾಸದಲ್ಲಿ ಸಂಜೆ ಪುನಃ ನಡೆದ ಸಭೆಯು ಕಾವೇರಿ ನದಿನೀರು ಪ್ರಾಧಿಕಾರ ಯೋಜನೆಯಲ್ಲಿ ಬರುವ ೧೧ ಮಂದಿ ಸದಸ್ಯರ ಪ್ರಾಧಿಕಾರ, ೧೦ ಮಂದಿ ಹರ್ತೋಟಿ ಸಮಿತಿ, ಜಲಾಶಯಗಳ ನಿರ್ವಹಣೆ, ಫೀಲ್ಡ್ ಆರ್ಗನೈಜೇಶನ್ಸ್, ಕರ್ನಾಟಕ ತನ್ನ ಅಚ್ಚುಕಟ್ಟು ಪ್ರದೇಶವನ್ನು ೧೧.೨ ಲಕ್ಷ ಎಕರೆಗಿಂತ ಹೆಚ್ಚು ವಿಸ್ತರಿಸಬಾರದೆನ್ನುವುದನ್ನು ಕರ್ನಾಟಕ ವಿರೋಧಿಸಿದೆ. ಇದಕ್ಕೆ ತಮಿಳುನಾಡು ಬಿಗಿಪಟ್ಟು ಹಿಡಿದಿದೆ. ಪ್ರಧಾನಿ ಮಧ್ಯಸ್ತಿಕೆಯಿಂದ ತಾತ್ವಿಕ ಒಪ್ಪಿಗೆ ಸಿಕ್ಕರೂ, ಕರ್ನಾಟಕಕ್ಕೆ ಅನ್ಯಾಯವಾಗಲಾರದು. ಸರ್ವೋಚ್ಚ ನ್ಯಾಯಾಲಯಕ್ಕೆ ಹೋದರೆ ಫಲಿತಾಂಶ ಹೇಗಿರುತ್ತದೊ ತಿಳಿಯದು. ಇದನ್ನು ಎಸ್. ಎಂ. ಕೃಷ್ಣ ಅವರು ಉಗ್ರವಾಗಿ ಪ್ರತಿಭಟಿಸಿ ವಿರೋಧಿಸಿದ್ದಾರೆ.

ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದಂತೆ : ರಾಜ್ಯಾಂಗ, ಸುಪ್ರೀಂ ಕೋರ್ಟ್‌ನ ನಿರ್ಣಯಕ್ಕೆ ವಿಧಾನಮಂಡಲದ ನಿರ್ಣಯಗಳು ತದ್ವಿರುದ್ಧವಾಗಿದ್ದವು. ನ್ಯಾಯ ಮಂಡಳಿಯ ಮಧ್ಯಂತರ ಆದೇಶದ ಜಾರಿಗೆ ಅನಿವಾರ್ಯವಾಗಿ ಒಪ್ಪಿಗೆ ನೀಡಿತು. ಈವರೆಗೆ ನ್ಯಾಯಮಂಡಳಿಯ ಮಧ್ಯಂತರ ಆದೇಶವನ್ನು ಕರ್ನಾಟಕ ಒಪ್ಪಿರಲಿಲ್ಲ. ವಿಧಾನ ಮಂಡಲದ ಸರ್ವಾನುಮತದ ನಿರ್ಣಯಕ್ಕೆ ಸುಪ್ರೀಂ ಕೋರ್ಟ್ ಮುಂದೆ ಮಾನ್ಯತೆ ಸಿಗದೆ ಹೋದಾಗ ಒಪ್ಪಂದವಾಗಿ ಯಾವ ರಾಜ್ಯಕ್ಕೂ ಲಾಭ ನಷ್ಟವಾಗಲಿಲ್ಲ (೧೦-೮-೯೮).

ಪುನಃ ಮೂಲ ಕರಡು ಯೋಜನ ಬಗಗೆ ಜಯಲಲಿತಾ ಅವರು ಆಗಸ್ಟ್ ೧೨, ೧೯೯೮ ರೊಳಗೆ ಗೆಜೆಟ್‌ನಲ್ಲಿ ಪ್ರಕಟಿಸದಿದ್ದರೆ ವಾಜಪೇಯಿ ಸರ್ಕಾರಕ್ಕೆ ನೀಡಿದ ಬೆಂಬಲವನ್ನು ಹಿಂತೆಗೆದುಕೊಳ್ಳಲು ಬೆದರಿಕೆ ಹಾಕಿದರು. ಇದಕ್ಕೆ ಪ್ರಧಾನಿ ಮಣಿಯಲಿಲ್ಲ. ನಂತರ ಕಾವೇರಿ ಕಣಿವೆ ಪ್ರಾಧಿಕಾರ ರಚನೆ ಮತ್ತು ಉಸ್ತುವಾರಿ ಸಮಿತಿಯನ್ನು ವಿರೋಧಿಸಿ ಕಾಂಗ್ರೆ ಧುರೀಣರು ೧೦-೮-೯೮ ರಂದು ಪ್ರತಿಭಟನೆ ನಡೆಸಿ ರಾಜ್ಯಪಾಲ ಖುರ್ಷಿದ್ ಆಲಂಖಾನ್ ಅವರಿಗೆ ಮನವಿ ಪತ್ರ ಸಲ್ಲಿಸಿದರು. ಧರ್ಮಸಿಂಗ್, ಎಚ್. ಕೆ. ಪಾಟೀಲ್, ಸಿ. ಕೆ. ಜಾಫರ್‌ಷರೀಫ್, ಜಿ. ಮಾದೇಗೌಡ, ಎಂ. ರಾಜಶೇಖರಮೂರ್ತಿ ಇತರರ ಕಾಂಗ್ರೆಸ್ ನಿಯೋಗ ಕಾವೇರಿ ಪ್ರಾಧಿಕಾರ ಮತ್ತು ಉಸ್ತುವಾರಿ ಸಮಿತಿಯನ್ನು ವಿರೋಧಿಸಿ, ಪ್ರಚಲಿತ ಬೆಳವಣಿಗೆ ಬಗೆಗೆ ಮನವಿಯಲ್ಲಿ ತಿಳಿಸಿದ್ದರು.

ಪ್ರಧಾನಿಗಳ ಅಧ್ಯಕ್ಷತೆಯಲ್ಲಿ ಕಾವೇರಿ ಜಲವಿವಾದ ಬಗೆಹರಿಸಲು ಪ್ರಾಧಿಕಾರ ರಚನೆಯನ್ನು ಮೈಸೂರು ಜಿಲ್ಲಾ ರೈತ ಸಂಘ ಪ್ರಬಲವಾಗಿ ವಿರೋಧಿಸಿತ್ತು. ಮಧ್ಯಂತರ ತೀರ್ಪಿನ ಪ್ರಕಾರ ೨೦೫ ಟಿ.ಎಂ.ಸಿ. ನೀರನ್ನು ಬಿಡಲು ಸಾಧ್ಯವಿಲ್ಲ ಎಂದು ಅವರು (ತಮಿಳುನಾಡಿಗೆ) ಪ್ರತಿಭಟನೆ ಸೂಚಿಸಿದರು (೧೧-೮-೯೮). ಸುಮ್ಮನಿರದ ರೈತರು ಈ ಪ್ರಾಧಿಕಾರ ಮರಣ ಶಾಸನವಾಗಿದೆ. ಇದಕ್ಕೆ ಸಹಿ ಹಾಕಿದ ಮುಖ್ಯಮಂತ್ರಿ ಜೆ. ಹೆಚ್ ಪಟೇಲ್ ರಾಜಿನಾಮೆ ಕೊಡಬೇಕೆಂದರು. ತಮಿಳುನಾಡು ಮುಖ್ಯಮಂತ್ರಿ ಈ ಕೂಗನ್ನು ಮನಗಂಡು ತಮಿಳುನಾಡಿನ ಹಿತಾಸಕ್ತಿಯನ್ನು ಬಲಿಕೊಡಲಾರೆ ಎಂದರು.

ಕರಡು ಯೋಜನೆಯ ಗೆಜೆಟ್ ಪ್ರಕಟಣೆಗೆ ಆಗ್ರಹಿಸುತ್ತಿದ್ದ ಎಐಎಡಿಎಂಕೆ ಮತ್ತು ಮಿತ್ರ ಪಕ್ಷಗಳ ಬೇಡಿಕೆಗಳನ್ನು ಪ್ರಧಾನಿ ತಿರಸ್ಕರಿಸಿರುವುದು ಸ್ಪಷ್ಟ. ಕರ್ನಾಟಕದಲ್ಲಿ ಕಾಂಗ್ರೆ

ಮಾತ್ರ ಅಪಸ್ವರ ಎತ್ತಿದ್ದು, ಪ್ರಧಾನಿಯೊಂದಿಗಿನ ಒಪ್ಪಂದಕ್ಕೆ ಕಾಂಗ್ರೆಸ್ ಬದ್ಧವಲ್ಲ ಎಂದು ಎಚ್. ಕೆ. ಪಾಟೀಲ್ ಹೇಳಿದ್ದಾರೆ. ಇವರು ಸದ ಸಭೆಯಲ್ಲಿ ಪಾಲ್ಗೊಂಡು, ನಿರ್ಣಯಗಳಿಗೆ ಬದ್ಧರಾಗಿ ಹೊರಬಂದು ಈ ರೀತಿ ಹೇಳುವುದು ಗೊಂದಲಮಯ ಒಮ್ಮತ್ತದ ಸೂಚನೆಯನ್ನು ಸಂಕೇತಿಸುತ್ತದೆ. ಜನತಾದಳವು ಇದನ್ನು ಏಕ ಪಕ್ಷೀಯ ನಿರ್ಧಾರ ಎಂದು ಕರೆದಿತು.

ಪ್ರಧಾನಿ ನೇತೃತ್ವದ ಪ್ರಾಧಿಕಾರ ಹಾಗೂ ಉಸ್ತುವಾರಿ ಸಮಿತಿ ರಚನೆಗೆ ರಾಜ್ಯ ಸರ್ಕಾರ ಒಪ್ಪಿರುವುದನ್ನು ಜನತೆಗೆ ಬಗೆದ ದ್ರೋಹವೆಂದು ಮಲ್ಲಿಕಾರ್ಜುನ ಖರ್ಗೆ ಹೇಳಿ, ಶಾಸನ ಸಭೆ ಅಧಿವೇಶನಕ್ಕೆ ಒತ್ತಾಯಿಸಿದ್ದಾರೆ. ಪ್ರಧಾನಿ ಅತ್ಯುನ್ನತ ಪ್ರಾಧಿಕಾರದ ಅಧ್ಯಕ್ಷರಾಗಿದ್ದು, ಅವರ ತೀರ್ಪು ಅಂತಿಮವಾದದು. ನ್ಯೂನ್ಯತೆಗಳಿದ್ದರೆ ಮೇಲ್ಮನವಿ ಯಾರಿಗೆ ಸಲ್ಲಿಸಬೇಕೆಂದು ಪ್ರಶ್ನಿಸಿದರು. ಈ ಮಧ್ಯಂತರ ಆದೇಶ ನ್ಯಾಯ ಬದ್ಧವಲ್ಲದೆ ಅವೈಜ್ಞಾನಿಕವಾಗಿದ್ದು, ಯಾವುದೇ ಮಾರ್ಗ ಸೂಚಿಗಳನ್ನು ಅಥವಾ ರಾಷ್ಟ್ರೀಯ ಜಲ ನೀತಿಯನ್ನು ಅನುಸರಿಸಿಲ್ಲ ಎಂದು ರೈತ ಸಂಘ ಆರೋಪಿಸಿದೆ (೧೫-೮-೯೮).

ಪ್ರಧಾನಿ ಎ. ಬಿ. ವಾಜಪೇಯಿ ಅವರು ೧೫-೮-೯೮ ರಂದು ಸ್ವಾತಂತ್ರ್ಯ ದಿನಾಚರಣೆಯ ಭಾಷಣದಲ್ಲಿ 'ನೀರನ್ನು ಬೆಂಕಿ ಆರಿಸಲು ಬಳಸುತ್ತೇವೆ, ನೀರೇ ಬೆಂಕಿಯಾದರೆ ಏನು ಮಾಡುವುದು? ಎಂದು ಕಾವೇರಿ-ವಿವಾದವನ್ನು ಪ್ರಸ್ತಾಪಿಸಿದರು. ಮುಂದುವರೆದು ಪಕ್ವತೆ, ಸೌಹಾರ್ದ, ದೇಶ ಪ್ರೇಮ ಮತ್ತು ಬೇರೆಯವರ ಹಿತಾಸಕ್ತಿಯನ್ನು ಕಾಪಾಡುವ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡರೆ ಸಮಸ್ಯೆಗೆ ಪರಿಹಾರವಿದೆ ಎಂದರು. ಇದೇ ಸಂದರ್ಭದಲ್ಲಿ ಕರ್ನಾಟಕದ ಮುಖ್ಯಮಂತ್ರಿ ಜೆ. ಹೆಚ್. ಪಟೇಲ್ ಭಾಷಣದಲ್ಲಿ ಸೌಹಾರ್ದಕ್ಕಾಗಿ ಕಾವೇರಿ ಒಪ್ಪಂದ ಎಂದು ತಿಳಿಸಿರುವರು. ಪ್ರಾಧಿಕಾರ ಮತ್ತು ನ್ಯಾಯ ಮಂಡಳಿ ಮಧ್ಯಂತರ ತೀರ್ಪಿನಲ್ಲಿ ರಾಜ್ಯಕ್ಕೆ ಆಗಿರುವ ಅನ್ಯಾಯವನ್ನು ಸರಿಪಡಿಸಲು ಪ್ರಧಾನಿಗೆ ಮಂಡ್ಯ ಜಿಲ್ಲೆಯ ರೈತರ ಹಿತರಕ್ಷಣಾ ಸಮಿತಿ ಅಧ್ಯಕ್ಷ, ಮಾಜಿ ಸಂಸದ ಜಿ. ಮಾದೇಗೌಡ ಒತ್ತಾಯಿಸಿದ್ದಾರೆ. ಅಂತರ ರಾಜ್ಯ ಜಲವಿವಾದ ಸಂಬಂಧ ಮಧ್ಯಂತರ ತೀರ್ಪು ನೀಡಿ ಅಂತಿಮ ತೀರ್ಪು ನೀಡಲು ರಾಷ್ಟ್ರೀಯ ಜಲನೀತಿ ಮಾರ್ಗ ಸೂಚಿಯನ್ನು ಕಾಯ್ದಿರಿಸಿರುವ ಉದಾಹರಣೆಗಳಿಲ್ಲ ಎಂದಿರುವರು. ೧೯೮೭ರಲ್ಲಿ ಸಂಸತ್ತು ರಾಷ್ಟ್ರೀಯ ಜಲನೀತಿಗೆ ಅಂಗೀಕಾರ ನೀಡಿತು. ೧೯೯೭ರ ವಿಶ್ವಸಂಸ್ಥೆ ಮಾರ್ಗ ಸೂಚಿ, ಅಂತರಾಷ್ಟ್ರೀಯ ಹೆಲ್ಸಿಂಕಿ ಮಾರ್ಗ ಸೂಚಿ ಇರುವಾಗ ರಾಷ್ಟ್ರೀಯ ಮಾರ್ಗ ಸೂಚಿಯ ಅಗತ್ಯವಿಲ್ಲವಾದರೂ ವಿವಾದ ಪರಿಹರಿಸಲು ಮತ್ತು ರಾಜಕೀಯದಿಂದ ಹತ್ತಿಕ್ಕಲು ಇದು ತೀವ್ರ ಅಗತ್ಯವಾಗಿದೆ.

ಪ್ರಸ್ತುತ ಕಾವೇರಿ ಬಿಕ್ಕಟ್ಟು ಬಗೆಹರಿಯದೇ ಆಗಾಗ ಸಮಸ್ಯೆಯ ಕಗ್ಗಂಟಾಗಿ ಚಳವಳಿಗಳು ಸಂಭವಿಸುತ್ತವೆ. ೧೩ನೇ ಲೋಕಸಭೆ ಚುನಾವಣೆಗಳು ಮುಗಿದ ಬೆನ್ನ ಹಿಂದೆಯೇ ಕಾವೇರಿ ವಿವಾದ ಉಲ್ಬಣಗೊಂಡಿತು. ಕಾವೇರಿ ನ್ಯಾಯ ಮಂಡಲಿ ನೀಡಿರುವ ಮಧ್ಯಂತರ ಆದೇಶದನ್ವಯ ೧೯೯೯ ಸೆ. ೧೪ರ ವರೆಗೆ ಕರ್ನಾಟಕ ೧೨೧.೪೦ ಟಿ.ಎಂ.ಸಿ. ನೀರನ್ನು ತಮಿಳುನಾಡಿಗೆ ಬಿಡಬೇಕಿತ್ತು. ಅದರಲ್ಲಿ ೧೦೬.೨೦ ಟಿ.ಎಂ.ಸಿ. ಮಾತ್ರ ಬಿಟ್ಟಿದೆ. ಜಲಾಶಯದಲ್ಲಿ ನೀರು ಕಡಿಮೆ ಇರುವುದರಿಂದ ೧೫.೨೦ ಟಿ.ಎಂ.ಸಿ. ನೀರು ಕಡಿಮೆ ಬಿಡಲಾಗಿದೆ. ಈ ಹಿನ್ನೆಲೆಯಲ್ಲಿ ತಮಿಳುನಾಡು ಚಳವಳಿಗೆ ಮುಂದಾಯಿತು.

ತಮಿಳುನಾಡಿಗೆ ಕರ್ನಾಟಕ ೨೦ ಟಿ.ಎಂ.ಸಿ. ನೀರು ಬಿಡಲು ಕೇಂದ್ರ ಸರ್ಕಾರಕ್ಕೆ ಒತ್ತಡ ತಂದಿತು. ಇದರಂತೆ ಕೇಂದ್ರ ಜಲ ಸಂಪನ್ಮೂಲ ಇಲಾಖೆ ಕಾರ್ಯದರ್ಶಿ ಜಡ್. ಎ. ಹಸನ್ ಅವರು ಕರ್ನಾಟಕಕ್ಕೆ ನೀರು ಬಿಡಲು ಸೂಚಿಸಿದರು (: ೧೭.೯.೯೯). ಇದಕ್ಕೆ ಕರ್ನಾಟಕ ಕಾವೇರಿ ಕಣಿವೆ ಪ್ರದೇಶದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಮಳೆಯಾಗದೇ ಇರುವುದರಿಂದ ನೀರು ಬಿಡಲಾಗುವುದಿಲ್ಲವೆಂದು ಸ್ಪಷ್ಟಪಡಿಸಿತು. ಈ ಹಿನ್ನೆಲೆಯಲ್ಲಿ ನೀರಾವರಿ ಸಚಿವ  ಕೆ. ಎನ್. ನಾಗೇಗೌಡ ಮತ್ತು ತಮಿಳುನಾಡು ಮುಖ್ಯಮಂತ್ರಿ ಎಂ. ಕರುಣಾನಿಧಿ ಆ ರಾಜ್ಯದ ನೀರಾವರಿ ಸಚಿವರೊಡನೆ ದೂರವಾಣಿ ಮೂಲಕ ಮಾತುಕತೆ ನಡೆಸಿದ್ದು ಫಲಕಾರಿಯಾಗಿಲ್ಲ. ಮಳೆಯಾಗದೇ ಕಾವೇರಿ ಕಣಿವೆ ಪ್ರದೇಶದಲ್ಲಿ ೬೫ ಟಿ.ಎಂ.ಸಿ. ನೀರು ಸಂಗ್ರಹಣೆ ಕಡಿಮೆಯಾಗಿದ್ದು, ಮೆಟ್ಟೂರು ಜಲಾಶಯದಲ್ಲಿ ಹಾಲಿ ೨೫ ಟಿ.ಎಂ.ಸಿ. ನೀರು ಸಂಗ್ರಹಣೆಯಾಗಿದೆ. ತಮಿಳುನಾಡು ತನ್ನ ಪಾಲಿನ ನೀರು ಕೇಳಿದರೆ ಕರ್ನಾಟಕದಲ್ಲಿ ಮಳೆಯಾದರೆ ಬಿಡಲಾಗುವುದೆಂದು ತಿಳಿಸಿತು.

ರಾಜ್ಯದಲ್ಲಿ ನೀರಿಲ್ಲದ ಕಾರಣ ತಮಿಳುನಾಡಿಗೆ ನೀರು ಬಿಡಲಾಗುವುದಿಲ್ಲವೆಂದು ಸರ್ಕಾರ ಸ್ಪಷ್ಟಪಡಿಸಿದರೂ, ಕೇಂದ್ರ ಜಲ ಸಂಪನ್ಮೂಲ ಇಲಾಖೆ ನೀರು ಬಿಡಲು ಸೂಚಿಸಿತ್ತು. ಪರಿಸ್ಥಿತಿ ಹೀಗಿರುವಾಗ ತಂಜಾವೂರು ಜಿಲ್ಲೆಯಲ್ಲಿ 'ಕುರುವೈ' ಬೆಳೆ ರಕ್ಷಣೆಗಾಗಿ ೨೫ ಟಿ.ಎಂ.ಸಿ. ನೀರು ಬಿಡುವಂತೆ ಕರ್ನಾಟಕಕ್ಕೆ ಸೂಚನೆ ನೀಡಲು ಪ್ರಧಾನಿಗೆ ತಮಿಳುನಾಡು ಸರ್ಕಾರ ಒತ್ತಾಯಿಸಿತು. ಆ ಪ್ರಕಾರ ಪ್ರಧಾನಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಬ್ರಿಜೇಶ್ ಮಿಶ್ರಾ ಅವರು ನೀರಾವರಿ ಸಚಿವ ಕೆ. ಎನ್. ನಾಗೇಗೌಡ ಮತ್ತು ಮುಖ್ಯ ಕಾರ್ಯದರ್ಶಿ ಭಟ್ಟಾಚಾರ್ಯ ಅವರನ್ನು ಸಂಪರ್ಕಿಸಿದ್ದು, ಕರುಣಾನಿಧಿ ಮತ್ತು ಜೆ. ಹೆಚ್. ಪಟೇಲರೂ ಸೇರಿ ನಡೆಸಿದ ಮಾತುಕತೆಗಳು ಉಪಯೋಗಕ್ಕೆ ಬರಲಿಲ್ಲ. ಈ ಮಧ್ಯೆ ತಮಿಳುನಾಡಿನ ಸಿಪಿಎಂ ಘಟಕ ಕಾವೇರಿ ಮಧ್ಯಂತರ ಆಜ್ಞೆ ಜಾರಿಗೆ ತರಲು ಒತ್ತಾಯಿಸಿದೆ. ಇದಕ್ಕೆ ಕರ್ನಾಟಕದ ತೀವ್ರ ವಿರೋಧವುಂಟು.

ಮೇಲಿನ ಒತ್ತಡದ ಕೋರಿಕೆಯನ್ನು ಕರ್ನಾಟಕ ಮನ್ನಿಸಿ ನೀರು ಬಿಟ್ಟರೆ ರೈತರ ಹಿತಾಸಕ್ತಿ ಬಲಿಕೊಟ್ಟಂತೆ ಎಂದು ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಎಸ್. ಎಂ. ಕೃಷ್ಣ ಹೇಳಿದ್ದಾರೆ (: ೧೯-೯-೯೯). ಮುಂದುವರೆದು ಪ್ರಧಾನಿಗಳ ಒತ್ತಡಕ್ಕೆ ಸರ್ಕಾರ ಮಣಿಯಬಾರದು ಎಂದು ಇಲ್ಲಿನ ರೈತರು ಮಳೆಯಾಗದೇ ತೊಂದರೆಗೊಳಗಾಗಿದ್ದಾರೆ. ಮತ್ತು ಪ್ರಧಾನಿ ಅಧ್ಯಕ್ಷರಾಗಿರುವ ಕಾವೇರಿ ನದಿ ನೀರಿನ ಪ್ರಾಧಿಕಾರದಿಂದ ಯಾವುದೇ ಪ್ರಯೋಜನ ವಿಲ್ಲವೆಂದು ಅವರು ಪ್ರತಿಪಾದಿಸಿದ್ದಾರೆ. ವಾಜಪೇಯಿ ಸರ್ಕಾರ ಕಾವೇರಿ ಜಲ ವಿವಾದಕ್ಕೆ ಪರಿಹಾರ ಕಂಡುಹಿಡಿದಿರುವುದು ಪೊಳ್ಳು ಘೋಷಣೆಯಾಗಿದ್ದು, ರಾಷ್ಟ್ರೀಯ ಜಲ ನೀತಿಯ ಮಾರ್ಗ ಸೂಚಿಗಳು ಇಲ್ಲದೆ ಅಂತ ರಾಜ್ಯ ಜಲವಿವಾದಗಳನ್ನು ಇತ್ಯರ್ಥಪಡಿಸಲು ಆಗದು ಎಂದಿದ್ದಾರೆ.

ತಮಿಳುನಾಡಿನ ರಾಜಕೀಯ ಒತ್ತಡಕ್ಕೆ ಮಣಿದು ನೀರು ಬಿಟ್ಟರೆ ರೈತರು ಸೇರಿದಂತೆ ಇತರರೊಂದಿಗೆ ಬೀದಿಗಿಳಿದು ಹೋರಾಟ ಮಾಡುವುದಾಗಿ ಎಚ್. ಎನ್. ನಂಜೇಗೌಡ ತಿಳಿಸಿದ್ದಾರೆ. ಇವರು ಪ್ರಧಾನಿ ಅಧ್ಯಕ್ಷರಿರುವ ಪ್ರಾಧಿಕಾರದ ಸಲಹೆ, ಸೂಚನೆಗಳನ್ನು ಪರಿಗಣಿಸಬಾರದು, ಪ್ರಾಧಿಕಾರದ ದೂರು, ಮನವಿ ಬಂದಾಗ ಪರಿಶೀಲಿಸಲು

ರಚಿತವಾಗಿರುವ ಉಸ್ತುವಾರಿ ಸಮಿತಿಗೆ ವಿಷಯ ತಿಳಿಸಿ, ಸದಸ್ಯರು ಸಮೀಕ್ಷೆ ನಡೆಸಿ, ವರದಿ ನೀಡಿ ಸಂಬಂಧಿಸಿದ ನಾಲ್ಕು ರಾಜ್ಯಗಳ ಮುಖ್ಯಮಂತ್ರಿಗಳನ್ನು ಕರೆದು ಪ್ರಧಾನಿಯವರು ಮುಂದಿನ ತೀರ್ಮಾನ ಕೈಗೊಳ್ಳಬೇಕು ಎಂದು ಅವರು ವಿವರಿಸಿದ್ದಾರೆ. ಸರ್ಕಾರ ನೀರು ಬಿಡಲು ನಿರ್ಧರಿಸಿದರೆ ಪಕ್ಷಾತೀತ ಮರೆತು ಎಲ್ಲರೂ ಹೋರಾಟ ಮಾಡಲು, ಮುಂಗಾರು ವೈಫಲ್ಯದಿಂದ ನಾವೇ ನೀರಿಗಾಗಿ ತೊಂದರೆಯಲ್ಲಿದ್ದೇವೆಂದು ನಂಜೇಗೌಡರು ಎಚ್ಚರಿಸಿದ್ದಾರೆ.

ಮುಖ್ಯಮಂತ್ರಿ ಜೆ. ಹೆಚ್. ಪಟೇಲ್ ಅವರು ತಮಿಳುನಾಡಿಗೆ ನೀರು ಬಿಡಲಾಗುವುದಿಲ್ಲ ಎಂದಾಗ, ಪ್ರಧಾನಿಗಳು ಸಾಧ್ಯವಾದರೆ ಸಹಾಯ ಮಾಡಿ ಎಂದು ಉದಾರತೆ ತೋರಿಸಿರುವುದು ಕರ್ನಾಟಕಕ್ಕೆ ಒಳಿತಾದ ಸಂದರ್ಭವಾಗಿದೆ. ಪುನಃ ಸರ್ಕಾರ ಕೇಂದ್ರಕ್ಕೆ ಈ ರೀತಿ ಮನವರಿಕೆ ಮಾಡಿಕೊಟ್ಟಿತು: ಕಾವೇರಿ ನ್ಯಾಯ ಮಂಡಳಿಯ ಮಧ್ಯಂತರ ಆದೇಶದಂತೆ ಪ್ರಸ್ತುತ ಹಂಗಾಮಿನಲ್ಲಿ ಸೆ. ೧೪ರ ವರೆಗೆ ತಮಿಳುನಾಡಿಗೆ ೧೨೬.೨೩ ಟಿ.ಎಂ.ಸಿ. ನೀರು ಬಿಡಬೇಕಾಗಿತ್ತು. ಇದರಲ್ಲಿ ೧೦೮.೪೬ ಟಿ.ಎಂ.ಸಿ. ನೀರು ಮಾತ್ರ ಬಿಡಲಾಗಿದೆ. ಉಳಿದ ೧೭.೭೭ ಟಿ.ಎಂ.ಸಿ. ನೀರು ಬಿಡಲಾಗಿಲ್ಲ ಎನ್ನಲಾಗಿದೆ. ೧೯೯೫ ರಲ್ಲಿ ನ್ಯಾಯ ಮಂಡಲಿ ನೀಡಿರುವ ಮತ್ತೊಂದು ಆದೇಶದಂತೆ ಯಾವುದಾದರೂ ಒಂದು ತಿಂಗಳು ನೀರಿನ ಕೊರತೆಯಿಂದಾಗಿ ಕಡಿಮೆ ಪ್ರಮಾಣದಲ್ಲಿ ನೀರು ಬಿಟ್ಟರೆ ಕೊರತೆಯನ್ನು ಆ ಹಂಗಾಮಿನ ಕೊನೆಯಲ್ಲಿ ಸರಿಪಡಿಸಬೇಕೆಂಬುದು ನಿಯಮವಾಗಿತ್ತು.

ಈ ಘಟನೆಗಳ ಹಿನ್ನೆಲೆಯಲ್ಲಿ ತಮಿಳುನಾಡಿನ ರೈತರು ಸೆಪ್ಟೆಂಬರ್ ೨೮ ರಂದು ಪ್ರತಿಭಟನೆ ನಡೆಸಲು ಸಜ್ಜಾದರು. ದ್ರಾವಿಡರ್ ಕಾಳಗಂ (ಡಿ.ಕೆ) ಪಕ್ಷದ ಪ್ರಧಾನ ಕಾರ್ಯದರ್ಶಿ ಕೆ. ವೀರಮಣಿ ಸರ್ವಪಕ್ಷಗಳಿಗೆ ಸೂಚನೆ ನೀಡಿದ್ದಾರೆ. ಕೆಲವು ಪಕ್ಷಗಳು ಇದರಲ್ಲಿ ಭಾಗವಹಿಸಿದ್ದವು (೨೨-೯-೯೯). ಕಾವೇರಿ ನೀರು ಬಿಡದಿರುವುದರಿಂದ ತಮಿಳುನಾಡಿನ ಲೋಕೋಪಯೋಗಿ ಸಚಿವ ದೊರೈ ಮುರುಗನ್, ಕೃಷಿ ಸಚಿವ ಎಸ್. ಆರುಮ್ಗಂ ಮತ್ತು ಕಾನೂನು ಸಚಿವ ಕಿಲಾಡಿ ಅರುಣಾ ಅವರು ಪ್ರಧಾನಿ ವಾಜಪೇಯಿ ಅವರನ್ನು ಸೆ. ೨೫ ರಂದು ಭೇಟಿ ಮಾಡಿ ವಿಷಯ ತಿಳಿಸಿದರು. ಇವರು ಕಾವೇರಿ ನದಿ ಜಲಾಶಯಗಳಲ್ಲಿ ೮೫ ಟಿ.ಎಂ.ಸಿ. ನೀರಿದೆ ಎಂದಿದ್ದಾರೆ. ಪ್ರಧಾನಿಗಳನ್ನು ಭೇಟಿಯಾದ ಈ ಸಚಿವರುಗಳನ್ನು ಕರ್ನಾಟಕ ಟೀಕಿಸಿದೆ. ತಮಿಳುನಾಡು ಸರ್ಕಾರದ ನಿರ್ಧಾರ ಕಾನೂನು ಬಾಹಿರ, ರಾಜಕೀಯ ಕಡಿಗೇಡಿತನವಾಗಿದೆ ಎಂದು ಕೆ.ಎನ್. ನಾಗೇಗೌಡ ಪ್ರತಿಕ್ರಿಯಿಸಿದ್ದಾರೆ. ಒಟ್ಟಾರೆ ಕಾವೇರಿ ನದಿ ಪ್ರಾಧಿಕಾರ, ಉಸ್ತುವಾರಿ ಸಮಿತಿ ನಿರ್ಲಕ್ಷಿಸಿ ದಂತಾಗುತ್ತದೆ ಎನ್ನಲಾಗಿದೆ. ಕಾವೇರಿ ನ್ಯಾಯಮಂಡಳಿ ನೀಡಿರುವ ಮಧ್ಯಂತರ ಆದೇಶ ಜಾರಿಗೆ ಪ್ರಧಾನಿ ಅವರ ಅಧ್ಯಕ್ಷತೆಯಲ್ಲಿ ಸಂವಿಧಾನಾತ್ಮಕವಾಗಿ ಕಾವೇರಿನದಿ ಪ್ರಾಧಿಕಾರ ರಚನೆಯಾಗಿರುವುದರಿಂದ ಯಾವುದೇ ವಿವಾದದ ಬಗ್ಗೆ ಪ್ರಾಧಿಕಾರ ನಿರ್ಧಾರ ಕೈಗೊಳ್ಳಬೇಕೇ ಹೊರತು ನ್ಯಾಯಾಲಯವೂ ಸೇರಿದಂತೆ ಯಾವುದೇ ವೇದಿಕೆಯಲ್ಲಿ ಈ ವಿಷಯ ಚರ್ಚಿಸಬಾರದೆಂದು ತಿಳಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಎಐಎಡಿಎಂಕೆ ನಾಯಕಿ ಜೆ. ಜಯಲಲಿತಾ ಅವರು ತಮಿಳುನಾಡು ಮತ್ತು ಕರ್ನಾಟಕ ಸರ್ಕಾರಗಳು ವಿಫಲವಾಗಿವೆ ಎಂದು ಆರೋಪಿಸಿದ್ದಾರೆ.

ಕಾವೇರಿ ವಿಷಯವನ್ನು ರಾಜಕೀಯ ಲಾಭಕ್ಕಾಗಿ ಬಳಸಬಾರದೆಂದು ಎಂಜಿಆರ್ ಎಡಿಎಂಕೆ ಪಕ್ಷದ ಪ್ರಧಾನ ಕಾರ್ಯದರ್ಶಿ ಎಸ್. ತಿರುವಕ್ಕರಸು ತಿಳಿಸಿರುವುದನ್ನು ಒಪ್ಪಬಹುದು. ೨೩-೯-೯೬ ರಂದು ಸುಬ್ರಹ್ಮಣಿಯನ್‌ಸ್ವಾಮಿ ಅವರು ಕಾವೇರಿ ಸಮಸ್ಯೆಗೆ ಎರಡು ರಾಜ್ಯಗಳ ಮುಖ್ಯಮಂತ್ರಿಗಳ ಸಭೆ ನಡೆಸಬೇಕೆಂದು ಒತ್ತಾಯಿಸಿದ್ದು ಗಮನಾರ್ಹ.

ಕಾವೇರಿ ವಿವಾದ ಚರ್ಚೆಗೆ ೨೪-೯-೯೬ ರಂದು ದೆಹಲಿಯಲ್ಲಿ ಉಸ್ತುವಾರಿ ಸಮಿತಿ ಸಭೆ ನಡೆಯಿತು. ಸಭೆಯ ಉದ್ದೇಶ ನೀರಿನ ಕೊರತೆಯಿಂದಾಗಿ ಸಂಭಾ ಮತ್ತು ಕುರುವೈ ಬೆಳೆಗಳು ಒಣಗುತ್ತಿದ್ದುದರಿಂದ ನೀರು ಒದಗಿಸಬೇಕಾಗಿತ್ತು. ತಮಿಳುನಾಡಿಗೆ ಕರ್ನಾಟಕ ನೀರು ಬಿಡುವಂತೆ ಕೇಂದ್ರ ಜಲ ಸಂಪನ್ಮೂಲ ಸಚಿವಾಲಯ ಕಾರ್ಯದರ್ಶಿ ಜಡ್. ಎ. ಹಸನ್ ಕರ್ನಾಟಕಕ್ಕೆ ತಿಳಿಸಿದ್ದರೂ, ರಾಜ್ಯ ತನ್ನ ಹಿತದೃಷ್ಟಿಯಿಂದ ಬಿಡಲಿಲ್ಲ. ತಮಿಳುನಾಡು ಸಂಪುಟದ ತುರ್ತು ಸಭೆ ನಡೆಸಿ ಮೇಲಿನ ಸಮಸ್ಯೆ ಚರ್ಚಿಸಿದರು.

ತಮಿಳುನಾಡಿಗೆ ನೀರು ಬಿಡಲು ಅನೇಕ ಪಕ್ಷಗಳು ಒತ್ತಾಯಿಸಿವೆ. ಅದರಲ್ಲಿ ಬಿಜೆಪಿ ಪ್ರಮುಖವಾದದು. ಕಾವೇರಿ ನೀರು ಪಡೆಯುವಲ್ಲಿ ಡಿಎಂಕೆ ವಿಫಲವಾಗಿದೆ ಎಂದು ಪುದುಚೇರಿಯ ವಿರೋಧ ಪಕ್ಷಗಳು ಟೀಕಿಸಿವೆ. ಒಟ್ಟಾರೆ ಎಲ್ಲ ಪಕ್ಷಗಳು ಸೇರಿ ಕಾವೇರಿ ನೀರು ಬಿಡಲು ತಮಿಳುನಾಡಿನಲ್ಲಿ ಒತ್ತಾಯಿಸಿರುವುದು ಸ್ಪಷ್ಟ. ಈ ಮೂಲಕ ಕಾವೇರಿ ನ್ಯಾಯ ಮಂಡಳಿಯ ಮಧ್ಯಂತರ ತೀರ್ಪನ್ನು ಕರ್ನಾಟಕ ತಕ್ಷಣ ಜಾರಿಗೆ ತರಬೇಕೆಂದು ಮದ್ರಾಸ್ ಹೈಕೋರ್ಟಿಗೆ ಕೋರಿ ಅದು ರಿಟ್‌ಅರ್ಜಿ ಸಲ್ಲಿಸಿದೆ.

ಪ್ರಧಾನಿ ಅಧ್ಯಕ್ಷತೆಯಲ್ಲಿ ೨೪-೯-೯೬ ರಂದು ನಡೆದ ಉಸ್ತುವಾರಿ ಸಮಿತಿ ತೀರ್ಮಾನ ರೈತರ ಹಿತ ಚಿಂತನೆಗಾಗಿ ತಮಿಳುನಾಡಿಗೆ ೬ ಟಿ.ಎಂ.ಸಿ. ನೀರು ಬಿಡುವಂತೆ ಹೇಳಿತು. ಕರ್ನಾಟಕ ಇದನ್ನು ಒಪ್ಪಿಕೊಳ್ಳದೆ ವಿರೋಧಿಸಿತು. ಕರ್ನಾಟಕದ ನಿರ್ಧಾರವನ್ನು ತಮಿಳುನಾಡು ಪ್ರತಿಭಟಿಸಿದಾಗ (೨೮-೯-೯೬) ಎಐಎಡಿಎಂಕೆ, ಕಾಂಗ್ರೆಸ್, ಸಿಪಿಎಂ, ಸಿಪಿಐ, ದ್ರಾವಿಡಿಯಾರ್ ಕಳಗಂ, ಮುಸ್ಲಿಂ ಲೀಗ್ ಮತ್ತು ದಿ ಕ್ರಿಶ್ಚಿಯನ್ ಪೀಪಲ್ಸ್ ಪಾರ್ಟಿಗಳು ಪಾಲ್ಗೊಂಡಿದ್ದವು.

ಮೇಲಿನ ಸಂಗತಿ ತಿಳಿದು ಸಮಿತಿ ತೀರ್ಮಾನವು ಏಕಪಕ್ಷೀಯವಾಗಿದೆ, ಮಾನ್ಯ ಮಾಡಲಾಗುವುದಿಲ್ಲವೆಂದು ಕೆ. ಎನ್. ನಾಗೇಗೌಡ ಹೇಳಿದ್ದರು. ಇವರು ೧೯೯೫ರಲ್ಲಿ ಕಾವೇರಿ ನ್ಯಾಯಮಂಡಳಿ ನೀಡಿರುವ ವಿವರಣಾತ್ಮಕ ಆದೇಶವನ್ನು ಉಸ್ತುವಾರಿ ಸಮಿತಿ ಸರಿಯಾಗಿ ಗಮನಿಸಿಲ್ಲ, ಇದೊಂದು ಕಾನೂನು ಬಾಹಿರ ಕೃತ್ಯ ಎಂಬುದು ಅವರ ಅಭಿಪ್ರಾಯ. ನ್ಯಾಯಮಂಡಲಿ ನೀಡಿರುವ ಆದೇಶವನ್ನು ಮಾರ್ಪಡಿಸಲು ಅಥವಾ ವಿರುದ್ಧವಾದ ತೀರ್ಮಾನ ಕೈಗೊಳ್ಳಲು ಪ್ರಾಧಿಕಾರ, ಉಸ್ತುವಾರಿ ಸಮಿತಿ ಅಥವಾ ಕೇಂದ್ರ ಸರ್ಕಾರಕ್ಕೂ ಅಧಿಕಾರವಿಲ್ಲ. ಆದರೂ ಸಮಿತಿ ನ್ಯಾಯ ಮಂಡಲಿಯ ಆದೇಶಕ್ಕೆ ವಿರುದ್ಧವಾಗಿ ತೀರ್ಮಾನ ಕೈಗೊಂಡಿದೆ ಇದಕ್ಕೆ ಕಾನೂನಿನ ಮಾನ್ಯತೆ ಇರುವುದಿಲ್ಲ. ಪ್ರಸ್ತುತ ೬೧ ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ತಲೆ ದೋರಿದ್ದು, ಜಲದ ಸಂಕಷ್ಟವನ್ನು ಅವು ಎದುರಿಸುತ್ತಿವೆ.

ತಮಿಳುನಾಡಿಗೆ ೬ ಟಿ.ಎಂ.ಸಿ. ನೀರು ಬಿಡಬೇಕೆಂದು ಕಾವೇರಿ ನದಿ ಪ್ರಾಧಿಕಾರದ ಉಸ್ತುವಾರಿ ಸಮಿತಿ ಶಿಫಾರಸ್ಸು ಮಾಡಿರುವುದಕ್ಕೆ ವಿವಿಧ ರಾಜಕೀಯ ಪಕ್ಷಗಳು ತೀವ್ರ

ಆಕ್ಷೇಪವೆತ್ತಿವೆ. ಕೆ.ಪಿ.ಸಿ.ಸಿ. ಅಧ್ಯಕ್ಷ ಎಸ್. ಎಂ. ಕೃಷ್ಣ ರಾಜ್ಯಕ್ಕೆ ನೀರಿಲ್ಲದಿರುವಾಗ ತಮಿಳುನಾಡಿಗೆ ನೀರನ್ನು ಹೇಗೆ ಬಿಡುವಿರೆಂದು, ಇವರಂತೆ ಮಾಜಿ ಮುಖ್ಯಮಂತ್ರಿ ವೀರಪ್ಪಮೊಯಿಲಿ ಅವರು ಪ್ರತಿಪಾದಿಸಿದ್ದಾರೆ. ಇವರುಗಳು ಕಾವೇರಿ ವಿವಾದ ಜಟಿಲವಾಗಲು ಬಿಜೆಪಿ ಸರ್ಕಾರ ಹಾಗೂ ಜನತಾದಳ ಸರ್ಕಾರವೇ ಕಾರಣ : ದಳಸರ್ಕಾರ ರಾಜ್ಯದ ಹಿತವನ್ನು ಮರೆತು ಎನ್.ಡಿ.ಎ. ಗೆ ಅನುಗುಣವಾಗಿ ವರ್ತಿಸುತ್ತಿದೆ ಎಂದಿರುವರು.

ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದಂತೆ ಕೆಲವು ವರ್ಷಗಳಿಂದ ನಡೆದು ಬಂದ ಮಾತುಕತೆಗಳ ಬಗ್ಗೆ ಶ್ವೇತ ಪತ್ರ ಹೊರಡಿಸುವಂತೆ ಕನ್ನಡ ಚಳವಳಿ ವಾಟಾಳ್ ಪಕ್ಷದ ವಾಟಾಳ್ ನಾಗರಾಜ ಅವರು ಒತ್ತಾಯಿಸಿದ್ದಾರೆ. ಕರ್ನಾಟಕದ ಹಿಂದಿನ ಎಲ್ಲ ಸರ್ಕಾರಗಳು ಕೇಂದ್ರದ ಒತ್ತಡಕ್ಕೆ ಮಣಿದು ನೀರು ಬಿಟ್ಟಿವೆ. ಈಗ ಬಿಟ್ಟರೆ ಉಗ್ರ ಹೋರಾಟ ನಡೆಸಲಾಗುವುದು ಎಂದು ಎಚ್ಚರಿಸಿದರು (೨೬-೯-೯೯).

ಕೆ. ಎನ್. ನಾಗೇಗೌಡರ ವಿವರಣೆಯು ಮೇಲಿನ ಕಾರಣಗಳಿಗೆ ಪರಿಹಾರವಿದ್ದಂತಿದೆ. ಅವರ ಪ್ರಕಾರ ಉಸ್ತುವಾರಿ ಸಮಿತಿ ತಪ್ಪು ಹೆಜ್ಜೆ ಇಟ್ಟಿದೆ. ೧೯೯೧ರಲ್ಲಿ ನೀಡಿರುವ ಮಧ್ಯಂತರ ಆದೇಶದಲ್ಲಿ ತಮಿಳುನಾಡಿನ ಮೆಟ್ಟೂರು ಜಲಾಶಯಕ್ಕೆ ನೀರು ಸೇರುವಂತೆ ಕರ್ನಾಟಕ ಖಾತರಿಪಡಿಸಿಕೊಳ್ಳಬೇಕೆಂದು ಹೇಳಿದೆಯೇ ಹೊರತು ಕರ್ನಾಟಕ ನೀರು ಬಿಡಬೇಕು ಎಂದು ಆದೇಶದಲ್ಲಿ ಹೇಳಿಲ್ಲ ಎಂದಿದ್ದಾರೆ. ಈ ಒಪ್ಪಂದ ೯ ಟಿ.ಎಂ.ಸಿ. ನೀರನ್ನು ಬಿಡುವುದರೊಂದಿಗೆ ಮಧ್ಯಂತರ ತೀರ್ಪನ್ನು ಉಲ್ಲಂಘಿಸಿದಂತಾಗಿದೆ.

ಕಾವೇರಿ ವಿವಾದಕ್ಕೆ ಸಂಬಂಧಿಸಿದಂತೆ ೨೫-೯-೯೯ ರಂದು ಮಳವಳ್ಳಿಯ ವಕೀಲರು ಪ್ರತಿಭಟನೆ ನಡೆಸಿ, ಉಪಾಧ್ಯಕ್ಷ ಆರ್. ಎಂ. ಚಂದ್ರಶೇಖರ್, ಕಾರ್ಯದರ್ಶಿ ಪಾಂಡವಮೂರ್ತಿ ನೇತೃತ್ವದ ನಿಯೋಗ ತಹಶೀಲ್ದಾರರನ್ನು ಭೇಟಿ ಮಾಡಿ ಮನವಿ ಪತ್ರಸಲ್ಲಿಸಿತು. ಇದು ರಾಜ್ಯದ ಆಂತರಿಕ ಚಳವಳಿಯಾಗಿದ್ದರೆ, ತಮಿಳುನಾಡಿನಲ್ಲಿ ಈ ರೀತಿ ಆಡಳಿತ ರೂಢ ಪಕ್ಷದ ವಿರುದ್ಧ ಜಯಲಲಿತಾ ಅವರು ಸರ್ಕಾರ ವಿಫಲವಾಗಿದೆ ಎಂದು ಒತ್ತಾಯಿಸಿದ್ದಾರೆ.

ಈ ಎಲ್ಲ ಘಟನೆಗಳ ಹಿನ್ನೆಲೆಯಲ್ಲಿ ೨೯-೯-೯೯ ರಂದು ಪ್ರಧಾನಿ ಅಧ್ಯಕ್ಷತೆಯಲ್ಲಿ ಸಭೆ ನೆಡಯಿತು. ಅದರಲ್ಲಿ ತಮಿಳುನಾಡಿಗೆ ೯ ಟಿ.ಎಂ.ಸಿ. ನೀರು ಬಿಡಲು ಸೂಚಿಸಿತು. ಇದು ಏಕ ಪಕ್ಷೀಯ ನಿರ್ಧಾರವೆಂದು ವಿರೋಧಿಸಿ ಕನ್ನಡ ಚಳವಳಿಯ ವಾಟಾಳ್ ಪಕ್ಷ ಕೆಂಪೇಗೌಡ ಬಸ್ ನಿಲ್ದಾಣದಲ್ಲಿ ಪ್ರತಿಭಟನೆ ನಡೆಸಿತು. ಅನೇಕರು ಇದರಲ್ಲಿ ಭಾಗವಹಿಸಿದ್ದರು. ತಮಿಳುನಾಡಿಗೆ ಕಾವೇರಿ ನೀರು ಬಿಡಲು ನಿರಾಕರಿಸಿದ ಕರ್ನಾಟಕದ ನಿಲುವಿಗೆ ಕನ್ನಡ ಸಾಹಿತ್ಯ ಪರಿಷತ್ತು ಸಹಾ ಬೆಂಬಲ ಸೂಚಿಸಿದೆ.

ಕರ್ನಾಟಕ ಮತ್ತು ತಮಿಳುನಾಡಿನ ಕಾವೇರಿ ಕಣಿವೆಯಲ್ಲಿನ ಜಲಾಶಯಗಳ ನೀರಿನ ಪ್ರಮಾಣವನ್ನು ಖುದ್ದಾಗಿ ಅಧ್ಯಯನ ಮಾಡಿದ ಜಲ ಸಂಪನ್ಮೂಲ ಸಚಿವಾಲಯದ ಕಾರ್ಯದರ್ಶಿ ಜಡ್. ಎ. ಹಸನ್ ನೇತೃತ್ವದ ತಂಡ ತನ್ನ ವರದಿಯನ್ನು ಸಿದ್ಧಪಡಿಸಿ ಸಲ್ಲಿಸಿತು. ನಂತರ ಪ್ರಧಾನಿಗಳು ಸೆಪ್ಟೆಂಬರ್‌ನಲ್ಲಿ ೩, ಮುಂದಿನ ತಿಂಗಳಲ್ಲಿ ೬ ಟಿ.ಎಂ.ಸಿ. ನೀರು ಬಿಡಲು ಸೂಚಿಸಿದರು.

ಕರ್ನಾಟಕದಲ್ಲಿಯೂ ಬೆಳೆಗಳು ಒಣಗುವ ಚಿತ್ರಣವಿದೆ. ನೀರಿಲ್ಲದೆ ಕರ್ನಾಟಕದ ಮಂಡ್ಯ ಜಿಲ್ಲೆಯ ರೈತರ ಬೆಳೆಗಳು ಒಣಗುತ್ತಿವೆ. ಉದಾ: ಕೃಷ್ಣರಾಜಸಾಗರದ ವಿ. ಸಿ. ನಾಲಾ ಕೊನೆ ಭಾಗದಲ್ಲಿ ಕಳೆದ ಹಲವಾರು ದಿನಗಳಿಂದ ಮಳೆ ಹಾಗೂ ನಾಲೆಯ ನೀರಿಲ್ಲದೆ ಒಣಗಿ ಬಿರುಕು ಬಿಟ್ಟು ಭತ್ತದ ಗದ್ದೆ ಒಣಗಿರುವುದು ನೋಡಬಹುದು (೩೦-೯-೯೯).

ಮೇಲಿನ ವಿಷಯಕ್ಕೆ ತಕ್ಕಂತೆ ಸಮಿತಿ ಅಧ್ಯಕ್ಷರಾದ ಕೇಂದ್ರ ಜಲ ಸಂಪನ್ಮೂಲ ಸಚಿವಾಲಯದ ಕಾರ್ಯದರ್ಶಿ ಜಡ್. ಎ. ಹಸನ್, ಸದಸ್ಯ ಕಾರ್ಯದರ್ಶಿ ಸಿ. ಡಿ. ಕೋಚೆ, ಕೇಂದ್ರ ಜಲ ಆಯೋಗದ ಅಧ್ಯಕ್ಷ ಮೊಹಿಲೆ, ಮುಖ್ಯ ಇಂಜಿನಿಯರ್ ಸಿ. ಬಿ. ವಶಿಷ್ಟ ಹಾಗೂ ಕೊಯಮತ್ತೂರಿನ ಮುಖ್ಯ ಸೂಪರಿಟೆಂಡೆಂಟ್ ಎಂಜಿನಿಯರ್ ಜೇಕಬ್ ಇವರಿಗೆ ಕರ್ನಾಟಕ ಸರ್ಕಾರದ ನೀರಾವರಿ ಕಾರ್ಯದರ್ಶಿ ಎಲ್. ಬಸವರಾಜು ನೇತೃತ್ವದ ತಂಡ ಮಾಹಿತಿ ನೀಡಿದ್ದು ಗಮನಾರ್ಹ.

ಕಾವೇರಿ - ಕೃಷ್ಣಾ ಸಮನ್ವಯ ಸಮಿತಿ ಮತ್ತು ಮಂಡ್ಯ ಜಿಲ್ಲೆಯ ರೈತರ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾದ ಮಾಜಿ ಸಂಸದ ಜಿ. ಮಾದೇಗೌಡರ ಪ್ರಕಾರ ಕಾವೇರಿ ಅಧ್ಯಯನ ತಂಡದ ಸಮೀಕ್ಷೆ ಒಂದು ಕಣ್ಣೊರೆಸುವ ತಂತ್ರ ಮಂಡ್ಯದ ರೈತರು ಕಾವೇರಿ ಕಣಿವೆ ಪ್ರದೇಶದ ಬೆಳೆಗಳು ಒಣಗುತ್ತಿವೆಂದು, ಕೆ. ಆರ್. ಎಸ್. ನೀರನ್ನೇ ನಂಬಿಕೊಂಡಿರುವ ಮಂಡ್ಯ, ಮದ್ದೂರು ತಾಲೂಕಿನ ರೈತರು ವಿ. ಸಿ. ನಾಲೆಗೆ ನೀರು ಬಿಡಲು ಒತ್ತಾಯಿಸಿದ್ದಾರೆ. ಕೆ. ಆರ್. ಪೇಟೆ, ನಾಗಮಂಗಲ, ಪಾಂಡವಪುರ ತಾಲೂಕಿನ ರೈತರ ಬೆಳೆಗಳಿಗೆ ನೀರಿಲ್ಲದೆ ಒಣಗುತ್ತಿರುವವು. ಶ್ರೀರಂಗಪಟ್ಟಣ, ಮಳವಳ್ಳಿ ತಾಲ್ಲೂಕುಗಳ ರೈತರನ್ನು ಬಿಟ್ಟರೆ ಉಳಿದಂತೆ ಎಲ್ಲ ಪ್ರದೇಶಗಳಲ್ಲಿ ನೀರಿನ ಸಮಸ್ಯೆಯಿದೆ. ಉದಾ : ಮದ್ದೂರು ತಾಲೂಕಿನ ಕೊಪ್ಪ, ಬೆಸಗರಹಳ್ಳಿ, ಕೌಡ್ಲೆ, ಗೆಜ್ಜಲಗೆರೆ, ಕೆ. ಎಂ. ದೊಡ್ಡಿ ಮೊದಲಾದ ಗ್ರಾಮಗಳು. ಕಾವೇರಿ ಜಲವಿವಾದದ ಒಪ್ಪಂದ ತಮ್ಮ ಸಾಧನೆ ಎಂದಿರುವ ಕರುಣಾನಿಧಿಯವರಿಗೆ ಜಯಲಲಿತಾ ಅವರು ರೈತರಿಗೆ ಮೋಸ ಮಾಡಿದ್ದಾರೆಂದು ಬಹಿರಂಗಪಡಿಸಿದ್ದಾರೆ. ೧೯೯೭ ಮೇ ೩೦ ರಂದು ಐ. ಕೆ. ಗುಜ್ರಾಲ್ ಪ್ರಧಾನಿಯಾಗಿದ್ದ ಅವಧಿಯಲ್ಲಿ ಮೂಲ ಕರಡು ಯೋಜನೆ ರೂಪಿಸಿದಾಗ ತಮಿಳುನಾಡಿನ ಕಾವೇರಿ ಪ್ರಾಂತ್ಯದಲ್ಲಿ ನೀರು ಅಗತ್ಯವಿದ್ದಂತೆ ಕಾಲಕಾಲಕ್ಕೆ ಕರ್ನಾಟಕ ನೀರು ಬಿಡಬೇಕೆಂಬುದನ್ನು ಕೈಬಿಡಲು ಕರುಣಾನಿಧಿ ಒಪ್ಪಿದ್ದರು. ಈ ಮಧ್ಯೆ ಕಾವೇರಿ ನದಿ ಪ್ರಾಧಿಕಾರ ಕರ್ನಾಟಕವು ತಮಿಳುನಾಡಿಗೆ ನೀರು ಬಿಡುವಂತೆ ಸೂಚಿಸುವ ಹಕ್ಕನ್ನು ಹೊಂದಿಲ್ಲ ಎಂದು ಜೆ. ಹೆಚ್. ಪಟೇಲ್ ಹೇಳಿದ್ದು ಸ್ಪಷ್ಟ. ಜಯಲಲಿತಾ ಅವರು ಇವರ ವಾದವನ್ನು ಒಪ್ಪಿದರೂ ಎಲ್ಲೋ ಒಂದು ಕಡೆ ರಾಜಿ ಮಾಡಿಕೊಂಡಿರುವರು ಮತ್ತು ಕಾವೇರಿ ಒಪ್ಪಂದದ ಕಾಲಕಾಲಕ್ಕೆ ನೀರು ಒದಗಿಸುವಂಥ ಮಹತ್ವದ ಪರಿಚ್ಛೇದವನ್ನು ತೆಗೆದುಹಾಕಲು ಒಪ್ಪಿಕೊಂಡು ರೈತರಿಗೆ ದ್ರೋಹ ಬಗೆದಿದ್ದಾರೆಂದು ಹೇಳಲಾಗಿದೆ.

ಬೆಂಗಳೂರು ನಗರಕ್ಕೆ ಕುಡಿಯುವ ನೀರಿನ ನಾಲ್ಕನೇ ಹಂತದ ಎರಡನೇ ಘಟ್ಟದ ಯೋಜನೆ ಕಾಮಗಾರಿ ಗುತ್ತಿಗೆಯನ್ನು ಮಲೇಶಿಯಾ ಮೂಲದ ಬೈವಾಟರ್ ಸಂಸ್ಥೆಗೆ ಗುತ್ತಿಗೆ ನೀಡುವ ಪ್ರಸ್ತಾವನೆ ಬಗ್ಗೆ ಕರ್ನಾಟಕದಲ್ಲಿ ತೀವ್ರ ವಿರೋಧವಿದೆ.

ಅಕ್ಟೋಬರ್ ತಿಂಗಳ ಮೊದಲ ವಾರ ಬಿದ್ದ ಮಳೆಯಿಂದ ಮೆಟ್ಟೂರು ಜಲಾಶಯಕ್ಕೆ ಹೆಚ್ಚಿನ ನೀರು ಹರಿದು ಬಂದು ತುಂಬಿದೆ. ಹೀಗಾಗಿ ವಿವಾದ ಕಾನೂನು ವ್ಯಾಪ್ತಿಯಲ್ಲಿದ್ದರೂ, ನೀರು ಬಂದಿರುವುದರಿಂದ ರೈತರು ತೃಪ್ತಿಯಲ್ಲಿದ್ದಾರೆ.

ಕರ್ನಾಟಕದ ನೂತನ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಮತ್ತು ಬೃಹತ್ ನೀರಾವರಿ ಸಚಿವ ಎಚ್. ಕೆ. ಪಾಟೀಲ್ ಅವರುಗಳು ಕಾವೇರಿ, ಕೃಷ್ಣಾ ನದಿ ನೀರು ವಿವಾದಗಳ ಬಗೆಗೆ ಸೌಹಾರ್ದ ರೀತಿಯ ಮಾತುಕತೆಗಳಿಗೆ ಮುಂದಾಗಿರುವುದು ಅಭಿನಂದನೀಯ.

## ೭:೪. ಕೃಷ್ಣಾ ಮೇಲ್ದಂಡೆ ಯೋಜನೆ

ಕೃಷ್ಣಾ ಮೇಲ್ದಂಡೆ ಯೋಜನೆ ಆಲಮಟ್ಟಿ ಮತ್ತು ನಾರಾಯಣಪುರ ಅಣೆಕಟ್ಟುಗಳನ್ನು ಹೊಂದಿದೆ. ಆಲಮಟ್ಟಿ ಇಂದಿಗೂ ಇತ್ಯರ್ಥವಾಗದೆ ಆಂಧ್ರ-ಕರ್ನಾಟಕದ ನಡುವೆ ಜ್ವಲಂತ ಸಮಸ್ಯೆಯನ್ನು ಎದುರಿಸುತ್ತದೆ. ಇದರ ವಿರುದ್ಧ ಮೊದಲು ಧ್ವನಿ ಎತ್ತಿದವರು ಎಚ್. ಕೆ. ಪಾಟೀಲ್ ಅವರು. ಅನೇಕ ಚಳವಳಿಗಳ ಮೂಲಕ ಒಪ್ಪಂದಕ್ಕೆ ಬಂದರೂ, ಇದು ಎರಡು ಸರ್ಕಾರ, ೯ ರಾಜ್ಯಗಳ ಸಮಸ್ತ ನಾಗರಿಕರ ಅಭಿಪ್ರಾಯವನ್ನು ಅವಲಂಬಿಸಿದೆ. ಹೀಗಾಗಿ ರೈತರಿಗೆ ಅಥವಾ ಸಂತ್ರಸ್ತರಿಗೆ ದೊರೆಯುವ ಪರಿಹಾರಕ್ಕಾಗಿ ಚಳವಳಿ, ಸತ್ಯಾಗ್ರಹಗಳನ್ನು ಮಾಡಿ ಪಡೆದುಕೊಳ್ಳುವುದನ್ನು ನೋಡಿದರೆ ಸಾರ್ವಜನಿಕವಾದ ಸಂಪನ್ಮೂಲಕ್ಕೆ ಹೋರಾಟ, ಚಳವಳಿ ಅನಿವಾರ್ಯ ಎನ್ನಬಹುದು.

ಕೃಷ್ಣಾ ಮೇಲ್ದಂಡೆ ಯೋಜನೆ ಕಾಮಗಾರಿಗಳ ಬಗ್ಗೆ ಜನತಾದಳ ಸರ್ಕಾರ ನಿರ್ಲಕ್ಷ್ಯ ಮಾಡಿದೆ ಎಂದು ವಿಧಾನ ಸಭೆಯ ವಿರೋಧ ಪಕ್ಷದ ನಾಯಕ ಮಲ್ಲಿಕಾರ್ಜುನ ಖರ್ಗೆ ಟೀಕಿಸಿದ್ದಾರೆ. ಅವರು ೧೯೯೮-೯೯ನೇ ಸಾಲಿನ ಕಾಮಗಾರಿಗಳಿಗೆ ೧೫೫೦ ಕೋಟಿ ಮಂಜೂರಾಗಿದ್ದು, ಅದರಲ್ಲಿ ೭೪೯ ಕೋಟಿಯನ್ನು ೧೧ ತಿಂಗಳಲ್ಲಿ ಖರ್ಚುಮಾಡಿದ್ದಾರೆ. ಇದನ್ನು ೨೦೦೦ ಇಸ್ವಿಯೊಳಗೆ ಮುಗಿಸಿ ೭೨೮ ಟಿ.ಎಂ.ಸಿ. ನೀರನ್ನು ಪಡೆಯುವುದು ಹೇಗೆ ಎಂಬ ಜಿಜ್ಞಾಸೆಯಿದೆ. ಈ ಸಮಸ್ಯೆ ಅರಿತ ಮುಖ್ಯಮಂತ್ರಿ ಹೆಲಿಕ್ಯಾಪ್ಟರ್ ಮೂಲಕ (೧೨-೨-೯೮) ಇದನ್ನು ವೀಕ್ಷಿಸಿರುವರು. ನಂತರ ಕಾಮಗಾರಿ ಕೆಲಸ ಮಾಮೂಲಿಯಾಗಿ ಸಾಗಿದೆ.

ಆಲಮಟ್ಟಿ ಜಲಾಶಯದ ಹಿನ್ನೀರಿನಿಂದ ಮುಳುಗಡೆಯಾಗಿ ಹೊಲಮನೆ ಕಳೆದುಕೊಂಡ ಬಾಗಲಕೋಟೆ ನಗರದ ನಿವಾಸಿಗಳಿಗೆ ಶೀಘ್ರವೇ ಪರಿಹಾರ ಧನ ಮತ್ತು ನವನಗರದಲ್ಲಿ ಉಚಿತ ನಿವೇಶನ ನೀಡಬೇಕೆಂದು ಇಲ್ಲಿನ ಸಾರ್ವಜನಿಕರು ಸರ್ಕಾರವನ್ನು ಒತ್ತಾಯಿಸಿದ್ದಾರೆ. ಬಚಾವತ್ ಆಯೋಗದ ತೀರ್ಪಿನ ಪ್ರಕಾರ ೨೦೦೦ಕ್ಕೆ ಮುಗಿಸಬೇಕಿದ್ದು, ನಿರಾಶ್ರಿತರ ಸಮಸ್ಯೆ ಬಗೆ ಹರಿದಿಲ್ಲ. ಸರ್ಕಾರ ಮೊದಲಿಗೆ ೪೫೦ ಮನೆಗಳನ್ನು ನಿರಾಶ್ರಿತರಿಗೆ ನೀಡಿ, ಉಳಿದವರಿಗೆ ಕೊಟ್ಟಿಲ್ಲ. ಈ ಸಂಬಂಧವಾಗಿ ಕ್ರಮಕೈಗೊಳ್ಳದಿದ್ದರೆ ಹೋರಾಟ ನಡೆಸುವುದು ಅನಿವಾರ್ಯ ಎಂದು ನಾಗರಿಕರು (೧೩-೩-೯೮) ಸರ್ಕಾರಕ್ಕೆ ಎಚ್ಚರಿಸಿದ್ದಾರೆ.

ಕ್ರಿ. ಶ. ೨೦೦೦ ವರ್ಷದೊಳಗೆ ಕೃಷ್ಣಾ ಮೇಲ್ದಂಡೆ ಜಲಾನಯನ ಪ್ರದೇಶದಲ್ಲಿ ಸಂಪೂರ್ಣವಾಗಿ ನೀರನ್ನು ಉಪಯೋಗಿಸಿಕೊಳ್ಳುವ ವಿಚಾರದಲ್ಲಿ ಸರ್ಕಾರ ಬದ್ಧ ಎಂದು ನೀರಾವರಿ ಸಚಿವ ನಾಗೇಗೌಡ ಹೇಳಿದಾಗ, ಮಲ್ಲಿಕಾರ್ಜುನ ಖರ್ಗೆ ಭೀಮ ಯೋಜನೆ

ಇತರ ಯೋಜನೆಗಳು ಮಂದಗತಿಯಲ್ಲಿ ಸಾಗುವ ಕೆಲಸ ನೋಡಿದರೆ ಮುಗಿಯುವ ಚಿನ್ಹೆ ಇಲ್ಲಾ ಎಂದಿದ್ದಾರೆ (೨೮-೩-೯೮).

ಕೃಷ್ಣಾ ಜಲಾನಯನ ಪ್ರದೇಶದಲ್ಲಿ ಆಂಧ್ರಪ್ರದೇಶ ಖಾಯಂ ನೀರಾವರಿ ಯೋಜನೆಗಳನ್ನು ಕೈಗೊಳ್ಳದಂತೆ ಕೇಂದ್ರ ಸರ್ಕಾರವನ್ನು ಒತ್ತಾಯಿಸುತ್ತಾ, ವಿಶ್ವಬ್ಯಾಂಕ್‌ಗೆ ನೀಡಿರುವ ಖಾತರಿಯನ್ನು ಹಿಂತೆಗೆದುಕೊಳ್ಳಬೇಕೆಂದು ನೀರಾವರಿ ಸಚಿವರು ಹೇಳಿದ್ದಾರೆ. ಆಂಧ್ರವು 'ಬಿ' ಸ್ಕೀಂನ ಅಡಿಯಲ್ಲಿ ಹಂಚಿಕೆಯಾಗುವ ನೀರನ್ನು ನಿಷ್ಪಲಗೊಳಿಸಲು ತೆಲುಗು ಗಂಗಾ ಮತ್ತು ಶ್ರೀಶೈಲಂ ಎಡ ಮತ್ತು ಬಲದಂಡೆ ನಾಲೆಗಳೂ ಸೇರಿದಂತೆ ಕೃಷ್ಣಾಜಲಾನಯನ ಪ್ರದೇಶದ ಯೋಜನೆಗಳಿಗೆ ಅವರು ಪ್ರಯತ್ನ ನಡೆಸುತ್ತಿದ್ದಾರೆ. ಬಚಾವತ್ 'ಎ' ಮತ್ತು 'ಬಿ' ಸ್ಕೀಂ ತೀರ್ಪಿನ ಪ್ರಕಾರ ಮಹಾರಾಷ್ಟ್ರ ೫೬೫, ಕರ್ನಾಟಕ ೭೩೪, ಆಂಧ್ರಪ್ರದೇಶ ೮೦೦ ಟಿ.ಎಂ.ಸಿ. ನೀರನ್ನು ಹಂಚಿಕೊಂಡಿವೆ.

ಈ ಯೋಜನೆಯಡಿ ಬರುವ ಸಂತ್ರಸ್ತರು ಬೇಡಿಕೆ ಈಡೇರದಿದ್ದರೆ ಪುನರ್ವಸತಿ ಮತ್ತು ಪುನನಿರ್ಮಾಣ ಆಯುಕ್ತ ಶಿವಾನಂದ ಜಾಮದಾರ ಅವರ ಕಚೇರಿ ಎದುರು ಧರಣಿ ಸತ್ಯಾಗ್ರಹ ನಡೆಸುವುದಾಗಿ ಹಿರಿಯ ಶಾಸಕ ಬಿ. ಎಸ್. ಪಾಟೀಲ ಮನಗೂಳಿ (೩-೪-೯೮) ಒತ್ತಾಯ ಮಾಡಿದ್ದರು. ಈ ಬಗ್ಗೆ ಚಿಕ್ಕ ಗಲಗಲಿಯ ಸಂತ್ರಸ್ತರ ಸಭೆಯಲ್ಲಿ ಒಮ್ಮತದ ತೀರ್ಮಾನ ಕೈಗೊಂಡರು. ಇದರಲ್ಲಿ ಸಿರಗೂರ, ಜಂಬಗಿಯಡಳ್ಳಿ, ಹೊಸೂರ, ಕಣಬೂರ, ಸಿಟಗೊಂಡಿ, ದೊಡ್ಡಗಲಗಲಿ, ಕೋಲೂರು, ಮುಂದಕನೂರು, ಬಬಲಾದಿ, ಸುತಗೊಂಡಿ, ಜೈನಾಪುರ ಇತರ ಗ್ರಾಮಗಳ ೩ ಸಾವಿರಕ್ಕೂ ಹೆಚ್ಚು ಸಂತ್ರಸ್ತರು ಬಂದಿದ್ದರು. ಇವರೆಲ್ಲರು ಸೇರಿ ೧೫-೪-೯೮ ರಂದು ಸತ್ಯಾಗ್ರಹ ನಡೆಸಿದರು.

ಇಂಥ ಪರಿಸ್ಥಿತಿ ಕಂಡು ಮಲ್ಲಿಕಾರ್ಜುನಖರ್ಗೆ ಅವರು ಕೃಷ್ಣಾ ಮೇಲ್ದಂಡೆ ಪರಿಹಾರದಲ್ಲಿ ಅನ್ಯಾಯವಾದರೆ ಚಳವಳಿ ನಡೆಸುವುದಾಗಿ ಹೇಳಿದ್ದರು. ಜಮೀನು, ಮನೆ ಕಳೆದುಕೊಂಡವರಿಗೆ ಪರಿಹಾರ ನೀಡಬೇಕೆಂದು ಒತ್ತಾಯಿಸಿದ್ದಾರೆ. ಒಣಭೂಮಿಗೆ ೫೩ ಸಾವಿರ, ನೀರಾವರಿಗೆ ೯೦ ಸಾವಿರ, ಉತ್ತಮ ನೀರಾವರಿಗೆ ೧.೨೫ ಲಕ್ಷ ರೂ. ನಿಗದಿ ಮಾಡಿಕೊಡಬೇಕೆಂದು ತಾಕಿತು ಮಾಡಿದರು. ಅಧಿಕಾರಿಗಳು ಜನರನ್ನು ನಿರ್ಲಕ್ಷಿಸಿ, ಸೌಲಭ್ಯ ಕಲ್ಪಿಸುವಲ್ಲಿ ವಿಫಲರಾಗಿದ್ದಾರೆಂದು, ಪುನರ್ವಸತಿ ಗ್ರಾಮಗಳಲ್ಲಿ ಲಾಟರಿ ಮೂಲಕ ನಿವೇಶನಗಳನ್ನು ವಿತರಿಸಬಾರದೆಂದು ಅವರು (೧೯-೪-೯೮) ಸೂಚಿಸಿದರು. ನಂತರ ಕೃಷ್ಣಾಮೇಲ್ದಂಡೆ ಯೋಜನೆಯಿಂದ ಮುಳುಗಡೆಯಾಗುವ ಎರಡು ಬೆಳೆ ಬೆಳೆಯುವ ನೀರಾವರಿಗೆ ೧.೧೪ ಲಕ್ಷ ಪರಿಹಾರ ನೀಡಲು ಸರ್ಕಾರ ಒಪ್ಪಿದ್ದು, ರೈತರು, ಸಂಸತ್ ಸದಸ್ಯರು, ಶಾಸಕರು ಹಾಗೂ ಸ್ವಾಮಿಗಳು ಸೇರಿ ಪರಿಹಾರ ಧನವನ್ನು ಎಕರೆಗೆ ರೂ. ೧೪ ಸಾವಿರದಷ್ಟು ಹೆಚ್ಚಿಸಬೇಕೆಂದು ಬಾಗಲಕೋಟೆಯಲ್ಲಿ ಸತ್ಯಾಗ್ರಹ ನಡೆಸುವುದನ್ನೂ ನಿಲ್ಲಿಸಲು ಬಿ. ಸೋಮಶೇಖರ್ (೨೩-೪-೯೮) ಮನವಿಮಾಡಿಕೊಂಡಾಗ ಕೈಬಿಟ್ಟರು. ಇದರಲ್ಲಿ ಬಿ. ಎಸ್. ಪಾಟೀಲ್ ಮನಗೂಳಿ, ಜೆ. ಟಿ. ಪಾಟೀಲ, ಬಬಲಾದಿಯ ದುರುದುಂಡಯ್ಯಸ್ವಾಮಿ, ದುರುದುಂಡೇಶ್ವರ ಮಠದ ಚಂದ್ರಶೇಖರಸ್ವಾಮಿ, ಟೀಕಿನ ಮಠದ ರೇವಣಸಿದ್ಧ ಮಹಾಸ್ವಾಮಿ, ಫಕೀರೇಶ್ವರ ಮಠದ ಪ್ರಭುಸ್ವಾಮಿ ಹೀಗೇ ಸುಮಾರು ೨೧ ಮಠಾಧೀಶರು ಭಾಗವಹಿಸಿದ್ದರು. ೧೯೯೬-೯೭ನೇ ಸಾಲಿನಲ್ಲಿ ಸಂತ್ರಸ್ತರಿಗೆ ಒಣ

ಬೇಸಾಯ ಎಕರೆಗೆ ೫೪ ಸಾವಿರ, ೮ ತಿಂಗಳು ನೀರಾವರಿ ಪ್ರದೇಶಕ್ಕೆ ೧.೧೪ ಲಕ್ಷ ರೂ. ಎಂದು ಸಲಹೆ ಸಮಿತಿ ತೀರ್ಮಾನಿಸಿತು.

ಇದಾದ ನಂತರ ಕೆಲವೇ ದಿನಗಳಲ್ಲಿ ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗಡೆಯಾಗಲಿರುವ ಬಾಗಲಕೋಟೆ ನಗರದ ಸಮಸ್ಯೆಗಳ ಪರಿಹಾರಕ್ಕೆ ಒತ್ತಾಯಿಸಿ ಬಂದ್‌ಗೆ ಕರೆನೀಡಿ ಯಶಸ್ವಿಗೊಳಿಸಿದರು. ಇವಿಷ್ಟಲ್ಲದೆ ಕೃಷ್ಣಾಮೇಲ್ದಂಡೆ ಅವ್ಯವಹಾರವನ್ನು ಸಿಬಿಐ ತನಿಖೆಗೆ ವಿರೋಧ ಪಕ್ಷಗಳು ಒತ್ತಾಯಿಸಿದಾಗ, ಅದರಂತೆ ಅಂದಾಜು ಸಮಿತಿ ರಚಿಸಿತು. ಈ ಯೋಜನೆಯ ಅನುಷ್ಠಾನದಲ್ಲಿ ಗುತ್ತಿಗೆದಾರರು ಕೆಲಸಕ್ಕಿಂತ ಹೆಚ್ಚಿನ ಪ್ರಮಾಣದ ಹಣಪಡೆದಿದ್ದು. ಕೆಲಸ ಮಾಡದೇ ರಾಜ್ಯಬಿಟ್ಟು ಹೋಗಿದ್ದಾರೆ. ಸಾರ್ವಜನಿಕ ಹಣ ಪೋಲಾಗಿದೆ ಎಂದು ಅಂದಾಜು ಸಮಿತಿ ಅಧ್ಯಕ್ಷ ವೈಜನಾಥಪಾಟೀಲ್ ಹೇಳಿದ್ದಾರೆ. ಸಮಿತಿ ಕಳೆದ ೩ ವರ್ಷಗಳಲ್ಲಿ ಆಲಮಟ್ಟಿ, ನಾರಾಯಣಪುರ ಜಲಾಶಯಗಳು, ಭೀಮರಾಯನಗುಡಿ ಮತ್ತು ಕೆಂಭಾವಿ ನಾಲಾ ಯೋಜನೆಯ ಕಾಮಗಾರಿಗಳ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸಿ ಸಿಮೆಂಟ್, ಕಬ್ಬಿಣ ಮತ್ತು ಇತರೆ ವಸ್ತುಗಳ ಖರೀದಿಯಲ್ಲಿ ಅವ್ಯವಹಾರಗಳು ನಡೆದಿವೆ ಎಂದು ತಿಳಿಸಿದೆ. ಇದನ್ನರಿತ ದೇಶಪಾಂಡೆಯವರು ಸಿ.ಬಿ.ಐ. ತನಿಖೆಗೆ (೨೯-೪-೯೮) ಒತ್ತಾಯಿಸಿದರು. ಇದರಂತೆ ಮಲ್ಲಿಕಾರ್ಜುನಖರ್ಗೆಯವರು (೧-೫-೯೮) ವಿಧಾನಮಂಡಲ ಜಂಟಿ ಸದನದ ಅಂದಾಜು ಸಮಿತಿ ಮಾಡಿರುವ ಶಿಫಾರಸ್ಸಿನನ್ವಯ ಸಿ.ಬಿ.ಐ. ತನಿಖೆಗೆ ಆಗ್ರಹಪಡಿಸಿದ್ದಾರೆ.

ಬಚಾವತ್ ಆಯೋಗದ ತೀರ್ಪಿನನ್ವಯ ಕೃಷ್ಣಾನದಿ ನೀರಿನಲ್ಲಿ ರಾಜ್ಯದ ಪಾಲಿನ ನೀರನ್ನು ಬಳಸಿಕೊಳ್ಳಲು ಸರ್ಕಾರ ವಿಫಲವಾಗಿದೆ, ನಾಗೇಗೌಡರು ರಾಜೀನಾಮೆ ನೀಡಬೇಕೆಂದು (೨೨-೬-೯೮) ಕಾಂಗ್ರೆಸ್ ಒತ್ತಾಯಿಸಿತ್ತು. ರಾಜಕಾರಣಿ, ಪಕ್ಷದ ಮುಖಂಡರು, ಮಂತ್ರಿಗಳಲ್ಲದೆ ರೈತರು ಸೇರಿದಂತೆ ಜನಸಾಮಾನ್ಯರು ಸಹ ಇದರ ಬಗೆಗೆ ಕುತೂಹಲ ತಾಳಿದ್ದಾರೆ. ಈ ಹಿನ್ನೆಲೆಯಲ್ಲಿ ಜೇವರ್ಗಿ ತಾಲೂಕಿನ ಬಿಲ್ವಾರ ಗ್ರಾಮದ ನಿವಾಸಿ ನರಸಿಂಗರಾವ್ ಅವರು ಸಲ್ಲಿಸಿರುವ ಸಾರ್ವಜನಿಕ ರಿಟ್ ಅರ್ಜಿ ಮೇರೆಗೆ ವಿಭಾಗೀಯ ಪೀಠದ ನ್ಯಾಯಮೂರ್ತಿಗಳಾದ ಅಶೋಕಬಾನು ಹಾಗೂ ವೆಂಕಟೇಶಮೂರ್ತಿ ಪ್ರತಿವಾದಿಗಳಿಗೆ ನೋಟಿಸ್ ನೀಡಿದ್ದಾರೆ. ಇದರಂತೆ ಭೀಮರಾಯನ ಗುಡಿ, ಕೃಷ್ಣಾಮೇಲ್ದಂಡೆ ಯೋಜನೆಯ ಮುಖ್ಯ ಎಂಜಿನೀಯರ್, ಅಧೀಕ್ಷಕ ಎಂಜಿನಿಯರ್ ಹಾಗೂ ಕಾರ್ಯಪಾಲಕ ಎಂಜಿನಿಯರ್ ಮತ್ತು ಕಾಮಗಾರಿಗಳ ಗುತ್ತಿಗೆದಾರರನ್ನು ರಿಟ್ ಅರ್ಜಿಯಲ್ಲಿ ಉಲ್ಲೇಖಿಸಲಾಗಿದೆ.

ಕೃಷ್ಣಾ ಜಲದ ಬಳಕೆ ಬಗ್ಗೆ ಬಚಾವತ್ ಆಯೋಗ ೧೯೭೭ರಲ್ಲಿ ನೀಡಿದ ನಿರ್ಣಯ ಸ್ವಾಗತಾರ್ಹ. ಈ ನದಿಯ ಭರವಸೆಗೆ ಅರ್ಹವಾದ ಪ್ರವಾಹದಲ್ಲಿ ಶೇ. ೭೫ ಅಥವಾ ೧೯,೮೨೨ ದಶಲಕ್ಷ ಘನ ಮೀಟರ್ ಹಾಗೂ ಯೋಜನೆ ಕೈಗೊಂಡಾಗ ಆಗುವ ಲಾಭದಲ್ಲಿ ಶೇ. ೧೦ನ್ನು ಕರ್ನಾಟಕ ಬಳಸಿಕೊಳ್ಳಬೇಕೆಂದು ನಿರ್ಣಯವಾಗಿತ್ತು.

ಈವರೆಗೆ ಸುಮ್ಮನಿದ್ದು ೧೯೯೪ರ ನಂತರ ಆಂಧ್ರಪ್ರದೇಶವು ಕೃಷ್ಣಾಮೇಲ್ದಂಡೆ ಬಗ್ಗೆ ತಕರಾರು ಎತ್ತಿದೆ. ಆಣೆಕಟ್ಟೆಯ ಎತ್ತರವನ್ನು ಹೆಚ್ಚಿಸುವ ಕರ್ನಾಟಕದ ಕಾಮಗಾರಿಯನ್ನು

ನಿಲ್ಲಿಸಲು ಕೇಂದ್ರ ಸರ್ಕಾರ ಕೂಡಲೇ ಮಧ್ಯಪ್ರವೇಶಿಸಬೇಕೆಂದು ಆಂಧ್ರದ ಸದಸ್ಯರು ವಾದಿಸಿದರೆ, ತಾನೇ ಬಚಾವತ್ ಐ ತೀರ್ಪನ್ನು ಉಲ್ಲಂಘಿಸುತ್ತಿರುವ ಆಂಧ್ರಪ್ರದೇಶ ನಮ್ಮ ಪಾಲಿನ ನೀರನ್ನು ಕಬಳಿಸುವ ಹಂಚಿಕೆ ಹೂಡಿದೆ ಎಂದು ಕರ್ನಾಟಕದ ಸದಸ್ಯರು ಪ್ರತಿಕ್ರಿಯಿಸಿದ್ದಾರೆ. ತೆಲುಗು ದೇಶಂನ ಸಿ. ರಾಮಚಂದ್ರಯ್ಯ ಆಲಮಟ್ಟಿ ಕುರಿತು ವಿಷಯ ಪ್ರಸ್ತಾಪ ಮಾಡಿ ಆಲಮಟ್ಟಿ ಎತ್ತರವನ್ನು ೫೧೯ ರಿಂದ ೫೨೪ ಮೀಟರಿಗೆ ಹೆಚ್ಚಿಸುವ ಕರ್ನಾಟಕದ ಉದ್ದೇಶವನ್ನು ವಿರೋಧಿಸಿದರು. ತೆಲುಗು ಗಂಗಾಯೋಜನೆ ಮೂಲಕ ಆಂಧ್ರ ಈಗಾಗಲೇ (೨೫-೭-೯೮) ಬಚಾವತ್ ಐ ತೀರ್ಪನ್ನು ಉಲ್ಲಂಘಿಸಿದೆ. ಆದರೂ ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತದೆ.

ಹೊರ ರಾಜ್ಯದ ಜಲವಿವಾದ ಒಂದೆಡೆಯಾದರೆ, ಇದೇ ಅಣೆಕಟ್ಟಿನ ಬಗ್ಗೆ ಆಂತರಿಕ ಸಮಸ್ಯೆಗಳು ಉಲ್ಬಣಗೊಳ್ಳುತ್ತಿವೆ. ನಾರಾಯಣಪುರ ಬಲದಂಡೆ ಕಾಲುವೆ ಕಾಮಗಾರಿಗೆ ಹೋರಾಟ ಅನಿವಾರ್ಯ ಎಂದು ರೈತ ಸಂಘದ ಮಲ್ಲಯ್ಯ ಹೇಳಿದ್ದಾರೆ. ದೇವದುರ್ಗ ಸೇರಿದಂತೆ ಇತರ ಭಾಗಗಳಿಗೆ ಕಾಲುವೆ ತೋಡಿಲ್ಲ, ಕಳಪೆ ಕಾಮಗಾರಿ ಬಗ್ಗೆ ತೀವ್ರ ವಿರೋಧ ವ್ಯಕ್ತಪಡಿಸಿ (೧೯-೭-೯೯) ಹೋರಾಟಕ್ಕೆ ಮುಂದಾಗಿದ್ದಾರೆ.

ಇಂದು ಆಲಮಟ್ಟಿ ವಿವಾದ ಸುಪ್ರೀಂಕೋರ್ಟ್‌ನಲ್ಲಿದೆ. ಇದೇ ಸೆಪ್ಟೆಂಬರ್ ೭ ರಂದು ಆದೇಶ ಹೊರಡಿಸಲು ೫ ಜನ ಸದಸ್ಯರ ನ್ಯಾಯಪೀಠ ನಿರ್ಧರಿಸಿದೆ. ಮುಖ್ಯ ನ್ಯಾಯಾಧೀಶ ಡಾ.ಎ.ಎಸ್. ಆನಂದ ಹಾಗೂ ನ್ಯಾಯಮೂರ್ತಿಗಳಾದ ಕೆ. ವೆಂಕಟಸ್ವಾಮಿ, ಜಿ. ಬಿ. ಪಾಟ್ನಾಯಿಕ್, ಎಸ್. ಪಿ. ಕುರ್ದುಕರ್, ಎಂ. ಜಗನ್ನಾಥರಾವ್ ಇದ್ದಾರೆ.

ಅಂತರರಾಜ್ಯ ನದಿನೀರು ವಿವಾದವು ಕರ್ನಾಟಕ, ಆಂಧ್ರಪ್ರದೇಶಗಳ ರಿಟ್ ಅರ್ಜಿಗಳನ್ನು ನ್ಯಾಯಾಲಯ ಜುಲೈನಲ್ಲಿ ಸಂವಿಧಾನ ಪೀಠಕ್ಕೆ ಸಲ್ಲಿಸಿತು. ಆಂಧ್ರವು ಅದರಲ್ಲಿ ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು ೫೧೯ ಮೀಟರುಗಳಿಂದ ೫೨೪ ಮೀಟರುಗಳಿಗೆ ಹೆಚ್ಚಿಸಿರುವುದನ್ನು ವಿರೋಧಿಸಿ, ನದಿನೀರು ಹಂಚಿಕೆಗೆ ಒತ್ತಾಯಿಸಿದೆ. ಕರ್ನಾಟಕ ತನ್ನ ಮನವಿಯಲ್ಲಿ 'ಬಿ' ಸ್ಕೀಂನ್ನು ಸಂಪೂರ್ಣಗೊಳಿಸಲು ಕೋರಿದೆಯಲ್ಲದೆ, 'ತೆಲುಗು-ಗಂಗಾ' ಯೋಜನೆ ಸೇರಿದಂತೆ ಹೊಸ ನೀರಾವರಿ ಯೋಜನೆಗಳನ್ನು ವಿರೋಧಿಸಿದೆ. ಕರ್ನಾಟಕ ಮಧ್ಯಂತರ ಆಜ್ಞೆ ಹೊರಡಿಸಲು ನ್ಯಾಯಾಲಯದ ಮೊರೆ ಹೋಯಿತು. ಆಲಮಟ್ಟಿ ಜಲಾಶಯದಲ್ಲಿ ೫೧೫.೨ ಮೀಟರುಗಳಷ್ಟು ಎತ್ತರದ ಮಟ್ಟ ನೀರು ಸಂಗ್ರಹಿಸಿಕೊಳ್ಳಲು ಒಪ್ಪಿತು. ಕೃಷ್ಣಾಮೇಲ್ದಂಡೆ ಯೋಜನೆಯಲ್ಲಿ ೧೫೫ ಟಿ.ಎಂ.ಸಿ. ನೀರು ಬಳಸಿಕೊಳ್ಳಲು ಒಪ್ಪಿಕೊಂಡಾಗ ಆಂಧ್ರವು ಸಂಪೂರ್ಣವಾಗಿ ಮಧ್ಯಂತರ ಆಜ್ಞೆಯನ್ನು ವಿರೋಧಿಸಿತು. ಮೇ. ೩, ೧೯೯೯ರ ನ್ಯಾಯಾಲಯದ ಮಧ್ಯಂತರ ಆದೇಶವು ಆಲಮಟ್ಟಿ ಅಣೆಕಟ್ಟಿಗೆ ಸಂಬಂಧಿಸಿದಂತೆ ಯಥಾಸ್ಥಿತಿ ಕಾಪಾಡಿಕೊಳ್ಳಲು ತಿಳಿಸಿದೆ. ಮುಳುಗಡೆಗೊಂಡ ಬಾಗಲುಕೋಟೆಯ ಸುಮಾರು ೨೮೩೪ ಸಂತ್ರಸ್ತ ಕುಟುಂಬಗಳಿಗೆ ಉಚಿತ ನಿವೇಶನ, ಹಕ್ಕುಪತ್ರ, ೪೦ ಕೋಟಿ ಪರಿಹಾರಧನ ನೀಡಲು ನಗರಾಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ ಪ್ರಕಾಶತಪಶೆಟ್ಟಿ ಅವರು ತಿಳಿಸಿದ್ದಾರೆ.

ದಿನಾಂಕ ೧೮-೧೧-೯೯ ರಂದು ಕೇಂದ್ರ ಜನಸಂಪನ್ಮೂಲ ರಾಜ್ಯಸಚಿವೆ

ಬಿಜೋಯ್ ಚಕ್ರವರ್ತಿ ಕೃಷ್ಣಾಮೇಲ್ದಂಡೆ ಪ್ರದೇಶಗಳನ್ನು ವೀಕ್ಷಿಸಿದ ನಂತರ ಆಂಧ್ರ ಮತ್ತು ಕರ್ನಾಟಕಗಳು ಸೌಹಾರ್ದಯುತವಾಗಿ ಆಲಮಟ್ಟಿ ವಿವಾದವನ್ನು ಬಗೆಹರಿಸಿಕೊಳ್ಳಲು ಸೂಚಿಸಿರುವರು. ಸುಪ್ರೀಂ ಕೋರ್ಟ್ ೫೧೯ ಮೀಟರ್ ಹಂತದಲ್ಲಿ ಯಥಾ ಸ್ಥಿತಿ ಕಾಯ್ದುಕೊಳ್ಳಲು ಮಧ್ಯಂತರ ಆದೇಶ ನೀಡಿರುವುದರಿಂದ ೫೨೪ ಮೀಟರ್ ಎತ್ತರಕ್ಕೇರಿಸಿದರೆ ಮಾತ್ರ ಕರ್ನಾಟಕ ನೀರನ್ನುಪಡೆಯಲು ಸಾಧ್ಯ. ಇಲ್ಲವಾದರೆ ಸಮಸ್ಯೆ ಇನ್ನಷ್ಟು ಬಿಗಡಾಯಿಸುತ್ತದೆ. ಒಟ್ಟಾರೆ ಕೃಷ್ಣಾ ಕೊಳ್ಳದ ಆಲಮಟ್ಟಿ, ಘಟಪ್ರಭಾ, ಮಲಪ್ರಭಾ, ದೂಧ ಗಂಗಾ ಯೋಜನೆಗಳನ್ನು ಬಚಾವತ್ ಐತೀರ್ಪಿನಂತೆ ೨೦೦೦ ವೇಳೆಗೆ ಮುಗಿಸುವ ಯೋಜನೆ ಕಾಂಗ್ರೆಸ್ ಸರ್ಕಾರಕ್ಕೆ ಇಂದು ಸವಾಲಾಗಿದೆ. ಎಚ್. ಕೆ. ಪಾಟೀಲ್ ಅವರು ರಾಜ್ಯದ ೭೨೯ ಟಿ.ಎಂ.ಸಿ. ನೀರಿನ ಪಾಲನ್ನೂ ಪಡೆಯಲು ಶ್ರಮಿಸುವುದಾಗಿ ಹೇಳಿರುವುದು ರೈತರಿಗೆ ಹರ್ಷದಾಯಕ ಸಂಗತಿಯಾಗಿದೆ. ಇತ್ತೀಚಿನ ಸಂದರ್ಭದಲ್ಲಿ ಕೃಷ್ಣಾನದಿ ನೀರು ವಿವಾದ ವಿವಿಧ ರೂಪದಲ್ಲಿ ವ್ಯಕ್ತಪಡುವುದು ಗಮನಾರ್ಹ. ದಿನಾಂಕ ೨೩.೧೧.೯೯ರಂದು ಎಚ್. ಕೆ. ಪಾಟೀಲರು ಬಚಾವತ್ ವರದಿಯ ತೀರ್ಪಿನಂತೆ ಕೃಷ್ಣಾನದಿಯ ರಾಜ್ಯದ ಪಾಲಿನ ೭೩೪ ಟಿ.ಎಂ.ಸಿ. ನೀರನ್ನು ೨೦೦೦ ಮೇ ಒಳಗಾಗಿ ಬಳಸಿಕೊಳ್ಳುವುದು ಅಸಾಧ್ಯ ಎಂದಿರುವುದು ಉತ್ತರ ಕರ್ನಾಟಕದ ರೈತರ ನಿದ್ದೆ ಕೆಡಿಸಿದೆ. ಈ ಮಧ್ಯೆ ಎಸ್.ಎಂ. ಕೃಷ್ಣ ಅವರು (೨೭.೧೧.೯೯) ಗುಲ್ಬರ್ಗಾದಲ್ಲಿ ಪತ್ರಕರ್ತರೊಂದಿಗೆ ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ನಡೆದಿದೆಯೆಂದು ಆರೋಪಿಸಲಾದ ಅವ್ಯವಹಾರಗಳ ಬಗ್ಗೆ ತನಿಖೆ ನಡೆಸುವುದಾಗಿ ಹೇಳಿರುವುದು ಸ್ಪಷ್ಟ.

ಕೃಷ್ಣಾ ಮೇಲ್ದಂಡೆ ಸಂಬಂಧ ಕೇಂದ್ರ ಸರ್ಕಾರ ಸುಪ್ರೀಂ ಕೋರ್ಟಿಗೆ ಸಲ್ಲಿಸಿದ ಪ್ರಮಾಣ ಪತ್ರದಿಂದ ರಾಜ್ಯಕ್ಕೆ ಅನ್ಯಾಯವಾದರೆ ರಾಜ್ಯದಾದ್ಯಂತ ಉಗ್ರ ಚಳವಳಿ ನಡೆಸುವುದಾಗಿ ವೈಜನಾಥ್ ಪಾಟೀಲ್ (೨೮.೧೧.೯೯) ಹೇಳಿದ್ದಾರೆ. ಕೃಷ್ಣಾ ಉತ್ತರ ಕರ್ನಾಟಕದ ಜೀವನಾಡಿಯಾಗಿದೆ. ಕೃಷ್ಣಾನದಿ ನೀರು ಪಾಲನ್ನು ರಾಜ್ಯ ಪಡೆಯಬೇಕೆಂದು ಎಲ್ಲರ ಆಶಯವಾಗಿದೆ ಎಂದಿರುವರು.

ಶಹಾಪುರ ಜನಪ್ರತಿನಿಧಿಗಳ ನಿಯೋಗ ೮.೧೨.೯೯ರಂದು ಕೃಷ್ಣಾನದಿನೀರು ಹಂಚಿಕೆ ಸಂಬಂಧ ಪ್ರಧಾನಿಯವರು ನ್ಯಾಯ ಒದಗಿಸಬೇಕೆಂದು ಒತ್ತಾಯಿಸಲಾಗಿದೆ. ಇದರಲ್ಲಿ ಕಲಬುರ್ಗಿ ಜಿಲ್ಲೆಯ ಶಹಾಪುರ, ಜೇವರ್ಗಿ, ಸುರಪುರ, ರಾಯಚೂರು ಜಿಲ್ಲೆಯ ಲಿಂಗಸುಗೂರು, ದೇವದುರ್ಗ, ರಾಯಚೂರು, ವಿಜಾಪುರ ಜಿಲ್ಲೆಯ ಇಂಡಿ, ಸಿಂಧಗಿ, ಮುದ್ದೇ ಬಿಹಾಳ ತಾಲೂಕುಗಳು ಸೇರಿವೆ. ಈ ತಾಲೂಕುಗಳ ಶಾಸಕರು, ಸಂಸತ್ ಸದಸ್ಯರು, ರೈತಸಂಘ ಸೇರಿ ಹೋಗಿದ್ದರು. ಇವರು ೨೦೦೦ ಮೇ ೩೦ ರೊಳಗಾಗಿ ಕೃಷ್ಣಾನದಿ ನೀರಿನ ಬಳಕೆ ಪಡೆಯಬೇಕೆಂದು ಒತ್ತಾಯಿಸಿದ್ದಾರೆ.

ಆಲಮಟ್ಟಿ ಅಣೆಕಟ್ಟಿನ ಎತ್ತರದ ಬಗ್ಗೆ ಕೇಂದ್ರ ಸರ್ಕಾರ ಸುಪ್ರೀಂ ಕೋರ್ಟ್‌ಗೆ ಸಲ್ಲಿಸಿರುವ ಪ್ರಮಾಣಪತ್ರವನ್ನು ಹಿಂದಕ್ಕೆ ತೆಗೆದುಕೊಳ್ಳುವವರೆಗೆ ನಾಡಿನ ರಾಜಕೀಯ ಪಕ್ಷಗಳು ಭೇದ ಮರೆತು ಹೋರಾಡಲು ಕೃಷ್ಣಾ ನೀರಾವರಿ ಹೋರಾಟ ಸಮಿತಿ ಅಧ್ಯಕ್ಷ ವೈಜನಾಥ ಪಾಟೀಲ್ ಹೇಳಿದ್ದಾರೆ. ವಾಜಪೇಯಿಯವರು ಆಂಧ್ರಪ್ರದೇಶದ ಚಂದ್ರಬಾಬು ನಾಯ್ಡು ಕೃಪೆಗೆ ಪಾತ್ರರಾಗಿ ಈ ರೀತಿ ಮಾಡಿದ್ದಾರೆಂದು ಇವರು ಆರೋಪಿಸಿದ್ದಾರೆ.

ರಾಯಚೂರಿನಲ್ಲಿ ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು ಸೀಮಿತಗೊಳಿಸುವಂತೆ ಕೇಂದ್ರ ಸರ್ಕಾರವು ಸುಪ್ರೀಂಕೋರ್ಟಿನಲ್ಲಿ ಸಲ್ಲಿಸಿರುವ ಅಪಡೆವಿಟ್‌ನಿಂದ ಆಗುವ ಪರಿಣಾಮಗಳ ಬಗ್ಗೆ ಚರ್ಚಿಸಿ ಮುಂದಿನ ಹೋರಾಟ ರೂಪಿಸುವ ನಿಟ್ಟನಲ್ಲಿ ೧೧.೧೨.೯೯ರಂದು ಸರ್ವ ಪಕ್ಷಗಳ ಸಭೆ ನಡೆಯಿತು.

ಆಲಮಟ್ಟಿ ಅಣೆಕಟ್ಟೆಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಪ್ರಮಾಣ ಪತ್ರದ ವಿರುದ್ಧ ಮತ್ತು ವಿವಾದದ ಪರಿಹಾರಕ್ಕೆ ರಾಜ್ಯ ಕೈಗೊಳ್ಳುವ ಕ್ರಮಕ್ಕೆ ಬೆಂಬಲವಾಗಿ ೧೮.೧೨.೯೯ರಂದು 'ಕೃಷ್ಣಾ ಮೇಲ್ದಂಡೆ ಯೋಜನೆ ಹೋರಾಟ ಸಮಿತಿ' ವಿಜಾಪುರ ಜಿಲ್ಲಾ ಬಂದ್ ನಡೆಸಿ ತೀರ್ಮಾನಿಸಿತು. ಇದರಲ್ಲಿ ಬಿ. ಎಸ್. ಪಾಟೀಲ್ ಸಾಸನೂರ' ಯರನಾಳದ ಸಂಗನ ಬಸವ ಸ್ವಾಮೀಜಿ ಪಾಲ್ಗೊಂಡಿದ್ದರು. ಕೃಷ್ಣಾ ಮೇಲ್ದಂಡೆ ಯೋಜನೆಯ ಸಂತ್ರಸ್ತರ ಹಿತರಕ್ಷಣಾ ಸಮಿತಿ ಅಧ್ಯಕ್ಷ ವಾಸಣ್ಣ ದೇಸಾಯಿ ಮೊದಲಾದವರಿದ್ದರು.

ಆಲಮಟ್ಟಿ ಅಣೆಕಟ್ಟಿನ ಎತ್ತರದ ವಿವಾದದ ಬಗೆಗೆ ಕೃಷ್ಣಾ ಮೇಲ್ದಂಡೆ ಯೋಜನೆ ಕುರಿತು ಉಸ್ತುವಾರಿ ಸಮಿತಿ ರಚಿಸುವ ಅಗತ್ಯವಿದೆ ಎಂದು ಬಿ.ಜೆ.ಪಿ. ಅಧ್ಯಕ್ಷ ಬಿ.ಎಸ್. ಯಡಿಯೂರಪ್ಪ ಕೇಂದ್ರಕ್ಕೆ ಒತ್ತಾಯಿಸಿದ್ದಾರೆ. ಮುಂದುವರೆದು ೫೨೪ ಮೀಟರ್ ಅಣೆಕಟ್ಟನ್ನು ಎತ್ತರಿಸಬೇಕು. ಹೆಚ್ಚುವರಿ ನೀರಿನಿಂದ ವಿದ್ಯುತ್ ಉತ್ಪಾದನೆ ಮಾಡಬೇಕು ಎಂಬುದು ಬಿಜೆಪಿಯ ಸ್ಪಷ್ಟ ನಿಲುವು ಎಂದಿರುವರು.

ಹೋರಾಟ ಸಮಿತಿ ತೀರ್ಮಾನದಂತೆ ೧೮.೧೨.೯೯ರಂದು ಆಲಮಟ್ಟಿ ವಿವಾದ ಕುರಿತು ಬಿಜಾಪುರದಲ್ಲಿ ಒಂದು ದಿನ ಬಂದ್ ಮಾಡಿ ರೈಲು ಬೋಗಿಗೆ ಹಾನಿಯುಂಟು ಮಾಡಿದ್ದರು. ಇವರು ೧೯೬೪ರಲ್ಲಿ ಆಗಿ ಕೇಂದ್ರ ಮಂತ್ರಿ ಲಾಲಬಹಾದ್ದೂರ ಶಾಸ್ತ್ರಿಯವರು ಆಲಮಟ್ಟಿ - ನಾರಾಯಣಪುರ ಅಣೆಕಟ್ಟುಗಳ ನಿರ್ಮಾಣಕ್ಕೆ ಅಡಿಗಲ್ಲು ಇಟ್ಟಾಗಿನಿಂದ ಇದೇ ಸಮಸ್ಯೆ ಕಾಣುತ್ತೇವೆ ಎಂದಿರುವರು. ಆರಂಭದಲ್ಲಿ ೧೨೮ ಕೋಟಿ ರೂ. ಅಂದಾಜಿತ್ತು. ಇಂದು ೪೦೦೦ ಕೋಟಿ ರೂ. ಗೆ ಏರಿದೆ. ಆಲಮಟ್ಟಿಯಿಂದ ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದ್ದರೆ ಅದು ರಾಜಕಾರಣಿಗಳಿಂದಲೇ ಎಂದು ಮೇಲಿನವರು ಒತ್ತಾಯಿಸಿರುವರು. ಆಲಮಟ್ಟಿ ಅಣೆಕಟ್ಟೆಯ ಎತ್ತರದ ವಿಚಾರದಲ್ಲಿ ಕೇಂದ್ರ ಸರ್ಕಾರ ಸುಪ್ರೀಂ ಕೋರ್ಟ್‌ನಲ್ಲಿ ಸಲ್ಲಿಸಿರುವ ಪ್ರಮಾಣಪತ್ರವನ್ನು ಹಿಂತೆಗೆದುಕೊಳ್ಳಬೇಕೆಂದು ಜನತಾದಳ(ಯು) ಕಾರ್ಯಕರ್ತರು ೧೯.೧೨.೯೯ರಂದು ಬೆಂಗಳೂರಿನಲ್ಲಿ ಪಂಜಿನ ಮೆರವಣಿಗೆ ನಡೆಸಿದರು.

ಬಿ.ಜೆ.ಪಿ. ಪುನಃ ಕೇಂದ್ರದಲ್ಲಿ ಅಧಿಕಾರಕ್ಕೆ ಬರುತ್ತಿದ್ದಂತೆಯೇ ಸುಪ್ರೀಂ ಕೋರ್ಟಿನಲ್ಲಿ ಹೊಸ ಅಫಿಡೇವಿಟ್ ಸಲ್ಲಿಸಿ ಯೋಜನಾ ಆಯೋಗ ಕರ್ನಾಟಕಕ್ಕೆ ಅನುಮತಿ ಕೊಟ್ಟಿರುವುದನ್ನು ಮಾತ್ರ ಅಂದರೆ ೫೦೯ ಮೀಟರ್ ತನಕ ಆಲಮಟ್ಟಿ ಅಣೆಕಟ್ಟೆಯ ಎತ್ತರ ಏರಿಸಲು ತನ್ನ ತಕರಾರು ಇಲ್ಲವೆಂದು ತಿಳಿಸಿದೆ. ಇದು ಬಿ.ಜೆ.ಪಿ.ಯ ನುಣಿಚಿಕೊಳ್ಳುವ ಮತ್ತು ಕುತಂತ್ರ ಆಧಾರಿತ ನಿರ್ಧಾರ ಎನ್ನಬಹುದು.

ಕೇಂದ್ರ ಸರ್ಕಾರ ಆಂಧ್ರಪ್ರದೇಶಕ್ಕೆ ಮಣಿದು, ಕರ್ನಾಟಕಕ್ಕೆ ಅನ್ಯಾಯ ಮಾಡುತ್ತಿರುವ ಹಿನ್ನಲೆಯಲ್ಲಿ ಆಲಮಟ್ಟಿ ಚಲೋ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. ಕಲಬುರ್ಗಿ,

ರಾಯಚೂರ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಹೋರಾಟ ನಡೆಸುವುದಾಗಿ ಕೃಷ್ಣಾ ನೀರಾ ಪರಿ ಹೋರಾಟ ಸಮಿತಿ ಅಧ್ಯಕ್ಷರೂ ಆಗಿರುವ ಮಾಜಿ ಸಚಿವ ವೈಜನಾಥ ಪಾಟೀಲ್ ತಿಳಿಸಿದ್ದಾರೆ. ಉತ್ತರ ಕರ್ನಾಟಕಕ್ಕೆ ಕೃಷ್ಣಾ ಮೇಲ್ದಂಡೆ ಯೋಜನೆಯ ಆಲಮಟ್ಟಿ ಅಣೆಕಟ್ಟು ವಿವಾದ ಕುರಿತು ಕೇಂದ್ರ ಸರ್ಕಾರ ತನ್ನ ನೀತಿಯನ್ನು ಬದಲಾಯಿಸಲು ೨೮.೧೨.೧೯೯೯ರಂದು ಹೋರಾಟ ಸಮಿತಿ ಮಹತ್ವದ ಸಭೆಯನ್ನು ಕರೆಯಲಾಗಿದೆ. ಪುನಃ ಈ ಸಭೆಯನ್ನು ೮-೧-೨೦೦೦ದಲ್ಲಿ ನಡೆಸಲು ತೀರ್ಮಾನಿಸಲಾಯಿತು.

ಕೃಷ್ಣಾ ನದಿಯಲ್ಲಿ ನೀರಿನ ಕೊರತೆಯಿಂದಾಗಿ ಕೆಲವು ಪ್ರದೇಶಗಳಲ್ಲಿ ಉಂಟಾಗಿರುವ ಸಮಸ್ಯೆ ನಿವಾರಣೆಗೆ ಕೊಯ್ನಾ ಅಣೆಕಟ್ಟೆಯಿಂದ ನೀರು ಬಿಡುವಂತೆ ಎಚ್. ಕೆ. ಪಾಟೀಲ್ ಮಹಾರಾಷ್ಟ್ರ ಸರ್ಕಾರದೊಂದಿಗೆ ಮಾತುಕತೆಗೆ ಮುಂದಾಗಿರುವರು.

ಆಂಧ್ರವು ಶ್ರೀಶೈಲ ಎಡದಂಡೆ, ಗಾಲೇರುನಗರಿ, ವೆಲಿಗೊಂಡ ನಾಲೆ, ಪುಲಿಚಿಂತಲ ಡೈವರ್ಶನ್, ತೆಲುಗು-ಗಂಗಾ ಯೋಜನೆಗಳ ಮೂಲಕ ಬಚಾವತ್ ತೀರ್ಪನ್ನು ಉಲ್ಲಂಘಿಸಿದ್ದು, ಕೇಂದ್ರಸರ್ಕಾರದ ಅನುಮತಿಯೂ ಪಡೆದಿಲ್ಲ. ಹೀಗಾಗಿ ಈ ಯೋಜನೆಗಳನ್ನು ನಿಲ್ಲಿಸುವಂತೆ ಎಚ್. ಕೆ. ಪಾಟೀಲ್ ಕೇಂದ್ರಕ್ಕೆ (೮-೧-೨೦೦೦) ಒತ್ತಾಯಿಸಿದ್ದಾರೆ.

ಹೀಗೆ ಸಮಸ್ಯೆಗೆ ಪರಿಹಾರ ಕಂಡು ಹಿಡಿಯುವಲ್ಲಿ ರಾಜ್ಯ ಸರ್ಕಾರ ಕೈಗೊಳ್ಳುವ ಪರ್ಯಾಯ ವ್ಯವಸ್ಥೆಗಳು ಉಪಯೋಗವಾಗಿರುವುದು ಹರ್ಷದಾಯಕವೆನಿಸಿದೆ. ಕರ್ನಾಟಕಕ್ಕೆ ದೊರಕಬೇಕಾದ ಸೌಲಭ್ಯವನ್ನು ಸಂಪೂರ್ಣ ಬಳಸಿಕೊಳ್ಳಲು ಚಳವಳಿಗಳು ನಡೆಯುವುದು ನ್ಯಾಯೋಚಿತವಾಗಿವೆ.

## ೭:೫. ಕುಡಿಯುವ ನೀರಿಗಾಗಿ ನಡೆಯುವ ಚಳವಳಿಗಳು

ನೀರು ಜೀವಿಸುವ ಪ್ರಾಣಿ, ಪಕ್ಷಿ ಇತರ ಅಗತ್ಯವಿರುವ ಎಲ್ಲ ಬಗೆಯ ವಸ್ತುಗಳಿಗೂ ಮೂಲಭೂತ ಸಂಪನ್ಮೂಲವಾಗಿದೆ. ಮಾನವನಿಗೆ ನೀರಿಲ್ಲದೆ ಬದುಕುವುದು ಕಷ್ಟವೆಂದು ಮತ್ತೊಮ್ಮೆ ಹೇಳಬೇಕಾಗಿಲ್ಲ. ಹೀಗಾಗಿ ಕುಡಿಯಲು ಸಮೃದ್ಧವಾಗಿ ನೀರು ಪೂರೈಕೆಯಾಗದಿರುವುದಕ್ಕೆ ಜನಸಾಮಾನ್ಯರಿಂದ ಚಳವಳಿಗಳು ಸಂಭವಿಸುತ್ತವೆ. ಇತರ ರಾಜ್ಯಗಳಿಗೆ ಹೋಲಿಸಿಕೊಂಡರೆ ಕರ್ನಾಟಕವು ಬೇಸಿಗೆಯಲ್ಲಿ ಹೆಚ್ಚಿನ ನೀರಿಗಾಗಿ ಚಳವಳಿ ಮಾಡುವುದನ್ನು ಕಾಣುತ್ತೇವೆ. ಇತರ ಸಂದರ್ಭಗಳಲ್ಲಿ ಸಣ್ಣ-ಪುಟ್ಟ ಘಟನೆಗಳು ನಡೆದರೂ, ಗಂಭೀರವಾಗಿ ಪರಿಗಣಿಸುವುದು ಕೆಲವನ್ನು ಮಾತ್ರ. ರಾಜ್ಯದ ಆಂತರಿಕ ಜಲಸಮಸ್ಯೆಯಿಂದ ಕುಡಿಯುವ ನೀರಿನ ಬಗ್ಗೆ ವಿಪುಲವಾದ ಮಾಹಿತಿ ಲಭ್ಯವಿದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಜಿಲ್ಲಾಕೇಂದ್ರ, ತಾಲೂಕುಕೇಂದ್ರ ಮತ್ತು ಗ್ರಾಮಾಂತರ ಪ್ರದೇಶಗಳಿಂದು ವಿಂಗಡಿಸಿಕೊಂಡು ನೀರಿನ ಸಮಸ್ಯೆ ಚಳವಳಿಗಳನ್ನು ಸಮೀಕ್ಷಿಸಲಾಗುವುದು.

ಮೊದಲಿಗೆ ಬೀದರ್ ಜಿಲ್ಲೆಯನ್ನು ತೆಗೆದುಕೊಂಡರೆ, ವಾರ್ಷಿಕ ಮಳೆಬಾರದಿದ್ದಾಗ ನೀರಿನ ತೀವ್ರ ಅಭಾವ ಕಂಡುಬರುತ್ತದೆ. ಇದಕ್ಕಾಗಿ ೧೯೯೮ರಲ್ಲಿ ಜಿಲ್ಲಾ ಮತ್ತು ತಾಲ್ಲೂಕ್ ಪಂಚಾಯತ್, ಪುರಸಭೆಗಳಿಗೆ ಜನರು ಮುತ್ತಿಗೆ ಹಾಕಿ ಅಧಿಕಾರಿಗಳನ್ನು ಘೇರಾವ್ ಮಾಡಿ ಖಾಲಿ ಕೊಡಗಳ ಪ್ರದರ್ಶಿಸಿ, ರಸ್ತೆ ತಡೆ ಚಳವಳಿ ಮುಂತಾದ ಚಟುವಟಿಕೆಗಳನ್ನು

ನಡೆಸಿದ್ದಾರೆ. ಈ ಜಿಲ್ಲೆಯಲ್ಲಿನ ಕೊಳವೆ ಬಾವಿಗಳು ವಿಫಲಗೊಂಡಾಗ 'ವರ್ಷದ ಗೋಳು' ಪ್ರತಿವರ್ಷವು ಕಂಡುಬರುತ್ತದೆ. ಇದನ್ನೆಲ್ಲ ಅರಿತ ಸರ್ಕಾರ ಬೀದರ್ ಜಿಲ್ಲೆಯ ಹುಮ್ನಾಬಾದ್, ಚಿಟಗುಪ್ಪ ಮತ್ತು ಬಸವಕಲ್ಯಾಣ ನಗರಗಳಿಗೆ ಕುಡಿಯುವ ನೀರಿನ ಬಗ್ಗೆ ಯೋಜನೆ ರೂಪಿಸಿ, ಸಮಸ್ಯೆಯನ್ನು ತಕ್ಕಮಟ್ಟಿಗೆ ಪರಿಹರಿಸಿದೆ.

ಗುಲ್ಬರ್ಗಾ ಜಿಲ್ಲೆ ಕರ್ನಾಟಕದಲ್ಲಿ ಬಿಸಿಲಿಗೆ ಪ್ರಸಿದ್ಧವಾದುದು. ಬೇಸಿಗೆ ಬಂತೆಂದರೆ ಇಲ್ಲಿ ನೀರಿನ ಅಭಾವ, ಹಾಹಾಕಾರ ಮುಗಿಲು ಮುಟ್ಟುತ್ತದೆ. ಜಿಲ್ಲೆಯ ೪೩೦ ಗ್ರಾಮಗಳಲ್ಲಿ ನೀರಿನ ಕೊರತೆಯಿದ್ದು, ಅವುಗಳಲ್ಲಿ ಸು. ೧೪೦ ಗ್ರಾಮಗಳಿಗೆ ತೀವ್ರವಾದ ಕುಡಿಯುವ ನೀರಿನ ಅಭಾವವಿದೆ. ೩೦ ಗ್ರಾಮಗಳಲ್ಲಿ ನೀರನ್ನು ಪೂರೈಕೆ (ಸಾಗಾಣಿಕೆ) ಮಾಡುವಾಗ ಸಮಸ್ಯೆ ಉದ್ಭವಿಸಿದ ಕಾರಣ ಘರ್ಷಣೆಗಳು ನಡೆದವು. ಕೆರೆ, ಬಾವಿಗಳು ಮಳೆಯಿಲ್ಲದೆ ಬೇಸಿಗೆಯಲ್ಲಿ ಬತ್ತಿ ಹೋಗುವುದು ಸಹಜ. ಜಲಸಂಪರ್ಕ ಕಡಿಮೆಯಾದಾಗ ಕೊಳವೆ ಬಾವಿಗಳು ಬತ್ತಿಹೋಗುತ್ತವೆ. ಈ ಸಮಸ್ಯೆಯಿಂದ ನರಳುತ್ತಿರುವ ಗ್ರಾಮಗಳಿಗೆ ವಾಹನಗಳ ಮೂಲಕ (ಬೇಸಗೆ) ನೀರು ಪೂರೈಕೆ ಮಾಡುತ್ತಾರೆ. ಸುರಪುರ, ಶಹಾಪುರ, ಜೇವರ್ಗಿ, ಸೇಡಂ ಮುಂತಾದ ತಾಲೂಕುಗಳಲ್ಲಿ ದಟ್ಟವಾದ ಸಮಸ್ಯೆ ಕವಿದಿದೆ. ಇದರ ಸಲುವಾಗಿ ಆಗಾಗ ಚಳವಳಿಗಳು ನಡೆಯುತ್ತಿವೆ.

ಈ ಜಿಲ್ಲೆಯಲ್ಲಿ ಶೇ. ೧೭ರಷ್ಟು ಕಡಿಮೆ ಮಳೆ ಬಿದ್ದಿದ್ದರಿಂದ, ೧೯೯೬ರಲ್ಲಿ ಬಂದ ಮಳೆಗಿಂತ ಶೇ. ೩೨ರಷ್ಟು ಕಡಿಮೆಯಾಗಿ ಅಂತರ್ಜಲ ಕ್ಷೀಣಿಸಿತು. ಕಲ್ಬುರ್ಗಿ ನಗರಕ್ಕಿಂತಲೂ ಗ್ರಾಮಾಂತರ ಪ್ರದೇಶದಲ್ಲಿ ನೀರಿನ ಸಮಸ್ಯೆ ಹೆಚ್ಚಿದೆ. ೧೯೯೭ ಜನವರಿಯಲ್ಲಿ ೪.೬ ಮೀ. ಇದ್ದ ಅಂತರ್ಜಲಮಟ್ಟ ೧೯೯೮ರ ಜನವರಿಯಲ್ಲಿ ೭.೦೦ ಮೀ.ಗಳಷ್ಟು ಕುಸಿದಿತ್ತು. ಹೀಗಾಗಿ ಭೀಮಾನದಿಗೆ ಬ್ಯಾರೆಜ್ ನಿರ್ಮಾಣ ಮಾಡಿ ಕಲ್ಬುರ್ಗಿ ನಗರಕ್ಕೆ ನೀರು ಸರಬರಾಜು ಮಾಡಲಾಗುತ್ತಿದೆ. ಈಗ ಕಲ್ಬುರ್ಗಿಗೆ ಭೋಸ್ಗಾಕೆರೆಯಿಂದ ನೀರು ಸರಬರಾಜು ಮಾಡುತ್ತಿದ್ದು, ಸದ್ಯ ೩.೫ ಅಡಿಗಳಷ್ಟು ನೀರಿದೆ. ಬಿಸಿಲಿಗೆ ೨ ಅಂಗುಲದಷ್ಟು ನೀರು ಆವಿಯಾಗುವುದು. ಇಂಥ ಸಂದರ್ಭವನ್ನರಿತು ಭೀಮಾನದಿಯಿಂದ ಭೋಸ್ಗಾಕೆರೆಗೆ ನೀರು ಬಿಡಲಾಗುವುದು. ಬೇಸಿಗೆಯಲ್ಲಿ ನೀರು ಸರಬರಾಜು ಮಾಡಲು ಪಂಪಿಂಗ್ ಸ್ಫೋಟ ಮತ್ತು ವಿದ್ಯುತ್ ಪೂರೈಕೆ ವ್ಯತ್ಯಯವಾದಾಗ ಜನರು ಚಳವಳಿ ಹೂಡುವಲ್ಲಿ ನಿರತರಾಗುತ್ತಾರೆ. ಸರ್ಕಾರ ಪರಿಹಾರ ಕಾರ್ಯಕೈಗೊಂಡರು ವಿಫಲತೆ ಎದ್ದುಕಾಣುತ್ತದೆ.

ನಗರದಲ್ಲಿ ಕೊಳವೆ ಬಾವಿಗಳನ್ನು ಹಾಕಲು ೪೬ ಕೋಟಿ ರೂ. ವೆಚ್ಚದ ಯೋಜನೆ ಪ್ರಸ್ತಾಪವನ್ನು ಸರ್ಕಾರಕ್ಕೆ ಕಳುಹಿಸಿದಾಗ ಎರಡು ವರ್ಷ ಕಳೆದರೂ ಅನುಮತಿ ಸಿಗಲೇ ಇಲ್ಲ. ಸದ್ಯಕ್ಕಿರುವ ಕೊಳವೆ ಬಾವಿಗಳ ಸ್ಥಿತಿ ಶೋಚನೀಯವಾಗಿದ್ದು, ನೀರು ಪೂರೈಕೆ ಸೌಲಭ್ಯದಲ್ಲಿ ತೀವ್ರ ಸಮಸ್ಯೆಯಿದೆ. ನೀರಿನ ಅಭಾವವಿರುವ ಭಾಗಕ್ಕೆ ೪೦ ಲಕ್ಷ ಬಿಡುಗಡೆ ಮಾಡುವಂತೆ ಮಾಲಿಕಯ್ಯಾ ಗುತ್ತೇದಾರ್ (ಉಸ್ತುವಾರಿ ಸಚಿವ) ಜಿಲ್ಲಾಧಿಕಾರಿಗೆ ತಿಳಿಸಿದ್ದಾರೆ. ಗ್ರಾಮಾಂತರ ಪ್ರದೇಶಕ್ಕೆ ೩೦ ಲಕ್ಷ ರೂ. ಮತ್ತು ೧೦ ಲಕ್ಷ ಇತರ ಭಾಗಗಳಿಗೆ ವಿತರಿಸಲು ಅವರನ್ನು ಒತ್ತಾಯಿಸಿದರು. ಕಲ್ಬುರ್ಗಿ ಜಿಲ್ಲಾಪಂಚಾಯ್ತಿ ಕುಡಿಯುವ ನೀರಿನ ಸಮಸ್ಯೆಗೆ ಕ್ರಿಯಾ ಯೋಜನೆ ರೂಪಿಸಿತಾದರೂ, ಯಶಸ್ವಿಯಾಗಲಿಲ್ಲ. ಈ ಎಲ್ಲ

ಕಾರಣಗಳಿಂದ ಪ್ರತಿವರ್ಷ ನೀರಿನ ಹಾಹಾಕಾರ ಉಂಟಾಗುತ್ತಿರುತ್ತದೆ.

ಇದೇ ಜಿಲ್ಲೆಯ ಚಿಂಚೋಳಿಯಲ್ಲಿ ಕುಡಿಯುವ ನೀರಿನ ತೊಂದರೆಯಿಂದ ಜನರು ಉಪವಾಸ ಸತ್ಯಾಗ್ರಹದ ಬೆದರಿಕೆ ಹಾಕಿದ್ದರು. ತಾಲೂಕಿನ ರುಮ್ಮನಗೂಡ, ಪಸ್ತಪೂರ, ಮೋಘಾಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಬರುವ ಗುಜಗುರಿ, ಪಸ್ತಪೂರ ತಾಂಡಾ, ನಾಸರಗಾಂವ, ರುಸ್ತುಂಪೂರ, ರಮ್ಮನಗೂಡತಾಂಡಾ, ಮೋಘಾತಾಂಡ ಮೊದಲಾದ ಹಳ್ಳಿಗಳು ಬೇಸಗೆಯಲ್ಲಿ ಅಪಾರವಾದ ನೀರಿನ ಸಮಸ್ಯೆಯನ್ನು ಎದುರಿಸುತ್ತವೆ. ಈ ಗ್ರಾಮಗಳಿಗೆ ಕಿರುನೀರು ಸರಬರಾಜು ಯೋಜನೆ ಇದ್ದರೂ ಪ್ರಯೋಜನವಿಲ್ಲ. ಜನರು ೪ ಕಿ. ಮೀ. ದೂರ ನಡೆದು ನೀರು ತರಬೇಕಾಗುತ್ತದೆ. ಬೋರ್‌ವೆಲ್‌ಗಳಿಂದ ನೀರನ್ನು ಪಡೆಯಲು ಅಸಾಧ್ಯವೆಂದು ಜನಪ್ರತಿನಿಧಿಗಳು ತಿಳಿಸಿದಾಗ, ಮತ್ತು ಮೇಲಿನ ಸಮಸ್ಯೆ ಕುರಿತು ಮಾರ್ಚ್ ೭, ೧೯೯೮ ರಂದು ಶನಿವಾರ ಜನರು ಸತ್ಯಾಗ್ರಹ ನಡೆಸಿದರು. ಇದರಂತೆ ಪಕ್ಕದ ಬರಗಾಲ ಪೀಡನೆಗೊಳಗಾಗುವ ದೇವದುರ್ಗ ತಾಲೂಕಿನಲ್ಲಿಯೂ ಕುಡಿಯುವ ನೀರಿಗಾಗಿ ಹೋರಾಟ, ಚಳವಳಿಗಳು ಸಂಭವಿಸಿವೆ.

ರಾಯಚೂರು ಜಿಲ್ಲೆಯಲ್ಲಿ ಬೇಸಿಗೆ ಬಂತೆಂದರೆ ಕುಡಿಯುವ ನೀರಿನ ಸಮಸ್ಯೆ ಕಂಡುಬರುತ್ತದೆ. ಸಿಂಧನೂರು, ಮಾನವಿ, ಮುದಗಲ್ಲು, ಲಿಂಗಸುಗೂರು ಇತರ ತಾಲೂಕುಗಳಲ್ಲಿ ಜನರ ಪ್ರತಿರೋಧಗಳು ಕಂಡುಬಂದಿವೆ.

ಉತ್ಪ್ರೇಕ್ಷೆಗೆ ಬಿಸಿಲು, ಅತೀ ಬಿಸಿಲು ಎಂಬ ಎರಡು ಕಾಲಮಾನಗಳಿವೆ ಎನ್ನುವ ಬಳ್ಳಾರಿ ಜಿಲ್ಲೆಗೆ ಮೊದಲಿನಿಂದಲೂ ಬಿಸಿಲು ವರದಾನವಾಗಿರುವಂತಿದೆ. ಇದಕ್ಕೆ ಪ್ರತಿಯಾಗಿ ಕುಡಿಯುವ ನೀರಿನ ಪೂರೈಕೆಯು ಅಭಾವವಿರುವುದರಿಂದ ಬೇಸಿಗೆಯಲ್ಲಿ ಜನರ ಬವಣೆ ಹೇಳತೀರದು. ಬಳ್ಳಾರಿ ನಗರಕ್ಕೆ ಪಕ್ಕದ ಅಲ್ಲೀಪುರ ಕೆರೆಯಿಂದ ನೀರು ಪೂರೈಕೆ ಮಾಡಲಾಗುತ್ತದೆ. ಕೆರೆಯಲ್ಲಿ ನೀರಿನ ಅಭಾವವಿದ್ದರೆ ತುಂಗಭದ್ರಾ ಬಲದಂಡೆ ಕಾಲುವೆಯಿಂದ ನೀರನ್ನು ಬಿಡುತ್ತಾರೆ. ಪ್ರತಿವರ್ಷ ಬೇಸಿಗೆಯಲ್ಲಿ ವಾರಕ್ಕೆರಡು ಬಾರಿ ನೀರು ಸಿಕ್ಕರೆ ಸಾಕೆನ್ನುತ್ತಾರೆ ಇಲ್ಲಿನ ಜನ. ಬಳ್ಳಾರಿಯ ವೆಂಕಟೇಶ್ವರನಗರ ಬಡಾವಣೆಯ ಜನರು ಅನಂತಪುರ ರಸ್ತೆಯಲ್ಲಿ ಎರಡು ಗಂಟೆಗೂ ಹೆಚ್ಚುಕಾಲ ರಸ್ತೆ ತಡೆ ಚಳವಳಿ (೧೯೯೮) ನಡೆಸಿ ಪ್ರತಿಭಟಿಸಿದರು. ಈ ಪ್ರತಿಭಟನಾಕಾರರು ಧರಣಿ ನಡೆಸಿದಾಗ ಅನಂತಪುರ, ಆದೋನಿ, ಮಂತ್ರಾಲಯ, ಗುತ್ತಿ ಇತರ ಬಸ್ಸುಗಳ ಸಂಚಾರಕ್ಕೆ ತೊಂದರೆಯಾಯಿತು. ೧೩-೩-೧೯೯೮ ರಂದು ಜಲಮಂಡಳಿಯ ಇಂಜಿನಿಯರ್ ಹೊನ್ನೇಗೌಡ ಮತ್ತು ಸಿಎಂಸಿ ಇಂಜಿನಿಯರ್ ನೇತಾಜಿ ಸ್ಥಳಕ್ಕೆ ಬಂದು ಸಮಸ್ಯೆ ಅರಿತು, ಹಗರಿ ನದಿನೀರಿನ ಬಗ್ಗೆ ಚರ್ಚಿಸಿದರು. ನಂತರ ನೀರು ಪೂರೈಕೆ ಮಾಡುತ್ತೇವೆಂದು ಹೇಳಿದಾಗ ಚಳವಳಿಕಾರರು ಪ್ರತಿಭಟನೆಯನ್ನು ಕೈಬಿಟ್ಟರು. ಸಿರುಗುಪ್ಪ, ಕೂಡ್ಲಿಗಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ ಇತರ ತಾಲೂಕುಗಳಲ್ಲಿ ನೀರಿನ ಪೂರೈಕೆ ಕುರಿತು ಸಣ್ಣ-ಪುಟ್ಟ ಚಳವಳಿಗಳು ನಡೆದಿವೆ. ೩೦ ಸೆಪ್ಟೆಂಬರ್ ೧೯೯೯ ರಂದು ಕಂಪ್ಲಿಯಲ್ಲಿ ಕುಡಿಯುವ ನೀರಿಗಾಗಿ ಚಳವಳಿ ನಡೆಸಿದ್ದು ಗಮನಾರ್ಹ. ಹೀಗೆ ಮುಂದುವರಿದ ಹಳ್ಳಿಯಲ್ಲಿಯೂ ಸಹ ತೀವ್ರ ಸ್ವರೂಪದ ಕುಡಿಯುವ ನೀರಿನ ಸಮಸ್ಯೆಯನ್ನು ನೋಡಬಹುದು. ದಿನಾಂಕ ೧೭.೧೨.೧೯೯೯ ರಂದು ಇಲ್ಲಿ ಕುಡಿಯುವ ನೀರಿನ ಸಮಸ್ಯೆಯ ಪರಿಹಾರಕ್ಕೆ ಒತ್ತಾಯಿಸಿ ದಲಿತ ಸಂಘರ್ಷ ಸಮಿತಿಯವರು ಗ್ರಾಮ

ಪಂಚಾಯ್ತಿಗೆ ಬೀಗ ಹಾಕಿದರು. ಇದನ್ನರಿತ ಸ್ಥಳೀಯ ಅಧಿಕಾರಿಗಳು ಕಾರ್ಯೋನ್ಮುಖರಾಗಿದ್ದು ನೋಡಿದರೆ ಚಳವಳಿಗಳು ಅನಿವಾರ್ಯ ಎನಿಸುತ್ತವೆ.

ನೂತನ ಜಿಲ್ಲಾ ಕೇಂದ್ರವಾದ ಕೊಪ್ಪಳದಲ್ಲಿಯೂ ಸಹ ಕುಡಿಯುವ ನೀರಿನ ಸಮಸ್ಯೆ ಎದ್ದು ಕಾಣುತ್ತದೆ. ಜಿಲ್ಲಾ ಪಂಚಾಯತ್ ಅಧಿಕಾರಿಗಳು ಮತ್ತು ಇದಕ್ಕೆ ಸಂಬಂಧಿಸಿದವರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ.

ನೀರಾವರಿ ನಗರವೆಂದು ಖ್ಯಾತವಾದ ನೂತನ ದಾವಣಗೆರೆ ಜಿಲ್ಲಾ ಕೇಂದ್ರದ ಜನತೆಗೆ ಕುಡಿಯಲು ನೀರಿಲ್ಲ ಎನ್ನುವುದು ಪ್ರತಿವರ್ಷ ಬೇಸಿಗೆಯಲ್ಲಿ ಕಂಡುಬರುವ ಚಿತ್ರಣ. ನಗರದ ಬಂಬೂ ಬಜಾರ್, ಆನೆಕೊಂಡಕೆರೆ, ಆಜಾದ್‌ನಗರ, ಟಿಪ್ಪುನಗರ, ಭಾಷಾನಗರ, ಬಸವರಾಜ್‌ಪೇಟೆ, ಚಾಮರಾಜಪೇಟೆ ಇತರ ಸ್ಥಳಗಳಲ್ಲಿ ನಗರಸಭೆ ೭ ದಿನಗಳಿಗೊಮ್ಮೆ ನೀರು ಬಿಡುವುದರಿಂದ ಜನರ ಪರದಾಟ ದಿನದಿಂದ ದಿನಕ್ಕೆ ಉಲ್ಬಣಗೊಳ್ಳುವುದುಂಟು.

ಇಲ್ಲಿನ ನಗರಸಭೆ ಕಾಯ್ದೆ ಪ್ರಕಾರ ೧೦ ಮನೆಗೊಂದು ಸಾರ್ವಜನಿಕ ನಲ್ಲಿ ಇರಬೇಕು. ಆದರೆ ಆ ಪದ್ಧತಿ ಇಲ್ಲಿ ಅನುಸರಿಸಿಲ್ಲ. ಪ್ರತಿನಿತ್ಯ ೧-೨ ಕಿ. ಮೀ. ಹೋಗಿ ಸೈಕಲ್‌ಗಳ ಮೇಲೆ ನೀರು ತುಂಬಿಕೊಂಡು ಬರಬೇಕು. ನಲ್ಲಿ ಇರುವವರನ್ನು ಕಾಡಿ-ಬೇಡಿ ನೀರು ತರಬೇಕೆಂದು ಆನೆಕೊಂಡಕೆರೆಯ ನಿವಾಸಿ ಶ್ರೀಮತಿ ಲೈಲಮ್ಮನವರು ಹೇಳುತ್ತಾರೆ. ೧೯೬೫ ರಿಂದ ಇಂದಿನವರೆಗೆ ಟಿಪ್ಪುನಗರದಲ್ಲಿ ನೀರಿನ ವ್ಯವಸ್ಥೆ ಸಮರ್ಪಕವಾಗಿ ಮಾಡಿಲ್ಲ. ಅನೇಕ ಸಂಘಟನೆಗಳು ಕೂಡಿಕೊಂಡು ಚಳವಳಿ ಮಾಡಿ ಸುಧಾರಣೆ ತರಲು ಪ್ರಯತ್ನಿಸುತ್ತಿವೆ.

ದಾವಣಗೆರೆ ಜಿಲ್ಲಗೆ ಸೇರಿರುವ ಚನ್ನಗಿರಿ ತಾಲೂಕಿನಲ್ಲಿ ಅಂತರ್ಜಲ ಕಡಿಮೆಯಾಗಿದೆ. ವಡ್ನಾಳು, ವಿ. ಬನ್ನಿಹಟ್ಟಿ, ಗೊಪ್ಪೇನಹಳ್ಳಿ, ಪಾಂಡೋಮಟ್ಟಿ, ಯರಗಟಿಹಳ್ಳಿ, ಸಂತೆಬೆನ್ನೂರು, ಮಾದಾಪುರ, ಹೊನ್ನೇಬಾಗಿ, ದೇವರಹಳ್ಳ, ಕಂಜಿಗಾನಾಳು ಗ್ರಾಮಗಳಿಗೆ ನೀರು ಸಿಗುತ್ತಿಲ್ಲ. ಇದೇ ಜಿಲ್ಲೆಯ ಜಗಳೂರು ತಾಲೂಕಿನ ಗ್ರಾಮೀಣ ಪ್ರದೇಶದಲ್ಲಿ ಕೊಳವೆ ಬಾವಿಗಳು ಬತ್ತಿದಾಗ, ಬೇಸಿಗೆಯಲ್ಲಿ ಕುಡಿಯಲು ನೀರಿನ ಅಭಾವ ಉಂಟಾಗುತ್ತದೆ. ಈ ಸಂಬಂಧ ಚಳವಳಿಗಳ ಮೂಲಕ ಜಾಗೃತಗೊಳಿಸಿ ವ್ಯವಸ್ಥೆ ಮಾಡಿಕೊಳ್ಳಲು ಜನರು ಮುಂದಾಗುತ್ತಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು ಮತ್ತು ಹೊಳಲ್ಕೆರೆ ತಾಲೂಕುಗಳಲ್ಲಿ ಕುಡಿಯುವ ನೀರಿಗಾಗಿ ಅನೇಕ ಚಳವಳಿಗಳು ನಡೆದಿವೆ. ಇವು ಗ್ರಾಮ, ತಾಲ್ಲೂಕುಮಟ್ಟಕ್ಕೆ ಸೀಮಿತವಾಗಿರದೆ, ಜಿಲ್ಲಾ ಕೇಂದ್ರದಲ್ಲಿ ಪ್ರತಿಭಟನೆ ನಡೆಸಿದ್ದು ಗಮನಾರ್ಹ. ಚಿತ್ರದುರ್ಗ ನಗರಕ್ಕೆ ವೇದಾವತಿ ನದಿಗೆ ಕಟ್ಟಲಾಗಿರುವ ವಾಣಿವಿಲಾಸ ಜಲಾಶಯದಿಂದ ನೀರು ಪೂರೈಕೆಯಾಗುತ್ತದೆ. ವೇದಾವತಿಯಿಂದ ಸುಮಾರು ೩೦ ಕಿ. ಮೀ. ವ್ಯಾಪ್ತಿಯಿಂದ ಕೊಳವೆಗಳ ಮೂಲಕ ಪ್ರತಿನಿತ್ಯ ನೀರು ಸರಬರಾಜು ಮಾಡಲಾಗುತ್ತದೆ. ಈ ವೇದಾವತಿ ತುಂಬಲಿಲ್ಲವೆಂದರೆ ಎರಡು-ಮೂರು ದಿನಕ್ಕೊಮ್ಮೆ ನಗರಕ್ಕೆ ನೀರು ಬಿಡುವ ಪರ್ಯಾಯ ವ್ಯವಸ್ಥೆ ಮಾಡಲಾಗುತ್ತದೆ. ನಗರದ ಬುರುಜನಪಟ್ಟೆ, ಚೋಳಗುಡ್ಡ, ದೊಡ್ಡಪೇಟೆ, ಹೊರಪೇಟೆ ಮತ್ತು ಜೋಗಿಮಟ್ಟಿ ಬಡಾವಣೆ ಇತರ

ಭಾಗಗಳಲ್ಲಿ ಜನಸಾಮಾನ್ಯರು ನೀರಿಗಾಗಿ ಚಳವಳಿಗಳನ್ನು ಆಗಾಗ ನಡೆಸುವುದು ಕಂಡುಬರುತ್ತದೆ.

ಮೊಳಕಾಲ್ಮೂರು ಪಟ್ಟಣದಲ್ಲಿ ತೀವ್ರವಾದ ನೀರಿನ ಕೊರತೆಯಿದ್ದು, ಸ್ಥಳೀಯವಾಗಿ ಲಭ್ಯವಿರುವ ಉಪ್ಪುನೀರಿನ ವಿರುದ್ಧ ಸಮರ ಹೂಡುತ್ತಾರೆ. ಈ ನೀರನ್ನು ಬದಲಾಯಿಸಲು ಸಾಧ್ಯವಿಲ್ಲ, ಅದು ಪ್ರಕೃತಿಯದು. ಇಲ್ಲಿಗೆ ೨-೩ ಕಿ. ಮೀ. ದೂರವಿರುವ ರೈಲ್ವೆ ಸ್ಟೇಷನ್ ಹತ್ತಿರ ಹೋಗಿ ಸೈಕಲ್‌ಗಳ ಮೇಲೆ ಕೊಡಗಳಲ್ಲಿ ನೀರು ತರಬೇಕಾಗುತ್ತದೆ. ಸರ್ಕಾರಿ ಅಧಿಕಾರಿಗಳು, ಇತರರು ಈ ಪಟ್ಟಣಕ್ಕೆ ಬರಲು ಹೆದರಿಕೊಳ್ಳುತ್ತಾರೆ. ಸ್ಥಳೀಯರು ಪ್ರತಿಭಟನೆ, ಚಳವಳಿಗಳ ಮೂಲಕ ನೀರನ್ನು ಪಡೆಯಲು ವಿಫಲ ಯತ್ನ ನಡೆಸಿರುವರು. ಹೀಗೆ ಉಳಿದ ತಾಲೂಕು ಕೇಂದ್ರಗಳಲ್ಲಿಯೂ ಇಂಥ ಚಿತ್ರಣವಿದೆ.

ದಕ್ಷಿಣ ಭಾರತದ ಚಿರಾಪುಂಜಿ ಎಂದೇ ಖ್ಯಾತವಾದ ಶಿವಮೊಗ್ಗ ಜಿಲ್ಲೆ (ಆಗುಂಬೆ)ಯಲ್ಲಿ ಬೇಸಿಗೆ ಬಂತೆಂದರೆ ನೀರಿನ ಸಮಸ್ಯೆ ಉಂಟಾಗುತ್ತದೆ. ಶಿವಮೊಗ್ಗ ಜಿಲ್ಲೆ ಮಲೆನಾಡು, ಅರೆಮಲೆನಾಡು, ಬಯಲುಸೀಮೆ ಪ್ರದೇಶಗಳನ್ನು ಹೊಂದಿದೆ. ಇಲ್ಲಿ ತುಂಗಾ, ಭದ್ರಾ, ಶರಾವತಿ, ಕುಮದ್ವತಿ ಮತ್ತು ವರದಾ ಪ್ರಮುಖ ನದಿಗಳಾಗಿವೆ. ಶಿಕಾರಿಪುರ, ಭದ್ರಾವತಿಗೆ ನೀರು ಪೂರೈಕೆ ಆಗಬೇಕಾಗಿದೆ. ಹೊಸನಗರ, ತೀರ್ಥಹಳ್ಳಿ, ಸಾಗರ ಮತ್ತು ಸೊರಬಗಳಲ್ಲಿ ನೀರಿನ ಸಮಸ್ಯೆಯನ್ನು ಪ್ರತಿಭಟಿಸಿ ಚಳವಳಿಗಳು ನಡೆದಿವೆ.

ಹೊನ್ನಾಳಿ ತಾಲೂಕಿನ ನ್ಯಾಮತಿ, ಬಸವಾಪುರ, ಮಾವಿನಕೋಟೆ, ಕ್ಯಾಸಿನಕೆರೆ, ಬಿದರಳ್ಳಿ ಇತರ ಗ್ರಾಮಗಳಲ್ಲಿ ನೀರಿನ ಅಭಾವವಿದೆ. ವಿಶ್ವಬ್ಯಾಂಕ್ ಯೋಜನೆಯಿಂದ ಹೈದರಾಬಾದಿನ ಸೂರ್ಯಪ್ರಕಾಶ್‌ರಾವ್ ಕಂಪನಿಗೆ ಗುತ್ತಿಗೆ ನೀಡಿದರೂ, ಶಿವಮೊಗ್ಗದ ನೀರಿನ ಅಭಾವಕ್ಕೆ ಪರಿಹಾರ ದೊರೆತಿಲ್ಲ. ಕ್ರಿ. ಶ. ೧೯೨೬ ಮತ್ತು ೧೯೭೮ರಲ್ಲಿ ಎರಡು ಯೋಜನೆಗಳ ಮೂಲಕ ತುಂಗಾನದಿ ನೀರನ್ನು ಎತ್ತಿ ಕೃಷ್ಣರಾಜೇಂದ್ರ ವಾಟರ್ ವರ್ಕ್ಸ್‌ನಿಂದ ಸರಬರಾಜು ಮಾಡಲಾಗುತ್ತಿತ್ತು. ೧೯೯೦ರಲ್ಲಿ ೫ ಕೋಟಿ ರೂ. ವೆಚ್ಚದಲ್ಲಿ ಗಾಜನೂರು ಅಣೆಕಟ್ಟಿನಿಂದ ೯ ಎಂ.ಜಿ.ಡಿ. ನೀರು ಸರಬರಾಜು ಮಾಡುವ ಯೋಜನೆಯನ್ನು ರೂಪಿಸಿ ೧೯೯೪ರಲ್ಲಿ ಕಾಮಗಾರಿ ಕೈಗೆತ್ತಿಕೊಳ್ಳಲಾಯಿತಾದರೂ, ಕೆಲಸ ಪೂರ್ಣವಾಗಿರಲಿಲ್ಲ. ೧೨.೮೦ ಕೋಟಿ ರೂ. ಖರ್ಚಾಗಿದ್ದು, ಮುಖ್ಯಮಂತ್ರಿ ಜೆ. ಹೆಚ್. ಪಟೇಲ್ ಈಗಾಗಲೇ (೧೯೯೭-೯೮) ಉದ್ಘಾಟಿಸಿದ್ದಾರೆ.

ಭದ್ರಾವತಿಯ ಹಳೆಪಟ್ಟಣದಲ್ಲಿ ನೀರಿನ ಸಮಸ್ಯೆ ಮೊದಲಿನಿಂದಲೂ ಇದೆ. ಇದಕ್ಕಾಗಿ ೯.೪೫ ಲಕ್ಷ ವೆಚ್ಚದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಸಾಗರ ಪಟ್ಟಣಕ್ಕೆ ವರದಾ ನದಿಯಿಂದ ನೀರು ಪೂರೈಕೆ ಮಾಡಲಾಗಿದೆ. ವಿತರಣೆಯಲ್ಲಿ ಸಮಸ್ಯೆಯಿದ್ದು ಹೊಸ ಎರಡು ಓವರ್ ಹೆಡ್ ಟ್ಯಾಂಕ್‌ಗಳನ್ನು ನಿರ್ಮಿಸಲಾಗಿದೆ. ತೀರ್ಥಹಳ್ಳಿ ಪಟ್ಟಣಕ್ಕೆ ತುಂಗಾನದಿಯಿಂದ ನೀರು ಸರಬರಾಜಾಗುತ್ತಿದ್ದು, ಹೊಸ ಬಡಾವಣೆಗಳಿಗೆ ನೀರಿನ ಸಮಸ್ಯೆ ಕಾಡುತ್ತಿದೆ.

ಹೊಸನಗರ ಪಟ್ಟಣಕ್ಕೆ ಶರಾವತಿ ನದಿಯಿಂದ ನೀರು ವಿತರಿಸಲಾಗುತ್ತಿದ್ದು, ವಿತರಣೆಯಲ್ಲಿ ವ್ಯತ್ಯಯವಾಗಿ ಜನರ ಆಕ್ರೋಶ, ಪ್ರತಿಭಟನೆಗೆ ಅಧಿಕಾರಿಗಳು ಸೋತಿದ್ದಾರೆ. ಸೊರಬ ಪಟ್ಟಣಕ್ಕೆ ದಂಡಾವತಿ ನದಿ ಮತ್ತು ಕೊಳವೆ ಬಾವಿ ನೀರು ಬರುತ್ತಿದೆಯಾದರೂ ಜನರಿಗೆ ತೃಪ್ತಿ ತಂದಿಲ್ಲ.

ಶಿಕಾರಿಪುರಕ್ಕೆ ಕುಮದ್ವತಿ ನದಿ ಮತ್ತು ಕೊಳವೆ ಬಾವಿ ನೀರು ಬಿಟ್ಟರೂ, ನೀರಿನ ಸಮಸ್ಯೆಗೆಂದು ೧೧೧೩ ಲಕ್ಷ ರೂ. ವೆಚ್ಚಮಾಡಲಾಗಿದೆ. ಹೊನ್ನಾಳಿಗೆ ತುಂಗಭದ್ರಾ ನದಿಯಿಂದ ನೀರು ಸರಬರಾಜು ಮಾಡಲಾಗುತ್ತದೆ. ಅದೇ ರೀತಿ ಶಿರಾಳಕೊಪ್ಪಕ್ಕೆ ಕೊಳವೆ ಬಾವಿ ಮೂಲಕ ನೀರು ಒದಗಿಸಲಾಗುತ್ತದೆ. ಉಳಿದ ಜಿಲ್ಲೆಗಳಿಗಿಂತ ಶಿವಮೊಗ್ಗ ಜಿಲ್ಲೆ ಕುಡಿಯುವ ನೀರಿನ ಸಮಸ್ಯೆಯನ್ನು ಎದುರಿಸುವುದು ಕಡಿಮೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಐದು ನದಿಗಳು ಹರಿದರೂ ನೀರಿನ ಸಮಸ್ಯೆಯಿದೆ. ಇಲ್ಲಿ ಅತಿವೃಷ್ಟಿ, ಅನಾವೃಷ್ಟಿಯ ಹಾವಳಿಯಿಂದ ನಷ್ಟವಾಗುವುದೇ ಹೆಚ್ಚು. ತುಂಗಾ, ಭದ್ರಾ, ಹೇಮಾವತಿ, ವೇದಾವತಿ, ಯಗಚಿ ಎಂಬ ಐದು ನದಿಗಳಿದ್ದು, ಭದ್ರಾನದಿ ದಡದಲ್ಲಿರುವ ಬಾಳೆಹೊನ್ನೂರಿಗೆ ಕುಡಿಯುವ ನೀರಿನ ಸಮಸ್ಯೆಯಿದೆ. ಪ್ರತಿವರ್ಷ ನೀರಿಗಾಗಿ ಚಳವಳಿ, ಹೋರಾಟಗಳು ನಡೆಯುತ್ತಿರುವುದು ಗಮನಾರ್ಹ.

ಕೊಪ್ಪ ಸಮೀಪ ದೇವಗೋಡು, ಬಾಳೆಹೊನ್ನೂರು, ಚಂಡಗೋಡು ಇತರೆಡೆಗಳಲ್ಲಿ ಕುಡಿಯುವ ನೀರು ಕೆಟ್ಟು ಕಾಲರಾ ಬೇನೆಯಿಂದ ಅನೇಕ ಮಂದಿ ಮಡಿದರು. ಕಡೂರು ತಾಲೂಕಿನ ಯಗಟಿಪುರ ಗ್ರಾಮದ ಜನರು ಜಿಲ್ಲಾ ಪಂಚಾಯತ್ ಕಚೇರಿಗೆ ಬೀಗಹಾಕಿ ಚಳವಳಿ ನಡೆಸಿದ್ದರು. ಕೊನೆಗೆ ಭರವಸೆ ಕೊಟ್ಟಾಗ ಚಳವಳಿ ನಿಲ್ಲಿಸಿದರು. ಚಿಕ್ಕಮಗಳೂರು ನಗರದಲ್ಲಿ ಪ್ರತಿವರ್ಷ ಕುಡಿಯುವ ನೀರಿನ ಸಮಸ್ಯೆ ಮಾಮೂಲು. ನಗರ ಬೆಳೆದಂತೆ ನೀರಿನ ಅಗತ್ಯ ಹೆಚ್ಚುತ್ತದೆ. ಸಣ್ಣ ಕೆರೆಗಳಿಂದ ನೀರು ಪಡೆಯುತ್ತಿದ್ದಾರೆ. ಬೇಸಿಗೆಯಲ್ಲಿ ಎರಡು ದಿನಕ್ಕೊಮ್ಮೆ ನೀರು ಬಿಡಲಾಗುತ್ತದೆ. ಹೀಗಾಗಿ ನೀರಿಗಾಗಿ ಪರದಾಟ ಮುಂದುವರೆದಿದೆ.

ಮಂಡ್ಯ ಜಿಲ್ಲೆಯಲ್ಲಿ ಬೇಸಗೆ ಬಂತೆಂದರೆ ಕೆರೆಕಟ್ಟೆಗಳು ಒಣಗಿ ವಿದ್ಯುತ್ ಕಡಿತದಿಂದ ನೀರು ಪೂರೈಕೆಯಲ್ಲಿ ಸಮಸ್ಯೆ ಆಗುತ್ತದೆ. ಮಳೆಯಾಶ್ರಿತ ಪ್ರದೇಶಗಳಲ್ಲಿ ನೀರಿನ ಸಮಸ್ಯೆ ಇದ್ದೇ ಇದೆ. ಮಳವಳ್ಳಿ ತಾಲೂಕಿನ ಬಿ. ಜಿ. ಪುರ, ಹಲಗೂರು, ಮದ್ದೂರು ತಾಲೂಕಿನ ಆತಗೂರು, ಕೆಸ್ತೂರು, ಕೆ. ಆರ್. ಪೇಟೆ ತಾಲೂಕಿನ ಬೂಕನಕೆರೆ, ಶೀಳನೆಲೆ, ಕಿಕ್ಕೇರಿ, ಪಾಂಡವಪುರ ತಾಲೂಕಿನ ಮೇಲುಕೋಟೆ, ಚಿನಕುರುಳಿ, ನಾಗಮಂಗಲ ತಾಲೂಕಿನ ಬಿಂಡಿಗನವಿಲೆ, ಬೆಳ್ಳೂರು ಹೋಬಳಿ ಮತ್ತು ಶ್ರೀರಂಗಪಟ್ಟಣ, ಮಂಡ್ಯ ತಾಲೂಕಗಳ ಹಳ್ಳಿಗಳಲ್ಲಿ ಪ್ರತಿವರ್ಷ ನೀರಿನ ಸಮಸ್ಯೆ ಎದುರಾಗುತ್ತದೆ. ಮಳವಳ್ಳಿಯ ಬಿ. ಜಿ. ಪುರ ಹಲಗೂರು ಹೋಬಳಿಗಳಲ್ಲಿ ನೀರಿನ ಸಮಸ್ಯೆ ತೀವ್ರವಾಗಿತ್ತು. ಕೊಳವೆಬಾವಿ ನೀರು ಸಮರ್ಪಕವಾಗಿಲ್ಲದ ಕಾರಣ ಹಳ್ಳಿಗಳಲ್ಲಿ ಜ್ವಲಂತ ಸಮಸ್ಯೆಯಾಗಿದೆ.

ಮಂಡ್ಯಕ್ಕೆ ಶ್ರೀರಂಗಪಟ್ಟಣದ ಸಮೀಪ ಕಾವೇರಿ ನದಿಯಿಂದ ನೀರು ಸರಬರಾಜು ಮಾಡುತ್ತಾರೆ. ಹೆಚ್ಚಾಗಿ ವಿಶ್ವೇಶ್ವರಯ್ಯ ಸೀಳುನಾಲೆಯಿಂದ ನೀರನ್ನು ಪಡೆಯಲಾಗುತ್ತದೆ. ಪ್ರತಿವರ್ಷ ಬೇಸಗೆಯಲ್ಲಿ ನೀರಿನ ವ್ಯವಸ್ಥೆ ಬಗ್ಗೆ ತಕರಾರಿರುವುದು ಸಾಮಾನ್ಯ.

ಬೆಳಗಾವಿ ಜಿಲ್ಲೆಯಲ್ಲಿ ಸಹ ನೀರಿನ ಕೊರತೆಯಿದೆ. ಬೆಳಗಾವಿನಗರಕ್ಕೆ ರಕ್ಕಸಕೊಪ್ಪ ಜಲಾಶಯದಿಂದ ನೀರು ಬಿಡಲಾಗುವುದು. ಪ್ರತಿವರ್ಷ ಜುಲೈ-ಆಗಸ್ಟ್‌ನಲ್ಲಿ ಇದು ತುಂಬುತ್ತದೆ. ಇಲ್ಲಿನ ಇಂಡಾಲ್ ಮತ್ತು ದಂಡು ಪ್ರದೇಶಗಳಿಗೆ ಹೆಚ್ಚಿನ ನೀರು ಬೇಕೆಂದು ಚಳವಳಿಗಳು ನಡೆದಿವೆ. ಇತ್ತೀಚೆಗೆ ರಕ್ಕಸಕೊಪ್ಪದಿಂದ ನೀರು ಪೂರೈಕೆ ಆಗುವುದಿಲ್ಲವೆಂದು

ಘಟಪ್ರಭಾ ನದಿಯ ಹಿಡ್ಕಲ್ ಜಲಾಶಯದಿಂದ ಕುಡಿಯುವ ನೀರು ಪಡೆಯುತ್ತಾರೆ. ೧೯೯೧ರಲ್ಲಿ ಮುಖ್ಯಮಂತ್ರಿ ಎಸ್. ಬಂಗಾರಪ್ಪ ಅಡಿಗಲ್ಲು ಇಟ್ಟರೂ. ೧೯೯೬ಕ್ಕೆ ಮುಗಿಯಬೇಕಿದ್ದ ಯೋಜನೆ ಮುಗಿದಿಲ್ಲ. ಬೆಳಗಾವಿ ಜಿಲ್ಲೆಯ ಕುಡಚಿ, ಕೊಣ್ಣೂರು, ಮೂಲಿ ಪಟ್ಟಣಗಳಿಗೆ ಕೃಷ್ಣಾ ಇಲ್ಲದೆ ಘಟಪ್ರಭಾ ನದಿನೀರು ಪೂರೈಸುವ ಯೋಜನೆ ಪರಿಶೀಲನೆಯಲ್ಲಿದೆ.

ಉತ್ತರ ಕರ್ನಾಟಕದ ಅವಳಿ ನಗರಗಳಾದ ಹುಬ್ಬಳ್ಳಿ-ಧಾರವಾಡಗಳಿಗೆ ನೀರಿನ ಸಮಸ್ಯೆ ಕಾಡದೇ ಬಿಟ್ಟಿಲ್ಲ. ಈ ಎರಡು ನಗರಗಳ ಜನಸಂಖ್ಯೆ ಸು. ೬ ಲಕ್ಷವಿದೆ. ಕೈಗಾರಿಕೆ ಇತ್ಯಾದಿ ಯೋಜನೆಗಳಿಗೆ ಇಲ್ಲಿನ ನೀರು ಅಗತ್ಯವಿದೆ. ಹೀಗಾಗಿ ಮಲಪ್ರಭಾ ನದಿನೀರಿನ ಎರಡು ಹಂತಗಳಿಂದ ಧಾರವಾಡ ಹಾಗೂ ಹುಬ್ಬಳ್ಳಿಗೆ ನೀರು ಒದಗಿಸಲಾಗುತ್ತದೆ. ೧೯೫೬ರಲ್ಲಿ ನೀರಸಾಗರ ಯೋಜನೆ ಕ್ರಮೇಣ ನೀರಿನ ಸಾಮರ್ಥ್ಯವನ್ನು ಕಳೆದುಕೊಂಡಿತು. ನಾಗರಿಕರು ನೀರಿಗಾಗಿ ಚಳವಳಿ ಮಾಡುತ್ತಾ, ಸಮಸ್ಯೆಗೆ ಪರಿಹಾರ ಕಂಡುಕೊಂಡರು. ಇದೇ ಜಲಾಶಯದಿಂದ ಕುಂದಗೋಳ ಪಟ್ಟಣಕ್ಕೂ ನೀರು ಒದಗಿಸಲಾಗುತ್ತದೆ. ಕ್ರಿ. ಶ. ೨೦೦೦-೧ರ ವೇಳೆಗೆ ಜನಸಂಖ್ಯೆ ೭ ಲಕ್ಷ ಆಗುತ್ತದೆಂಬ ಅಂದಾಜಿನಂತೆ ೧೦ ಕೋಟಿ ರೂ. ಖರ್ಚುಮಾಡಿ ಯೋಜನೆ ರೂಪಿಸಿದೆ. ೧೯೭೯, ೧೯೮೩ರಲ್ಲಿ ನೀರಿಗಾಗಿ ಚಳವಳಿಗಳು ಸಂಭವಿಸಿದ್ದವು. ದಿನಕಳೆದಂತೆ ಮಲಪ್ರಭಾ ನೀರು ಪೂರೈಕೆ ಕೊಳವೆ ಮಾರ್ಗಗಳು ಆಗಾಗ ಸೋರುವುದರಿಂದ ನಗರಕ್ಕೆ ನೀರು ಪೂರೈಕೆ ವ್ಯತ್ಯಯವಾಗುತ್ತದೆ. ೧೯೮೫ರ ನಂತರ ಈ ಸಮಸ್ಯೆ ನಿರಂತರವಾಗಿದೆ. ಕೊಳವೆ ಸೋರಿಕೆಯಿಂದ ೧೯೯೬ರಲ್ಲಿ ೩ ದಿನಗಳಿಗೊಮ್ಮೆ ನೀರು ಬಿಡುವಂತಾಯಿತು. ನೀರಿಗಾಗಿ ಜನರ ಪರದಾಟ ಹೆಚ್ಚಾಯಿತು. ಮೇಯರ್ ಪಾಂಡುರಂಗ ಪಾಟೀಲ್, ಅಧಿಕಾರಿಗಳು ಜನರ ಸಮಸ್ಯೆಗೆ ಸ್ಪಂದಿಸಿದರು. ಗ್ರಾಮೀಣ ಪ್ರದೇಶದ ಸಮಸ್ಯೆ ಹೆಚ್ಚಾಗಿದ್ದು, ಮಲಪ್ರಭಾದ ೩ನೇ ಹಂತದ ನೀರಿನ ಯೋಜನೆ, ಹುಬ್ಬಳ್ಳಿಗೆ ಉಣಕಲ್ ಕೆರೆನೀರು ಹೀಗೆ ನವಲುಗುಂದ, ಜಮಖಂಡಿ, ಮಹಲಿಂಗಪುರ ಇತರ ಸ್ಥಳಗಳಿಗೆ ನೀರು ಪೂರೈಕೆಯಾಗಿದೆ.

ಬಿಜಾಪುರ ಜಿಲ್ಲೆ ತಾಳಿಕೋಟೆ, ಬೀಳಗಿ ಪಟ್ಟಣಗಳಿಗೆ ಕೃಷ್ಣಾನದಿಯಿಂದ ಮತ್ತು ಇಂಡಿಗೆ ಭೀಮಾನದಿಯಿಂದ ನೀರೊದಗಿಸಲು ಕಾರ್ಯಾರಂಭವಾಗಿದೆ. ಹಾಗೆಯೇ ಬಾಗಲಕೋಟೆ ಜಿಲ್ಲೆಯ ಇಳಕಲ್, ಹುನಗುಂದ ಗುಲ್ಬರ್ಗಾ ಜಿಲ್ಲೆಯ ನಾರಾಯಣಪುರ, ಕೊಪ್ಪಳ ಜಿಲ್ಲೆಯ ಕುಷ್ಟಗಿ ಇವುಗಳಿಗೆ ಕೃಷ್ಣಾ ಜಲಾಶಯದಿಂದ ಅಥವಾ ಹಿನ್ನೀರಿನಿಂದ ನೀರು ಪೂರೈಸಲು ಯೋಜನೆ ಆರಂಭಿಸಲಾಗುತ್ತದೆ.

ಗದಗ ಜಿಲ್ಲೆಯಲ್ಲಿ ಕುಡಿಯುವ ನೀರಿನ ಸಮಸ್ಯೆ ಶಾಶ್ವತವಾಗಿದೆ. ಇಲ್ಲಿನ ಗ್ರಾಮೀಣ ಭಾಗಗಳಲ್ಲಿ ನೀರಿನ ಹಾಹಾಕಾರವುಂಟು. ಕೆರೆ ನೀರು ಬತ್ತಿದರೆ ಪರದಾಟ, ಗೋಳಾಟ ಎದ್ದುಕಾಣುತ್ತದೆ. ಹಿಂದೆ ನೀರಸಾಬ್ ಎಂದೇ ಪ್ರಸಿದ್ಧರಾದ ನಜೀರಸಾಬ್ ಪ್ರತಿ ಗ್ರಾಮಕ್ಕೆ ನೀರಿನ ಯೋಜನೆ ಮಾಡಿದ್ದರು. ಇದರಿಂದ ಗದಗ ಜಿಲ್ಲೆ ಪ್ರಯೋಜನ ಪಡೆದಿದೆ. ಆದರೂ ಸಮಸ್ಯೆ ಉಲ್ಬಣಗೊಂಡಿದ್ದು ದುರದೃಷ್ಟಕರ. ಗದಗ ಬರಗಾಲ ಜಿಲ್ಲೆಯಾಗಿದ್ದು, ಮುಂಡರಗಿ, ರೋಣ, ಲಕ್ಷ್ಮೇಶ್ವರ, ಶಿರಹಟ್ಟಿ ಇತರೆಡೆ ನೀರಿಗಾಗಿ ಚಳವಳಿಗಳು ನಡೆದಿವೆ.

ನೂತನ ಜಿಲ್ಲಾ ಕೇಂದ್ರವಾದ ಹಾವೇರಿ ನಗರದಲ್ಲಿ ವಾರಕ್ಕೊಮ್ಮೆ ನೀರು ಪೂರೈಸುವ ವ್ಯವಸ್ಥೆ ಬೇಸಗೆಯಲ್ಲಿರುತ್ತದೆ. ಹಾವೇರಿಗೆ ವರದಾ ನದಿಯಿಂದ ನೀರೊದಗಿಸುವುದಾಗಿ

ಜೆ. ಹೆಚ್. ಪಟೇಲ್ ಹೇಳಿದ್ದರು. ಇನ್ನು ಸಫಲವಾಗಿಲ್ಲ. ಹಾನಗಲ್ ನಗರದಲ್ಲಿ ಎರಡು ದಿನಕ್ಕೊಮ್ಮೆ ನೀರು ಪಡೆದು ತೃಪ್ತಿ ಪಡೆಯುತ್ತಾರೆ. ರಾಣಿಬೆನ್ನೂರಲ್ಲಿ ಸಹ ವಾರಕ್ಕೊಮ್ಮೆ ನೀರು ಬರುವುದು ಬೇಸಗೆಯ ಸಾಮಾನ್ಯ ಚಿತ್ರಣ. ಸವಣೂರ ಇತರ ಭಾಗಗಳಲ್ಲಿ ನೀರಿನ ಸಮಸ್ಯೆ ತೀವ್ರವಾಗಿರುತ್ತದೆ. ಹಾವೇರಿ ಜಿಲ್ಲೆಯಲ್ಲಿ ವರದಾ, ತುಂಗಾ, ಧರ್ಮಾ ನದಿಗಳಿದ್ದರೂ ಚಳವಳಿಗಳಿಗೆ ಲೆಕ್ಕವಿಲ್ಲ.

ದಕ್ಷಿಣಕನ್ನಡ ಜಿಲ್ಲೆಯಲ್ಲಿ ೨೨ ನದಿಗಳು ಹರಿದರೂ ಬಾಯಾರಿದವರ ಬವಣೆ ಎದ್ದುಕಾಣುತ್ತದೆ. ಪಕ್ಕದಲ್ಲಿ ಸಮುದ್ರ, ೨೨ ನದಿಗಳು, ಬಾವಿಗಳು, ಕೊಳವೆ ಬಾವಿ, ಕೆರೆ-ಕಟ್ಟೆಗಳಿದ್ದರೂ ಕುಡಿಯುವ ನೀರು ಸಿಗುತ್ತಿಲ್ಲ. ಬೆಳ್ತಂಗಡಿ, ಬಂಟ್ವಾಳ ಹಾಗೂ ಸುಳ್ಯಗಳಲ್ಲಿ ಕುಡಿಯುವ ನೀರಿನ ಬವಣೆಯಿದೆ. ಉಡುಪಿ, ಮಂಗಳೂರು, ಕದ್ರಿ ಇತರ ಸ್ಥಳಗಳಿಗೆ ಕುಡಿಯುವ ನೀರಿನ ಸೌಲಭ್ಯ ಒದಗಿಸಲು ಯೋಜನೆ ರೂಪಿಸಿದೆ. ಅದು ಅಂತರ್ಜಲ ಹೆಚ್ಚಿಸಲು ಸಾಮೂಹಿಕ ನೀರಾವರಿ ಯೋಜನೆ, ಜವಾಹರ್ ರೋಜಗಾರ್ ಯೋಜನೆ, ಭೂಸಾರ ಸಂರಕ್ಷಣಾಯೋಜನೆ ಕೈಗೊಳ್ಳಲು ಯೋಜಿಸಿದೆ.

ಉತ್ತರಕನ್ನಡ ಜಿಲ್ಲೆಯಲ್ಲಿ ೫-೬ ನದಿಗಳಿದ್ದರೂ ನಾಗರಿಕರು ನೀರಿಗಾಗಿ ಪ್ರತಿಭಟಿಸುವ ಚಿತ್ರಣ ಸಾಮಾನ್ಯವಾಗಿದೆ. ಕಾಳಿ, ಗಂಗಾವಳಿ, ಶರಾವತಿ, ಅಘನಾಶಿನಿ, ವೆಂಕಟಾಪುರ ಮತ್ತು ವರದಾ ನದಿಗಳು ಹರಿಯುತ್ತವೆ. ಇಂದಿಗೂ ಇವುಗಳಿಂದ ನೀರು ಸಂಗ್ರಹಿಸುವಾಗ ಕೊರತೆ ಕಾಣುತ್ತೇವೆ. ನೀರಾವರಿ ಯೋಜನೆಗಳು ಸಫಲವಾಗಿಲ್ಲದ ಕಾರಣ ನೀರಿನ ಸಮಸ್ಯೆ ಉಲ್ಬಣಗೊಳ್ಳುತ್ತದೆ.

ಬೆಂಗಳೂರು ಜಿಲ್ಲೆ ಉತ್ತರ-ಪಶ್ಚಿಮ ಭಾಗಕ್ಕೆ ತಿಪ್ಪಗೊಂಡನಹಳ್ಳಿ ಜಲಾಶಯ ದಿಂದಲೇ ನೀರು ಒದಗಿಸಲಾಗುತ್ತದೆ. ಬೇಸಿಗೆಯಲ್ಲಿ ಇದು ಬತ್ತಿ ಹೋದಾಗ ಕುಡಿಯುವ ನೀರಿನ ಸಮಸ್ಯೆ ಕಂಡುಬರುತ್ತದೆ. ಪ್ರತಿದಿನ ಬೆಂಗಳೂರು ನಗರಕ್ಕೆ ಕಾವೇರಿಯಿಂದ ೫೬೦ ದಶಲಕ್ಷ ಲೀಟರ್ ಮತ್ತು ತಿಪ್ಪಗೊಂಡನಹಳ್ಳಿ ಜಲಾಶಯದಿಂದ ೨೦.೫ ದಶಲಕ್ಷ ಲೀಟರ್ ನೀರು ಪೂರೈಕೆಯಾಗುತ್ತದೆ. ರಾಜಾಜಿನಗರ, ಮಲ್ಲೇಶ್ವರ, ಗೃಹಮಂಡಲಿ ಕಾಲೋನಿ, ಮಂಜುನಾಥನಗರ, ದಾಸರಹಳ್ಳಿ, ಮಹಾಲಕ್ಷ್ಮಿಲೇಔಟ್, ಪಶ್ಚಿಮ ಕಾರ್ಡ್ ರಸ್ತೆ ಹಾಗೂ ದಕ್ಷಿಣ ಭಾಗದ ಕೆಲವು ಹಳೆಯ ಬಡಾವಣೆಗಳಿಗೆ ನೀರು ಸಮರ್ಪಕ ಪೂರೈಕೆಯಾಗದಿದ್ದಾಗ ಚಳವಳಿ ನಡೆಸುತ್ತಾರೆ.

ಕೋಲಾರ ಜಿಲ್ಲೆ ಬಂಗಾರದ ಬೀಡಾದರೂ ಬೇಸಿಗೆಯಲ್ಲಿ ಹತ್ತೂ ದಿನಗಳಿಗೊಮ್ಮೆ ನೀರು ಬಿಡುವುದು ನೋಡಿದರೆ ಸೋಜಿಗವಾಗುತ್ತದೆ. ಇಲ್ಲಿ ಕೆರೆ, ಕುಂಟೆಗಳು ಒಣಗಿದ್ದು, ಅಂತರ್ಜಲ ಕುಸಿದಿದ್ದು, ಬಾವಿಗಳು ಬತ್ತತೊಡಗಿವೆ. ಅತೀ ಹೆಚ್ಚು ಕೊಳವೆ ಬಾವಿಗಳನ್ನು ಹೊದಿರುವ ಹೆಗ್ಗಳಿಗೆ ಈ ಜಿಲ್ಲೆಯದು. ಯಾವುದೇ ಜೀವನದಿ ಇಲ್ಲದೆ, ಮಳೆಯನ್ನೇ ನಂಬಿ ಬದುಕುವ ಪರಿಸ್ಥಿತಿ ನಿರ್ಮಾಣವಾಗಿದೆ. ಚಿಕ್ಕಬಳ್ಳಾಪುರ, ಚಿಂತಾಮಣಿ, ಗೌರಿಬಿದನೂರು, ಕೋಲಾರ, ಮಾಲೂರು, ಮುಳಬಾಗಿಲು ಹಾಗೂ ಶಿಡ್ಲಘಟ್ಟ ತಾಲ್ಲೂಕುಗಳನ್ನು ಕಪ್ಪು ಪ್ರದೇಶವೆಂದು, ಶ್ರೀನಿವಾಸಪುರ ತಾಲೂಕನ್ನು ಬೂದು ಪ್ರದೇಶವೆಂದು ವಿಂಗಡಿಸಿದೆ. ಶಿಡ್ಲಘಟ್ಟದಲ್ಲಿ ವಾರಕ್ಕೊಮ್ಮೆ ನೀರು  ಬಿಟ್ಟರೆ, ಚಿಕ್ಕ ಬಳ್ಳಾಪುರಕ್ಕೆ ನೀರಿನ ಹಂಚಿಕೆಯಲ್ಲಿ ಅವ್ಯವಸ್ಥೆಯಿದೆ. ಕೆ. ಜಿ. ಎಫ್. ಪಟ್ಟಣಕ್ಕೆ

ಬೇತಮಂಗಲ ಕೆರೆಯಿಂದ ನೀರು ಬಿಡುತ್ತಾರೆ. ಮುಳಬಾಗಿಲು, ಶ್ರೀನಿವಾಸಪುರ ಮತ್ತು ಚಿಂತಾಮಣಿ ಪಟ್ಟಣಗಳು ನಾಲ್ಕರಿಂದ - ಐದು ದಿನಗಳಿಗೊಮ್ಮೆ ಬೇಸಗೆಯಲ್ಲಿ ನೀರು ಕಾಣುತ್ತವೆ. ಕೋಲಾರ ನಗರಕ್ಕೆ ಅಮ್ಮೇರಹಳ್ಳಿ ಕೆರೆಯಿಂದ ನೀರು ಬಿಡುತ್ತಾರೆ.

ಹೀಗೆ ಕರ್ನಾಟಕದ ೨೭ ಜಿಲ್ಲೆಗಳಿಗೆ ಸಮರ್ಪಕ ಕುಡಿಯುವ ನೀರಿನ ಯೋಜನೆ ಮಾಡಿಲ್ಲ. ಈ ಕಾರಣಗಳಿಂದ ನಾಗರೀಕರು ಅಧಿಕಾರ ಶಾಹಿಗಳ ವಿರುದ್ಧ ಪ್ರತಿಭಟನೆ, ಚಳವಳಿಗಳನ್ನು ಮಾಡುತ್ತಾ ಬಂದಿದ್ದಾರೆ. ಇತ್ತೀಚೆಗೆ ಕರ್ನಾಟಕ ಸರ್ಕಾರ ಉತ್ತರ ಕರ್ನಾಟಕದ ಪ್ರಮುಖ ನಗರಗಳಿಗೆ ಶಾಶ್ವತ ನೀರು ಪೂರೈಕೆ ಮಾಡುವ ಯೋಜನೆ ರೂಪಿಸಿದೆ. ಬೀದರ್‌ಗೆ ಮಂಜರಾ ನದಿನೀರಿನ ಯೋಜನೆಯು ಎರಡನೇ ಹಂತ ಮುಗಿಯುವ ಘಟ್ಟದಲ್ಲಿದೆ. ಹಾವೇರಿ ಜಿಲ್ಲೆಯ ಶಿಗ್ಗಾವಿ, ಸವಣೂರು, ರಾಣೆಬೆನ್ನೂರುಗಳಿಗೆ ಇದೇ ವರ್ಷ ನೀರು ಪೂರೈಕೆ ಆರಂಭಿಸಲಾಗಿದೆ. ಉಳಿದಂತೆ ಬೀದರ, ಗುಲಬರ್ಗಾ, ಹುಬ್ಬಳ್ಳಿ, ಧಾರವಾಡ, ಗದಗ, ಬಳ್ಳಾರಿ, ಮಂಡ್ಯ ಸೇರಿದಂತೆ ಅನೇಕ ನಗರಗಳಿಗೆ ನೀರು ಪೂರೈಕೆ ಯೋಜನೆ ರೂಪಿಸಲಾಗಿದೆ. ಇದರಿಂದ ನಗರಗಳ ನೀರಿನ ಸಮಸ್ಯೆ ತಕ್ಕಮಟ್ಟಿಗೆ ಕಡಿಮೆಯಾಗುತ್ತದೆ. ಆಂಧ್ರದಲ್ಲಿ ಸಾಯಿಬಾಬ ಹೆಸರಿನಿಂದ ಕುಡಿಯುವ ನೀರಿನ ಪೂರೈಕೆ ಮಾಡಿದಂತೆ ಕರ್ನಾಟಕದಲ್ಲಿ ಮಾಡಿದರೆ ಸಾಮಾನ್ಯ ಸಮಸ್ಯೆಗಳು ಪರಿಹಾರವಾಗುತ್ತವೆ. ಬಳ್ಳಾರಿ ಜಿಲ್ಲೆಗೆ ೩೦೦ ಕೋಟಿ ರೂ. ವೆಚ್ಚದಲ್ಲಿ ಕುಡಿಯುವ ನೀರಿನ ಯೋಜನೆಗೆ ಸಾಯಿಬಾಬಾ ಸಂಸ್ಥೆಯವರು ಮಾಡಲು ಸಹಕರಿಸಿದ್ದಾರೆ. ಹೀಗೆ ಕುಡಿಯುವ ನೀರಿನ ಸಮಸ್ಯೆ ನಿರಂತರವಾಗಿರುವುದರಿಂದ ಚಳವಳಿಗಳಿಗೆ ಕೊನೆಯಿಲ್ಲದಂತಾಗಿದೆ.

❑❑

# ೮. ಸಮಾರೋಪ

ಕರ್ನಾಟಕದ ಜಲಸಂಬಂಧಿ ಚಳವಳಿಗಳು ನಾನಾ ರೀತಿಯ ಪರಿವರ್ತನೆಗೆ ಪೂರಕವಾಗಿದ್ದವು. ಕೃಷಿಕ್ಷೇತ್ರದಲ್ಲಾದ ಬದಲಾವಣೆ ವಿವಿಧ ಕ್ಷೇತ್ರಗಳಿಗೆ ಆವರಿಸಿತು. ನೀರು ಕೃಷಿಗಷ್ಟೇ ಸೀಮಿತವಾಗದೇ ಉದ್ದಿಮೆ, ಕೈಗಾರಿಕೆ ಮೊದಲಾದವುಗಳ ಉಪಯೋಗಕ್ಕೆ ಬಂತು. ರೈತರು ಹೆಚ್ಚಾಗಿ ನೀರನ್ನೇ ಅವಲಂಬಿಸಿರುವುದರಿಂದ ನೀರಿನ ಹಂಚಿಕೆಗಾಗಿ ಚಳವಳಿಗಳು ಸಂಭವಿಸಿರುವುದು ಸ್ಮರಣೀಯ. ನೀರಿನ ಅಗತ್ಯಕ್ಕೆ ಬೇಡಿಕೆ ರೂಪದಲ್ಲಿ ಚಳವಳಿ ನಡೆಸಿದರೆ, ವಿತರಣೆ ಅವಧಿಯಲ್ಲಿ ವ್ಯತ್ಯಾಸದಿಂದ ಅವ್ಯಾಹತವಾಗಿ ಈ ಚಳವಳಿಗಳು ನಡೆಯುತ್ತವೆ. ಇವುಗಳ ಇತಿಹಾಸವು ಬಹಳ ಹಿಂದಿನ ಕಾಲಕ್ಕೆ ಹೋಗುತ್ತದೆ.

ಭಾರತದಲ್ಲಿ ನೀರಾವರಿಯ ಉಪಯೋಗ ಸಿಂಧೂ ಬಯಲಿನ ನಾಗರಿಕತೆಯಿಂದ ಆರಂಭವಾದರೆ, ದಕ್ಷಿಣ ಭಾರತದಲ್ಲಿ ಮಾತ್ರ ಬೃಹತ್ ಶಿಲಾ ಸಂಸ್ಕೃತಿಯ ಕಾಲವೆಂದು ತಿಳಿಸಲಾಗಿದೆ. ವೇದಗಳ ಕಾಲದ ಸಂಸ್ಕೃತಿ, ನಗರೀಕರಣ, ಐತಿಹಾಸಿಕ ರಾಜ ವಂಶಗಳ ವಿವಿಧ ಕಾಲಘಟ್ಟಗಳಲ್ಲಿ ನದಿ-ನೀರಿನ ಪಾತ್ರ ವಿಶಿಷ್ಟವಾದದು. ಇಂದು ಇವುಗಳಿಂದ ಕೃಷಿ, ನೀರಾವರಿ, ಮೀನುಗಾರಿಕೆ, ವಿದ್ಯುತ್ ಉತ್ಪಾದನೆ, ತೋಟಗಾರಿಕೆ, ಮತ್ತು ಉದ್ಯಾನವನಗಳನ್ನು ನಿರ್ಮಿಸುವುದು ನೋಡಿದರೆ ಮಹಾ ಪರಿವರ್ತನೆಯೇ ಆಗಿರುವುದು ಸ್ಪಷ್ಟ.

ದಖನ್ ಪ್ರಸ್ಥಭೂಮಿಯ ಮಧ್ಯದಲ್ಲಿರುವ ಕರ್ನಾಟಕ ಎಲ್ಲ ದೃಷ್ಟಿಯಿಂದಲೂ ಸುರಕ್ಷಿತ ಹಾಗೂ ಸಮೃದ್ಧವಾಗಿರುವ ರಾಜ್ಯ. ನದಿ ಹಾವಳಿ, ಸಮುದ್ರಕೊರೆತ, ಚಂಡಮಾರುತ ಇತ್ಯಾದಿ ಅತಿವೃಷ್ಟಿ - ಅನಾವೃಷ್ಟಿಗೆ ಸಿಲುಕುವುದು ಕಡಿಮೆ.

ಕರ್ನಾಟಕದಲ್ಲಿ ಜಲಸಂಪತ್ತಿನ ಪ್ರಯೋಜನ ಆದಿಯಿಂದಲೂ ಅನೂಚಾನವಾಗಿ ಬಳಕೆಯಲ್ಲಿದೆ. ಇತಿಹಾಸಪೂರ್ವ ಕಾಲದಲ್ಲಿ ಮಾನವ ಆಹಾರನಿಮಿತ್ತ ನೀರನ್ನು ಬಳಸಿಕೊಂಡು ಕೃಷಿಗೆ ನಾಂದಿ ಹಾಡಿದ. ರಾಮಾಯಣ, ಮಹಾಭಾರತಗಳ ಕಾಲದಿಂದಲೂ ನೀರಾವರಿ ಬಗೆಗೆ ಜನರು ಆಸಕ್ತಿ ಹೊಂದಿದ್ದರು. ರಾಜವಂಶಗಳ ಆಳ್ವಿಕೆಯಲ್ಲಿಯೂ ನೀರಿಗಾಗಿ ಪೈಪೋಟಿ ಇದ್ದಿರಲೇಬೇಕು. ಐತಿಹಾಸಿಕವಾಗಿ ಸಂಗಮ ಕಾಲ, ಮೌರ್ಯರು, ಶಾತವಾಹನರು, ಗಂಗರು, ಕದಂಬರು, ಇಕ್ಷ್ವಾಕು, ಪಾಂಡ್ಯರು, ಪಲ್ಲವರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಚೋಳರು, ಹೊಯ್ಸಳರು, ವಾರಂಗಲ್ಲಿನ ಕಾಕತಿಯರು, ವಿಜಯನಗರ, ಮೈಸೂರು ಸಂಸ್ಥಾನ ಮತ್ತು ಬ್ರಿಟಿಷರ ಅವಧಿಯಲ್ಲಿ ಕೈಗೊಂಡ ನೀರಾವರಿ ಕಾರ್ಯಗಳು ಗಮನಾರ್ಹವಾದವು. ಇವರು ಕೆರೆಗಳನ್ನೂ ಕಟ್ಟಿಸಿ, ಬಾವಿಗಳನ್ನು ತೋಡಿಸಿದ್ದು ಕಂಡುಬರುತ್ತದೆ. ಮೇಲಿನ ರಾಜವಂಶಗಳ ಆಳ್ವಿಕೆಯ ಸಂದರ್ಭಗಳಲ್ಲಿ ನದಿ ನೀರಿಗಾಗಿ ಕದನ, ಹೋರಾಟ, ಯುದ್ಧಗಳು ನಡೆದಿವೆ. ಉದಾ : ಕಾವೇರಿ ನದಿಯನ್ನು ಗಡಿ

ಮಾಡಿಕೊಂಡು ನೀರಾವರಿ ಸೌಲಭ್ಯ ವಿಸ್ತರಿಸಲು ಚೋಳರು ಮತ್ತು ಪಾಂಡ್ಯರು ಮೊದಲಿನಿಂದಲೂ ಹೋರಾಡುತ್ತಿದ್ದರು. ಕೇಶಿರಾಜನ ಶಬ್ದಮಣಿ ದರ್ಪಣದಲ್ಲಿ ಬರುವ 'ಕಾವೇರಿಯು ಕಾಲನಾತಿವೃಕನಂ ಕದಂಗೊಂಡನೋ ಬದ್ದಿಗೊಂಡನೋ' ಎಂಬ ಮಾತು ಗಮನಾರ್ಹ.

ಕೆರೆ, ಕಟ್ಟೆ, ಗೋಕಟ್ಟೆಗಳನ್ನು ಜನಪ್ರತಿನಿಧಿಗಳು ಆದಿಯಿಂದಲೂ ನಿರ್ಮಿಸಿಕೊಂಡು ಬಂದಿದ್ದಾರೆ. ಸಮುದ್ರ, ನದಿ, ಸರೋವರಗಳ ಮೂಲಕ ಸಿಗುವ ನೀರಿನ ಸೌಲಭ್ಯವನ್ನು ತಕ್ಕಮಟ್ಟಿಗೆ ಪಡೆಯಲಾಗಿದೆ. ಕೆರೆ, ಕಟ್ಟೆ, ನೀರಾವರಿ ಬಗ್ಗೆ ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಉಲ್ಲೇಖಿಸಲಾಗಿದ್ದು, ದುರಸ್ತಿ ಮತ್ತು ಜೀರ್ಣೋದ್ಧಾರ, ಹೂಳೆತ್ತುವ ಸಂಗತಿಗಳು ಸೇರಿವೆ.

ಬ್ರಿಟಿಷರು ವಸಾಹತುಶಾಹಿ ಆರಂಭಿಸಿದ ತರುವಾಯ ಹೆಚ್ಚು ಲಾಭತರುವ ಯೋಜನೆಗಳನ್ನು ರೂಪಿಸಿದರು. ಹೀಗಾಗಿ ಸಣ್ಣ-ಪುಟ್ಟ ನೀರಾವರಿ ಯೋಜನೆಗಳನ್ನು ಅಲಕ್ಷಿಸಿದ್ದರೆಂದರೆ ತಪ್ಪಲ್ಲ. ಬೃಹತ್ ನೀರಾವರಿಗೆ ಒತ್ತುಕೊಟ್ಟು, ಆ ಮೂಲಕ ಅಭ್ಯುದಯವನ್ನು ಸಾಧಿಸಿದರು. ಭಾರತದಲ್ಲಿ ಅತೀ ಹೆಚ್ಚು ನದಿಗಳಿದ್ದರೂ ಸಮುಪಯೋಗ ಪಡೆದುಕೊಳ್ಳುವುದು ಕಡಿಮೆ. ಉತ್ತರ ಭಾರತದ ನದಿಗಳು ನೀರಾವರಿಗೆ ಯೋಗ್ಯವಾಗಿವೆ. ಇವು ಜೀವ ನದಿಗಳು. ಮಳೆಗಾಲದಲ್ಲಿ ಮಳೆ, ಬೇಸಿಗೆಯಲ್ಲಿ ಮಂಜು ಕರಗುವುದರಿಂದ ರೈತನಿಗಷ್ಟೆ ಅಲ್ಲದೆ ಸರ್ವ ಉಪಯೋಗಕ್ಕೆ ಜೀವದಾನವಾಗಿವೆ. ಅವುಗಳಲ್ಲಿ ಸಿಂಧೂ, ಗಂಗಾ, ಬ್ರಹ್ಮಪುತ್ರಾ, ಮಹಾನದಿ, ಸಟ್ಲೆಜ್ ಪ್ರಮುಖ ನದಿಗಳಾಗಿವೆ. ಇಲ್ಲಿ ಹಿರಾಕುಡ್ ಮತ್ತು ಭಾಕ್ರಾನಂಗಲ್ ಅಣೆಕಟ್ಟುಗಳು ಖ್ಯಾತಿ ಪಡೆದಿರುವುದುಂಟು.

ದಕ್ಷಿಣ ಭಾರತದಲ್ಲಿ ಮಳೆ ಬಂದರೆ ಮಾತ್ರ ನದಿ, ಕೆರೆ, ಕಟ್ಟೆಗಳಲ್ಲಿ ನೀರು ಬರುತ್ತದೆ. ಮಳೆಯಿಲ್ಲದಿದ್ದರೆ ಪ್ರಾಣಿ, ಪಕ್ಷಿಗಳ ಜೀವ ಸಂಕುಲಗಳು ವಲಸೆ ಹೋಗಲು ಹವಣಿಸುತ್ತವೆ. ಮಳೆಗಾಲದಲ್ಲಿ ಸಾಮಾನ್ಯವಾಗಿ ನದಿಗಳು ತುಂಬಿ ಹರಿಯುವುದು ಸಹಜ. ಇಂದು ನೀರಿನ ಉಪಯೋಗವು ಕ್ರಮೇಣ ದ್ವಿಗುಣಗೊಂಡಿದೆ. ಬ್ರಿಟಿಷರು, ಅರಸರು ಕೈಗೊಂಡ ನೀರಾವರಿ ಯೋಜನೆಗಳಿಂದ ಅಷ್ಟೇನು ಲಾಭದಾಯಕ ಕೃಷಿಯಾಗಿಲ್ಲ.

ಸ್ವಾತಂತ್ರ್ಯ ನಂತರ ಭಾರತ ಸರ್ಕಾರ ಪಂಚವಾರ್ಷಿಕ ಯೋಜನೆಗಳ ಮೂಲಕ ನೀರಾವರಿ ಯೋಜನೆಗಳನ್ನು ಕೈಗೊಂಡಿತಲ್ಲದೆ, ಪ್ರತಿಯೊಂದು ಯೋಜನೆಗೂ ಅಪಾರ ಹಣ ವ್ಯಯಿಸಿತು. ನೀರಾವರಿ ಅಭಿವೃದ್ಧಿ ಕುರಿತು ಜವಾಹರಲಾಲ್ ನೆಹರು 'ಅಣೆಕಟ್ಟುಗಳು ಆಧುನಿಕ ದೇವಾಲಯಗಳು' ಎಂದಿರುವುದರಲ್ಲಿ ನೀರಾವರಿ ಅಭಿವೃದ್ಧಿಯ ಅಂಶ ಅಡಗಿದೆ. ಅಣೆಕಟ್ಟುಗಳಿಂದ ಸಮೃದ್ಧವಾದ ಬೆಳೆ, ಜೀವನವನ್ನು ಪಡೆಯಬಹುದು. ಈ ಎಲ್ಲಾ ಹಿನ್ನೆಲೆಗಳಿಂದ ನೀರು ಅತ್ಯಮೂಲ್ಯ ಸಂಪನ್ಮೂಲವಾಗಿದೆ. ಇದಕ್ಕಾಗಿ ಅನೇಕ ಯೋಜನೆಗಳನ್ನು ಕೈಗೊಂಡರು.

ಕರ್ನಾಟಕದಲ್ಲಿ ಕೃಷ್ಣಾ ನದಿ ಜಾಲ, ಕಾವೇರಿ ನದಿಜಾಲ, ಗೋದಾವರಿ ನದಿಜಾಲ, ಪಾಲಾರ್-ಪೆನ್ನಾರ್‌ನದಿ ಜಾಲವೆಂದು ಜಲ ಸಂಪತ್ತನ್ನು ವಿಂಗಡಿಸಿದ್ದಾರೆ. ಪಶ್ಚಿಮ ಘಟ್ಟಗಳಲ್ಲಿ ಹುಟ್ಟುವ ನದಿಗಳು ಹೆಚ್ಚಾಗಿ ಅರಬ್ಬಿ ಸಮುದ್ರವನ್ನು ಸೇರುತ್ತವೆ. ಕೆಲವು ಮಾತ್ರ ಬಯಲು ಸೀಮೆಯಲ್ಲಿ ಹರಿದು, [illegible] ಬಂಗಾಳ ಕೊಲ್ಲಿಯನ್ನು

ಸೇರುತ್ತವೆ. ಸು. ೫೦ಕ್ಕೂ ಹೆಚ್ಚು ನದಿಗಳಿದ್ದು, ಇವುಗಳಿಂದ ನೀರು ಸಂಗ್ರಹಿಸಲು ಬೃಹತ್, ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳಿವೆ. ಇವುಗಳಿಂದ ನೀರಾವರಿ ಸೌಲಭ್ಯವು ಉತ್ತಮವಾಗಿದೆ. ನೀರಾವರಿ ಯೋಜನೆಗಳ ಪೈಕಿ ಕಾವೇರಿ (ಕೆ.ಆರ್.ಎಸ್.), ಕೃಷ್ಣಾ ಮತ್ತು ತುಂಗಭದ್ರಾ ನದಿಗಳಿಂದ ಹೆಚ್ಚಿನ ಪ್ರಯೋಜನವಿದೆ. ಹೆಚ್ಚಿನ ಮತ್ತು ಲಭ್ಯವಿರುವ ತಮ್ಮ ಪಾಲಿನ ನೀರಿಗಾಗಿ ಚಳವಳಿಗಳನ್ನು ಮಾಡುತ್ತಾ ಬಂದಿದ್ದಾರೆ ಈ ಕಣಿವೆಗಳ ರೈತರು.

ಇತರ ಕೆಲವು ಯೋಜನೆಗಳೆಂದರೆ : ವಾಣಿವಿಲಾಸಸಾಗರ, ಹೇಮಾವತಿ, ಕಬಿನಿ, ಹಾರಂಗಿ, ಚಿಕ್ಲಿಹೊಳೆ, ಅರ್ಕಾವತಿ, ತಾರಕಾ, ಉಡುತೊರೆಹಳ್ಳ, ವರುಣನಾಲೆ, ಮಂಚನಬಿಲೆ, ಇಗ್ಗಲೂರು ಬ್ಯಾರೇಜ್, ವಾಟೇಹೊಳೆ, ಯಗಚಿ, ಕಾಮಸಮುದ್ರ, ಹುಚ್ಚನಕೊಪ್ಪ, ಮಲಪ್ರಭಾ, ಘಟಪ್ರಭಾ, ದೂಧಗಂಗಾ, ಹಿಪ್ಪರಗಿ, ಮಹಾದಾಯಿ, ಹಿರೇನಾಲಾ, ಮಸ್ಕಿನಾಲಾ, ಹಿರೇಹಳ್ಳ, ಭದ್ರಾ, ತುಂಗಾ, ರಾಣಿಕೆರೆ, ವರಾಹಿ, ಬಸಾಪುರ, ಇಟಗಿ ಸಾಸಲವಾಡ, ಹೋದರಾಯನಹಳ್ಳಿ, ಕಾರಂಜಾ, ಬೆಣ್ಣೆತೊರಾ, ಅಮರ್ಜಾ, ಮುಲ್ಲಾಮಾರಿ ಮೇಲ್ದಂಡೆ, ಮುಲ್ಲಾಮಾರಿ ಕೆಳದಂಡೆ, ಚುಳಕಿ ನಾಲಾ, ಗಂಡೋರಿನಾಲಾ, ಭೀಮಾ, ಕೃಷ್ಣಾ ಮೇಲ್ದಂಡೆ ಇತರ ಅನೇಕ ಪ್ರಮುಖ ಯೋಜನೆಗಳಿಂದ ಈಗಾಗಲೇ ನೀರಾವರಿ ಕೃಷಿಯಾಗುತ್ತಿದೆ. ಇನ್ನು ಕೆಲವು ಯೋಜನೆಗಳ ಮೂಲಕ ನೀರಾವರಿ ಅಭಿವೃದ್ಧಿ ಮಾಡುವ ಕೆಲಸ ಆಗಬೇಕಿದೆ. ಯಾವುದೇ ಯೋಜನೆ, ಅಣೆಕಟ್ಟು, ಜಲಾಶಯ ನಿರ್ಮಿಸಿದರು ಆ ಪ್ರದೇಶ ಬರಡು ಭೂಮಿಯಾಗಿಯೇ ಉಳಿಯುತ್ತದೆ. ನದಿಯ ಹರಿವು, ಕಾಲುವೆಗಳು ಇಳಿಜಾರಿನ ಕಡೆ ಇರುವುದರಿಂದ ಅಣೆಕಟ್ಟಿನ ಇಕ್ಕೆಲಗಳ ಎತ್ತರದ ಪ್ರದೇಶಕ್ಕೆ ನೀರು ಹಾಯಿಸುವ ಪ್ರಯತ್ನ ಮಾಡಬೇಕು. ಇದರಿಂದ ಅನೇಕ ರೈತರ ನಿರಾಶೆ ಈಡೇರುತ್ತದೆ. ಇಲ್ಲಿ ನೀರಿನ ಉಪಯೋಗವು ಕೃಷಿಗಿಂತ ಕುಡಿಯಲು ಬಳಸುವುದು ಹೆಚ್ಚು. ಜಲಾಶಯದ ಹಿಂದಿನ ಅತೀ ದೂರದ ಪ್ರದೇಶಕ್ಕೆ ನೀರು ಹರಿಯುತ್ತದೆ. ತಮಿಳುನಾಡು ಆಂಧ್ರ ಪ್ರದೇಶದಲ್ಲಿ ನೀರಿನ ಸಂಪೂರ್ಣ ಸದುಪಯೋಗವಾಗಿದೆ. ಉದಾ : ತುಂಗಭದ್ರಾ ನದಿಯ ನೀರು ಅತೀ ದೂರ ಹರಿದು ಆಂಧ್ರದ ನೀರಾವರಿಗೆ ಕರ್ನಾಟಕಕ್ಕಿಂತ ಹೆಚ್ಚಿನ ಅನುಕೂಲವಾಗಿದೆ. ಇಂದು ಕರ್ನಾಟಕ ಶೇ. ೨೦ ರಷ್ಟು ನೀರನ್ನು ಪಡೆಯುತ್ತದೆ ವಿದ್ಯುತ್ ಸಹಾ ಅಷ್ಟೆ, ಆಂಧ್ರಕ್ಕೆ ಹೆಚ್ಚಾಗಿ ಸರಬರಾಜಾಗುತ್ತಿದೆ ಎಂಬ ಆರೋಪವಿದೆ. ಈ ಜಲಾಶಯದ ಹಿಂದಿರುವ ಹೊಸಪೇಟೆ, ಮಲಪನಗುಡಿ, ಕಮಲಾಪುರ ಇತರ ಸ್ಥಳಗಳ ಒಣ ಭೂಮಿಗೆ ನೀರಾಯಿಸಿಕೊಳ್ಳಲು ಆಗುತ್ತಿಲ್ಲ. ೫೦ ವರ್ಷಗಳಾದರೂ ನೀರಿನ ಸದುಪಯೋಗ ಮಾಡಿಕೊಂಡಿಲ್ಲದಿರುವುದು ಖೇದಕರ.

ಕರ್ನಾಟಕದಲ್ಲಿ ೧೪೬ ಕ್ಕೂ ಹೆಚ್ಚು ನೀರಾವರಿ ಯೋಜನೆಗಳಿದ್ದರೂ, ಇನ್ನೂ ನೀರಿನ ಅವಶ್ಯಕತೆ ಎದ್ದುಕಾಣುತ್ತದೆ. ಎರಡು-ಮೂರು ಸಹಸ್ರಾರು ಟಿ.ಎಂ.ಸಿ. ನೀರಿದ್ದರೂ ಸಂಪೂರ್ಣ ಕರ್ನಾಟಕವನ್ನು ನೀರಾವರಿಗೊಳಪಡಿಸುವುದು ಕಷ್ಟ. ಉತ್ತರದಲ್ಲಿ ಕೃಷ್ಣಾಮೇಲ್ದಂಡೆ, ದಕ್ಷಿಣದಲ್ಲಿ ಕೃಷ್ಣರಾಜಸಾಗರ ನದಿಯೋಜನೆಗಳಿಂದ ಸಮೃದ್ಧ ನೀರಾವರಿಯಾಗುವುದು ಸಹಜ. ಬಯಲು ಸೀಮೆಯಲ್ಲಿ ನೀರಿನ ಹಾಹಾಕಾರ ಮುಗಿಲು ಮುಟ್ಟುತ್ತದೆ. ಕೃಷಿಗೆ ಅಣೆಕಟ್ಟುಗಳಿಂದ ನೀರಿನ ಅನಿವಾರ್ಯತೆ ಹೆಚ್ಚು. ನೀರಿಲ್ಲದೆ ಬಳ್ಳಾರಿ,

ತುಮಕೂರು, ಚಿತ್ರದುರ್ಗ ಜಿಲ್ಲೆಗಳ ರೈತರು ನೀರಾವರಿ ಯೋಜನೆಗಳಿಗೆ ಆಗ್ರಹ ಪಡಿಸುತ್ತಿದ್ದಾರೆ. ಪ್ರಸ್ತುತ ಯೋಜನೆಗಳಿಂದ ನೀರು ಸಿಗದಿದ್ದರೆ, ಮತ್ತೊಂದು ಯೋಜನೆ ಮೂಲಕ ವ್ಯವಸ್ಥೆ ಮಾಡಬೇಕಿದೆ. ಇಂದಿನ ನೀರಾವರಿ ಯೋಜನೆಗಳು ಕೇವಲ ರಾಜಕೀಯ ಭರವಸೆಗಳಾಗಿವೆ. ಉದಾ: ತುಂಗಾ ಮೇಲ್ದಂಡೆ ಯೋಜನೆ. ದಶಕಗಳ ಹಿಂದಿನಿಂದ ಆರಂಭಿಸಲು ಉದ್ದೇಶಿಸಿದ್ದರೂ ಕೆಲಸ ಆರಂಭಿಸಿಲ್ಲ.

ನೀರಾವರಿ ಯೋಜನೆಗಳನ್ನು ಕೈಗೊಳ್ಳುವಾಗ ಯಾವುದೇ ಸ್ವಾರ್ಥ ಇರಬಾರದು. ಮತ್ತು ಪ್ರಾದೇಶಿಕ ವೈವಿಧ್ಯತೆ, ಜನಾಂಗಿಕ ತಾರತಮ್ಯ, ಧಾರ್ಮಿಕ ಮತಾವಲಂಬನೆಯನ್ನು ಪ್ರೋತ್ಸಾಹಿಸಬಾರದು. ಈ ಎಲ್ಲಾ ದೃಷ್ಟಿಯಿಂದಲೂ ನೀರಾವರಿ ಯೋಜನೆಗಳು ಅಭಿವೃದ್ಧಿಗೆ ಪೂರಕವಾಗಿವೆ. ಏಕೀಕರಣೋತ್ತರ ಸಂದರ್ಭದಲ್ಲಿ ನೀರು ರಾಜಕೀಯ ಅಸ್ತ್ರವಾದುದು ವಿಚಿತ್ರ. ಗಡಿಮೀರಿ ಹರಿವ ನದಿಗಳಿಂದ ಎರಡು ರಾಜ್ಯಗಳಿಗೆ ವಿವಾದ ಏರ್ಪಟ್ಟು ಶತಮಾನಗಳು ಕಳೆದರೂ ಸಮಸ್ಯೆ ಪರಿಹಾರವಾಗಿಲ್ಲ.

ನದಿನೀರು ವಿವಾದ ಕುರಿತಂತೆ ಚಳವಳಿಗಳು ಇಂದು ಸಂಭವಿಸುತ್ತವೆ. ಕಾವೇರಿ ಜಲವಿವಾದವು ಇದರಲ್ಲಿ ಪ್ರಮುಖವಾದದು. ಮದ್ರಾಸ್ ಅಧಿಪತ್ಯ ಮತ್ತು ಮೈಸೂರು ಸಂಸ್ಥಾನದವರು ಒಪ್ಪಂದ ಮಾಡಿಕೊಂಡು ಕೃಷ್ಣರಾಜಸಾಗರ ಅಣೆಕಟ್ಟನ್ನು ನಿರ್ಮಿಸಿದಾಗಿನಿಂದಲೂ ವಿವಾದದ ಅಲೆ ನಿಂತಿಲ್ಲ. ೧೮೮೧ರಲ್ಲಿ ಮೈಸೂರು ರಾಜರ ಪತ್ರದ ಮೂಲಕ ಜಲವಿವಾದ ಆರಂಭವಾಗುತ್ತದೆ. ಇದಕ್ಕೂ ಮೊದಲು ೧೮೭೬-೭೮ರಲ್ಲಿ ಕ್ಷಾಮ ಬಂದಾಗಲೂ ವಾಣಿವಿಲಾಸಸಾಗರ ಅಣೆಕಟ್ಟನ್ನು ನಿರ್ಮಿಸಲು ಯೋಜನೆ ರೂಪಿಸಿದರು. ಇದರಂತೆ ಕಾವೇರಿಗೆ ದಿವಾನ ಶೇಷಾದ್ರಿ ಅಯ್ಯರ್ ಕ್ರಮ ಕೈಗೊಂಡಾಗ ಮದ್ರಾಸ್ ಪ್ರಾಂತದಿಂದ ೧೮೯೦ರಲ್ಲಿ ತೀವ್ರ ಆಕ್ಷೇಪ ಬಂತು. ಆ ಪ್ರಕಾರ ೧೮೯೨ರಲ್ಲಿ ಒಪ್ಪಂದವಾಯಿತು. ಯಾವುದೇ ಸಂದರ್ಭದಲ್ಲಿ ಮದ್ರಾಸ್ ಪ್ರಾಂತದ ಅನುಮತಿ ಪಡೆದು ನೀರಾವರಿ ಕಾಮಗಾರಿಗಳನ್ನು ಕೈಗೊಳ್ಳಬೇಕೆಂದು ಹೇಳಿತು. ಎಚ್. ಡಿ. ಗ್ರಿಫಿತ್ ಎಂಬುವನು ಮಧ್ಯಸ್ಥಿಕೆ ವಹಿಸಿದ್ದನು. ಆ ಪ್ರಕಾರ ೧,೫೦,೦೦೦ ಎಕರೆಗೆ ನೀರಾವರಿ ಮಾಡುವ ಉದ್ದೇಶವಿತ್ತು. ೧೯೧೧ರಲ್ಲಿ ಕಣ್ಣಂಬಾಡಿ ಅಣೆಕಟ್ಟು ಪೂರ್ಣಗೊಂಡ ನಂತರ ೧೯೨೪ರಲ್ಲಿ ಮೈಸೂರಿಗೆ ಒಪ್ಪಂದವಾಯಿತು. ತಮಿಳುನಾಡು ಭವಾನಿ, ಅಮರಾವತಿ, ನೊಯಿಲ್ ಉಪನದಿಗಳ ಬಳಕೆಗೆ ಅವಕಾಶ ನೀಡಿದರು. ೧೯೬೮ರಲ್ಲಿ ಹಾರಂಗಿಗೆ ಅನುಮತಿ ಪಡೆಯಲು ಮದ್ರಾಸ್ ಹೈಕೋರ್ಟ್‌ಗೆ ಹೋದರು. ೧೯೭೨ರಲ್ಲಿ ನ್ಯಾಯಾಲಯ ಖಟ್ಲೆಯನ್ನು ಹಿಂದೆ ಪಡೆಯಿತು. ಇದೇ ವರ್ಷ ಸತ್ಯಶೋಧಕ ಸಮಿತಿ (ಅಹುಜಾ)ಯು ೪೮೯ ಟಿ.ಎಂ.ಸಿ. ತಮಿಳುನಾಡು, ೧೭೭ ಟಿ.ಎಂ.ಸಿ. ಕರ್ನಾಟಕ, ೫ ಟಿ.ಎಂ.ಸಿ. ಕೇರಳಕ್ಕೆ ವಿಂಗಡಿಸಿತು. ಇದರಂತೆ ಒಟ್ಟು ೭೪೦ ಟಿ.ಎಂ.ಸಿ. ಕಾವೇರಿಯಿಂದ ಪ್ರಯೋಜನಕ್ಕೆ ಬಂತು.

ಕಾವೇರಿ ನೀರಿನ ಸವಿ ಕಂಡ ತಮಿಳುನಾಡು ಹೆಚ್ಚಿನ ನೀರಿಗೆ ವಾಮಮಾರ್ಗ ಹಿಡಿಯಿತು. ಸತ್ಯಶೋಧಕ ಸಮಿತಿ ರಚಿಸಿದ ನಂತರ ಕರ್ನಾಟಕಕ್ಕೆ ಕೊಟ್ಟ ನೀರಿನ ಪ್ರಮಾಣದ ವಿರುದ್ಧ ತಮಿಳುನಾಡು ಹೋರಾಟ ಆರಂಭಿಸಿತು. ಕರ್ನಾಟಕದ ಉದಾರತೆಯಿಂದ ಆಗುವ ಅನಾಹುತಗಳನ್ನು ತಪ್ಪಿಸಲು ಕಾವೇರಿ ನ್ಯಾಯಮಂಡಳಿ ರಚನೆಗೆ

ಒತ್ತಾಯಿಸಿದೆ. ಕೃಷ್ಣಾನದಿ ವಿಷಯಕ್ಕೂ ರೈತರು, ಸಂಘಟನೆಗಳು ವಿರೋಧಿಸಿದವು. 'ಕನ್ನಡ ಶಕ್ತಿ ಕೇಂದ್ರವು ಕೇಂದ್ರದ ಏಕ ಪಕ್ಷೀಯ ನಿಲುವನ್ನು ಪ್ರತಿಭಟಿಸಿ ಎಲ್ಲ ಸಂಸತ್ ಸದಸ್ಯರು ರಾಜಿನಾಮೆ ಕೊಡಲು ಸೂಚಿಸಿತು.'[೫೮]

ಅಂತರರಾಜ್ಯ ಜಲವಿವಾದಕ್ಕೆ ೧೯೬೫ರಲ್ಲಿ ಕಾನೂನಿನ ಅಂಗೀಕೃತ ರೂಪಸಿಕ್ಕಿತು. ಮೊದಲಿಂದಲೂ ನದಿಮೇಲ್ದಂಡೆ ಮತ್ತು ಕೆಳದಂಡೆಗಳಿಂದ ಕರ್ನಾಟಕಕ್ಕೆ ಅನ್ಯಾಯವಾಗುತ್ತಿತ್ತು. ಎಲ್ಲ ರಾಜ್ಯಗಳಿಗೂ ನ್ಯಾಯ ಒದಗಿಸಲು ಹೊಸದಾಗಿ ಅಂತರರಾಜ್ಯ ಜಲನೀತಿ ಆಗುವವರೆಗೂ ನ್ಯಾಯ ಮಂಡಳಿ ಬೇಡವೆಂದು ನೀರಾವರಿ ಸಚಿವ ಮನುಬಾಯಿ ಕೊತಾಡಿಯಾಗೆ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಪತ್ರಬರೆದರು.

ಮಾರ್ಚ್ ೧೭, ೧೯೯೦ ರಂದು ಕಾವೇರಿಯಿಂದ ಕರ್ನಾಟಕಕ್ಕೆ ನ್ಯಾಯ ದೊರೆಯುವುದೇ ಎಂಬ ಸಾರ್ವಜನಿಕ ಸಭೆ ಹಮ್ಮಿಕೊಂಡಿದ್ದರು. ಬಾಳೇಕುಂದ್ರಿ, ಎಚ್. ಎನ್. ನಂಜೇಗೌಡ, ಅಬ್ದುಲ್ ಬಷೀರ್, ಶಂಕರ್‌ರಾವ್, ವಿ. ಎಸ್. ಕೃಷ್ಣಯ್ಯರ್ ಈ ಸಭೆಯಲ್ಲಿ ಕಾವೇರಿ ನೀರಿನ ಮೇಲೆ ಸಂಪೂರ್ಣ ಹಕ್ಕು ಕರ್ನಾಟಕಕ್ಕೆ ಇದೆ ಎಂದು ಪ್ರತಿಪಾದಿಸಿದರು.

ಪ್ರತಿಭಟನೆಗಳ ನಡುವೆ ೫-೫-೧೯೯೦ ರಂದು ಸುಪ್ರೀಂ ಕೋರ್ಟ್ ಕಾವೇರಿ ನ್ಯಾಯ ಮಂಡಲಿಯನ್ನು ರಚಿಸಲು ಸೂಚಿಸಿತು. ಮಂಡ್ಯ ಭಾಗದ ರೈತರು ಇದನ್ನು ವಿರೋಧಿಸಿದರು. ಜೂನ್ ೩ ರಂದು ಕೇಂದ್ರ ಸರ್ಕಾರ ಈ ಮಂಡಲಿಗೆ ಒಪ್ಪಿ ಅಧ್ಯಕ್ಷರನ್ನು ನೇಮಿಸಿತು.

ಇದನ್ನು ವಿರೋಧಿಸಿ ಕರ್ನಾಟಕದ ಪ್ರತಿನಿಧಿಗಳು ರಾಜಿನಾಮೆ ಕೊಡಬೇಕೆಂದು ಚಿದಾನಂದ ಮೂರ್ತಿ ಒತ್ತಾಯಿಸಿದರು. ಕೇಂದ್ರ ಸಚಿವ ಗುರುಪಾದಸ್ವಾಮಿ, ಯೋಜನಾ ಆಯೋಗದ ಉಪಾಧ್ಯಕ್ಷ ರಾಮಕೃಷ್ಣ ಹೆಗಡೆ, ಜನತಾದಳದ ಅಧ್ಯಕ್ಷ ಬೊಮ್ಮಾಯಿ ಮೊದಲಾದವರ ರಾಜಿನಾಮೆಗೆ ಅವರು ಪ್ರೇರೇಪಿಸಿದರು. ಮಂಡ್ಯದ ಎಂ. ಪಿ. ಮಾದೇಗೌಡರು ಮಾತ್ರ ರಾಜಿನಾಮೆ ನೀಡಿದರಲ್ಲಿ ಪ್ರಮುಖರೆನ್ನಬಹುದು. ಅಂದು ಬೃಹತ್ ಜಾಥಾ, ರಸ್ತೆ ತಡೆ ಇತರ ಚಳವಳಿಗಳು ನಡೆದವು.

ತಮಿಳುನಾಡಿಗೆ ೫ ಟಿ.ಎಂ.ಸಿ. ನೀರನ್ನು ಬಿಡಲು ಪಂಚಾಯ್ತಿ ಹೇಳಿದಾಗ ಕರ್ನಾಟಕ ತಿರಸ್ಕರಿಸಿತು. ನ್ಯಾಯ ಮಂಡಲಿಯ ಮಧ್ಯಂತರ ಆದೇಶ ತನ್ನ ವ್ಯಾಪ್ತಿಗೆ ಬರುವುದಿಲ್ಲವೆಂದು ತಮಿಳುನಾಡಿನ ಕೋರಿಕೆಯನ್ನು ತಳ್ಳಿ ಹಾಕಿತು. ನ್ಯಾಯ ಮಂಡಲಿ ಜೂನ್ ೯೧ ರಂದು ಮಧ್ಯಂತರ ತೀರ್ಪನ್ನು ನೀಡಿತು. ಇದರಿಂದ ಕರ್ನಾಟಕದ ಕಾವೇರಿ ಕೊಳ್ಳ ಒಣ ಭೂಮಿಯಾಗುತ್ತದೆಂಬ ಹೆದರಿಕೆಯಿತ್ತು. ಈ ಅವೈಜ್ಞಾನಿಕ ತೀರ್ಪಿನಿಂದ ಬೆಳೆಗಳಿಗೆ ಮಾರಕವಾಗಿತ್ತು. ಗೆಜೆಟ್‌ನಲ್ಲಿ ಪ್ರಕಟಿಸುವುದು ಬೇಡವೆಂದು ಪ್ರಧಾನಿ ಪಿ. ವಿ. ನರಸಿಂಹ ರಾವ್‌ರಿಗೆ ಸಚಿವ ಸಂಪುಟದ ನಿಯೋಗ ತಿಳಿಸಿತು.

ಡಿಸೆಂಬರ್ ೧೧, ೧೯೯೧ ಕೇಂದ್ರ ಸರ್ಕಾರ ಕಾವೇರಿ ನ್ಯಾಯ ಮಂಡಳಿಯ ಮಧ್ಯಂತರ ತೀರ್ಪನ್ನು ಗೆಜೆಟ್‌ನಲ್ಲಿ ಪ್ರಕಟಿಸಲು ತಿಳಿಸಿತು. ಮೈಸೂರು, ಮಂಡ್ಯದ ವಿದ್ಯಾರ್ಥಿಗಳು ಇದನ್ನು ವಿರೋಧಿಸಿ ಚಳವಳಿ ನಡೆಸಿದರು. ಬೆಂಗಳೂರಿನಲ್ಲಿ ಎಲ್ಲ ಪಕ್ಷಗಳು ಸೇರಿ ಡಿಸೆಂಬರ್ ೧೩, ೧೯೯೧ ರಂದು ಕರ್ನಾಟಕ ಬಂದ್ ನಡೆಸಿದವು. ಬೆಂಗಳೂರಿನಲ್ಲಿ

ತಮಿಳರಿಗೂ, ಕನ್ನಡಗರಿಗೂ ಘರ್ಷಣೆಗಳು ನಡೆದಾಗ ೧೬ ಜನ ಇದರಲ್ಲಿ ಮಡಿದರು ಮತ್ತು ಅಪಾರ ನಷ್ಟವಾಯಿತು. ಕಾವೇರಿ ಗಲಭೆ, ಹಿಂಸಾಚಾರವನ್ನು ಕಂಡ ತಮಿಳರು ಅಮಾನವೀಯ ಕೃತ್ಯವೆಂದು ಬಣ್ಣಿಸಿದರು. ಶಕ್ತಿಕೇಂದ್ರ ವಾಸ್ತವಾಂಶಗಳನ್ನು ಸಂಗ್ರಹಿಸಿ: ವಲಸಿಗರ ದಬ್ಬಾಳಿಕೆಯಿಂದ ನೊಂದ ಕನ್ನಡಿಗರ ಆಕ್ರೋಶ ಎಂದು ತಿಳಿಸಿತು. ನ್ಯಾ. ಎನ್. ಡಿ. ವೆಂಕಟೇಶ್ ಆಯೋಗ ಇದನ್ನು ಅಧ್ಯಯನ ಮಾಡಿ ವರದಿ ಸಲ್ಲಿಸಲು ನೇಮಕವಾಗಿತ್ತು.

ಎಸ್. ಜಿ. ಬಾಳೇಕುಂದ್ರಿ ರಚಿಸಿದ 'ಕಾವೇರಿ ಜಲ ಕರ್ನಾಟಕಕ್ಕಾಗಿರುವ ಅನ್ಯಾಯ ಮತ್ತು ದೊರಕಬೇಕಾದ ನ್ಯಾಯ' ಪುಸ್ತಕದ ಹತ್ತು ಸಾವಿರ ಪ್ರತಿಗಳನ್ನು ಜನರಿಗೆ ತಲುಪಿಸಿದಂತೆ, ಇತರ ಅನೇಕ ಸಂಘಟನೆಗಳು ಇಂತಹ ಕೆಲಸ ಮಾಡಿದ್ದು ಸ್ಪಷ್ಟ. ಮಧ್ಯಂತರ ವರದಿಗೆ ಪ್ರಧಾನಿ ನೀರು ಬಿಡಲು (ತಮಿಳುನಾಡಿಗೆ) ಹೇಳಿದಾಗ ರಾಜಕೀಯಗೊಂಡು ಬಂಗಾರಪ್ಪ ರಾಜಿನಾಮೆ ಕೊಡಬೇಕಾಯಿತ್ತು. ತರುವಾಯ ವೀರಪ್ಪಮೊಯಿಲಿ ಮುಖ್ಯಮಂತ್ರಿಯಾದರು. ನಂತರ ಕನ್ನಡ ಸಂಘಟನೆಗಳು ಸೇರಿ ವಿಚಾರಗೋಷ್ಠಿ ನಡೆಸಿದವು. ಜೀವರಾಜ ಆಳ್ವ, ಯಡಿಯೂರಪ್ಪ, ಕೆ. ಎನ್. ನಾಗೇಗೌಡ, ಸಿ. ಭೈರೇಗೌಡ, ಬಷೀರ್ ಹುಸೇನ್, ಎಂ. ಬಸಪ್ಪರೆಡ್ಡಿ ಮೊದಲಾದವರು ಭಾಗವಹಿಸಿದ್ದರು.

ಕೃಷ್ಣಾ, ಕಾವೇರಿ ನದಿನೀರು ವಿವಾದಗಳಿಗೆ ಅನೇಕ ಸಂಘಟನೆಗಳು ೧೯೯೨ರಲ್ಲಿ ಬೃಹತ್ ಚಳವಳಿ ನಡೆಸಿದವು. ೩೧-೩-೧೯೯೩ರಲ್ಲಿ ಕಾವೇರಿ ಸಮಸ್ಯೆ ನಡುವೆಯು ಕೃಷ್ಣಾನದಿ ವಿಚಾರದಲ್ಲಿ ಬಚಾವತ್ ತೀರ್ಪಿನಂತೆ ೨೦೦೦ಕ್ಕೆ ಕರ್ನಾಟಕ ನೀರುಪಡೆಯಲು ಹಾರ್ನಳ್ಳಿ ರಾಮಸ್ವಾಮಿ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದರು.

ಚಲನಚಿತ್ರ, ರಾಜಕೀಯ ಕ್ಷೇತ್ರಗಳಿಗಿಂತ ಕಾವೇರಿ ವಿವಾದದಲ್ಲಿ ಜನಪ್ರಿಯಗೊಂಡವಳು ಜಯಲಲಿತಾ. ಇವಳು ಕಾವೇರಿ ನೀರಿಗಾಗಿ ನಡೆಸಿದ ಹೋರಾಟ ದಾಖಲಾರ್ಹವಾಗಿದೆ. ಮುಖ್ಯಮಂತ್ರಿಯಾಗಿದ್ದಾಗ ಜುಲೈ ೧೯೯೩ರಲ್ಲಿ ಉಪವಾಸ ನಿರಶನ ಮಾಡಿ ಕಾವೇರಿ ನ್ಯಾಯ ಮಂಡಲಿಯ ಮಧ್ಯಂತರ ತೀರ್ಪನ್ನು ಅನುಷ್ಠಾನ ಗೊಳಿಸಲು ಒತ್ತಾಯಿಸಿದಳು. ಇವಳಿಗೆ ಬೆಂಬಲಿಸಿದ ಶ್ರೀದೇವಿ, ರಜನಿಕಾಂತ್‌ರ ಚಿತ್ರಗಳನ್ನು ಕನ್ನಡಿಗರು ಬಹಿಷ್ಕರಿಸಿದ್ದು ಮೆಚ್ಚತಕ್ಕ ಸಂಗತಿ. ರಾಷ್ಟ್ರೀಯ ಜಲನೀತಿ ಬಗ್ಗೆ, ಕಾವೇರಿ ಪ್ರಾಧಿಕಾರ ರಚನೆ ಬಗ್ಗೆ ಎಲ್ಲರಿಗೂ ಜಿಜ್ಞಾಸೆಗಳಿದ್ದರೂ. ಜನರಿಗೆ ಅನುಕೂಲ ವಾಗುವಂತ ಪರಿಹಾರ ವಿಧಾನಗಳ ಅಗತ್ಯವಿದೆ ಎಂಬುದು ಸ್ಪಷ್ಟ.

ಕೃಷ್ಣಾಕೊಳ್ಳದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಅಣೆಕಟ್ಟು ಕಟ್ಟಿದ್ದು ಅದರಲ್ಲಿ ತುಂಗಭದ್ರಾ ಪ್ರಮುಖವಾದದು. ಧೂಪದಾಳ ಅಣೆಕಟ್ಟು ಮತ್ತು ಗೋಕಾಕ್ ಕಾಲುವೆಗಳನ್ನು ಘಟಪ್ರಭಾ ನದಿಗೆ ನಿರ್ಮಿಸಲಾಯಿತು. ಚಿತ್ರದುರ್ಗ ಜಿಲ್ಲೆಯ ವಾಣಿವಿಲಾಸ ಯೋಜನೆಯಿಂದ ನೀರಾವರಿ ಸೌಲಭ್ಯವಾಗುತ್ತಿರುವುದು ಸ್ಮರಣೀಯ.

ಸ್ವಾತಂತ್ರ್ಯ ನಂತರ ೧೯೫೮ರ ಜುಲೈನಲ್ಲಿ ಯೋಜನಾ ಆಯೋಗವು ಬಾಂಬೆ ಕರ್ನಾಟಕಕ್ಕೆ ಮಲಪ್ರಭಾ, ಘಟಪ್ರಭಾ, ಕೃಷ್ಣಾ ಮೇಲ್ದಂಡೆ ಯೋಜನೆಗಳಿಂದ ದೊರೆಯಬಹುದಾದ ನೀರಿನ ಪ್ರಮಾಣವನ್ನು ಲೆಕ್ಕ ಹಾಕಿತು. ಕೃಷ್ಣಾ ನದಿಯಿಂದ ಈ ರೀತಿ ಉಪಯೋಗವಾಗುತ್ತದೆ :

| | | | |
|---|---|---|---|
| ಬಾಂಬೆ | ೪೧೪ ಟಿ.ಎಂ.ಸಿ. | ೨೪% | ೪೪% |
| ಹೈದರಾಬಾದ್ | ೪೬೦ ಟಿ.ಎಂ.ಸಿ. | ೨೬% | ೩೧% |
| ಮದ್ರಾಸ್ | ೭೬೦ ಟಿ.ಎಂ.ಸಿ. | ೪೪% | ೧೬% |
| ಮೈಸೂರು | ೧೦೮.೫ ಟಿ.ಎಂ.ಸಿ. | ೬% | ೯% |
| | ೧೭೪೪.೫ ಟಿ.ಎಂ.ಸಿ. | ೧೦೦% | ೧೦೦% |

ಒಟ್ಟಾರೆ ೧೯೫೧ರ ಒಪ್ಪಂದದಂತೆ ಮಹಾರಾಷ್ಟ್ರ ೨೮೬, ಕರ್ನಾಟಕ ೪೭೬ ಮತ್ತು ಆಂಧ್ರಪ್ರದೇಶ ೯೮೩ ಟಿ.ಎಂ.ಸಿ. ನೀರನ್ನೂ (೧೭೪೫) ಬಳಸಿಕೊಳ್ಳಲು ತೀರ್ಮಾನಿಸಿದವು. ಹೀಗೆ ಅನೇಕ ಒಪ್ಪಂದಗಳು ಪ್ರಯೋಜನಕ್ಕೆ ಬಾರದೇ ಆರ್. ಎಸ್. ಬಚಾವ್‌ವತ್ ತೀರ್ಪಿಗೆ ಎರಡು ರಾಜ್ಯಗಳು ಮಣಿಯಬೇಕಾಯಿತು. ಹೀಗಾಗಿ ಮೇಲಿನಂತೆ ಕರ್ನಾಟಕ ತನ್ನ ಪಾಲನ್ನು ಪಡೆದುಕೊಂಡು ಅನಂತರ ಬದಲಾಯಿತು. ಏಕೀಕರಣದ ನಂತರ ಜಲಸಮಸ್ಯೆ ಚಳವಳಿ ನಾನಾ ಬಗೆಯಾಗಿ ಪರಿಣಾಮ ಬೀರಿದ್ದು ಈ ಎಲ್ಲ ಕಾರಣಗಳಿಂದ ಎನ್ನಬಹುದು.

ಇಂದಿನ ಆಂಧ್ರದ ಆಕ್ಷೇಪವೆಂದರೆ : ಕೃಷ್ಣಾ ಮೇಲ್ದಂಡೆ ಯೋಜನೆಯ ಅಣೆಕಟ್ಟಿನ ಎತ್ತರವನ್ನು ಹೆಚ್ಚಿಸುವ ಕರ್ನಾಟಕದ ಪ್ರಯತ್ನವನ್ನು ವಿಫಲಗೊಳಿಸುವುದಾಗಿದೆ. ೨೦೦೦ ಮೇ ೩೧ರ ಒಳಗೆ ಯೋಜನೆ ಮುಗಿದು ೧೭೩ ಟಿ.ಎಂ.ಸಿ. ಪಡೆಯಬೇಕು. ಬಚಾವತ್ ತೀರ್ಪಿಗಿದು ಅನುಗುಣವಾಗಿದೆ. ಆದರೆ ಆಂಧ್ರ ಈ ತೀರ್ಪನ್ನು ಉಲ್ಲಂಘಿಸಿ ಶ್ರೀಶೈಲಂ ನಾಲ ಸೇರಿದಂತೆ ನಾಲ್ಕಾರು ಹೊಸ ನೀರಾವರಿ ಯೋಜನೆಗಳನ್ನು ಕೈಗೊಂಡಿದೆ. ಮಹತ್ತರವಾದ ತೆಲುಗು-ಗಂಗಾ ಯೋಜನೆಯಿಂದ ತೀರ್ಪು ಉಲ್ಲಂಘಿಸಿದರೂ, ಆಂಧ್ರದ ಕ್ರಮವನ್ನು ನ್ಯಾಯಾಲಯ ಬಹಿಷ್ಕರಿಸಿಲ್ಲ. ಮತ್ತೆ ಮುಟ್ಟುಗೋಲು ಹಾಕಲು ಸಂಘಟನೆಗಳು ಮುಂದಾಗಿಲ್ಲ. ಕೇವಲ ಅಂತಃಕಲಹದಂತೆ ಕಂಡುಬರುತ್ತದೆ. ಇದರ ತೀರ್ಪು ಉಚ್ಚನ್ಯಾಯಾಲಯದಲ್ಲಿದ್ದು, ಯಥಾಸ್ಥಿತಿ ಕಾಪಾಡಿಕೊಂಡು ಬರಲು ತಿಳಿಸಲಾಗಿದೆ. ಈ ಮಧ್ಯೆ ಕೇಂದ್ರ ಸರ್ಕಾರ ಸುಪ್ರೀಂ ಕೋರ್ಟಿಗೆ ಪ್ರಮಾಣ ಪತ್ರ ಸಲ್ಲಿಸಿರುವುದರಿಂದ ಸಮಸ್ಯೆ ಉಲ್ಬಣಗೊಂಡಿದೆ. ಆಯೋಗದ ತೀರ್ಮಾನದಂತೆ ಆಂಧ್ರ ಮತ್ತು ಕರ್ನಾಟಕ ಸೇರಿ ಒಮ್ಮತಕ್ಕೆ ಬರಬೇಕಾಗಿದೆ. ಇಂದು ಸಣ್ಣ ನೀರಾವರಿಯಲ್ಲಿಯೇ ಹೆಚ್ಚಿನ ಸಮಸ್ಯೆಗಳು ಉದ್ಭವಿಸುತ್ತವೆ. ಉದಾ: ಭದ್ರಾ, ಕಾರಂಜಾ ಇತ್ಯಾದಿ.

ಏಕೀಕರಣ ಪೂರ್ವದಲ್ಲಿ ನೀರಿಗಾಗಿ ಹೋರಾಟಗಳಿದ್ದರೂ, ಅವು ಜನಮನ್ನಣೆ ಗಳಿಸಲಿಲ್ಲ. ಸೈದ್ಧಾಂತಿಕ ಚೌಕಟ್ಟು ದೊರೆತಾಗ ಸರ್ಕಾರ, ನ್ಯಾಯಾಲಯ, ಅಂತರಾಜ್ಯ ಮತ್ತು ರೈತರ ನಡುವೆ ಒಪ್ಪಂದಗಳಾದವು. ಅಣೆಕಟ್ಟುಗಳಿಂದ ಹುಟ್ಟಿದ ವಿವಾದಗಳಿಗೆ ನ್ಯಾಯಾಲಯಗಳು ತೀರ್ಪು ನೀಡಿ, ಸಮಸ್ಯೆ ಬಗೆಹರಿಸುತ್ತವೆ. ಆದರೆ ಕರ್ನಾಟಕದಲ್ಲಿ ಕೃಷ್ಣಾ, ಕಾವೇರಿಗಳದು ಇನ್ನೂ ಬಗೆಹರಿದಿಲ್ಲ.

ರಾಜ್ಯದಲ್ಲಿ ಹೆಚ್ಚು ಚಳವಳಿಗಳು ನಡೆಯುವುದು ಕುಡಿಯುವ ನೀರಿಗಾಗಿ. ಇದು ಪ್ರಚಲಿತ ಮತ್ತು ಸಂಭವನೀಯ ಚಳವಳಿಗಳಲ್ಲಿ ಪ್ರಮುಖವಾದ ಘಟ್ಟ.

ಒಟ್ಟಾರೆಯಾಗಿ ಕರ್ನಾಟಕದ ಜಲಸಂಬಂಧಿ ಚಳವಳಿಗಳು ಯಾರೊಬ್ಬರ ಪರವಾಗಿರದೆ, ಸರ್ಕಾರದ ವಿರುದ್ಧ ಮತ್ತು ಅಂತರ ರಾಜ್ಯ ಸಮಸ್ಯೆಯಾದರೆ, ಆ ರಾಜ್ಯ

